# ಮತತ್ರಯಸಮೀಕ್ಷಾ

## ಶಂಕರ, ರಾಮಾನುಜ, ಮಧ್ವದರ್ಶನಗಳ ಕಿರುಪರಿಚಯ



ಲೇಖಕರು: ಡಾ॥ ಎ. ವಿ. ನಾಗಸಂಪಿಗೆ

ಶ್ರೀರಾಘವೇಂದ್ರ ದರ್ಶನ ಕೇಂದ್ರ

ಆಶ್ರಯ: ಶ್ರೀರಾಘವೇಂದ್ರ ಸ್ವಾಮಿಗಳ ಮಠ, ಕೆಂಗೇರಿ ಉಪನಗರ, ಬೆಂಗಳೂರು

# ಶ್ರೀ ರಾಘವೇಂದ್ರ ದರ್ಶನ ಕೇಂದ್ರ

ವಿಜಯನಗರ, ಬೆಂಗಳೂರು-560 040, ದೂರವಾಣಿ: 2340 2528

ಸ್ಥಾಪನೆ 1993

## ಗ್ರಂಥ ಪ್ರಕಾಶನ - 1994ರಿಂದ

1. ಶ್ರೀವೆಂಕಟೇಶ ವೈಭವವ್ (ತಿರುಮಲ ತಿರುಪತಿಯ ಶ್ರೀನಿವಾಸನ ಮಹಿಮೆ) 4ನೆಯ ಮುದ್ರಣ
2. ಶ್ರೀವಿಷ್ಣುಸಹಸ್ರನಾಮ ಮತ್ತು ಇತರ ಸ್ತೋತ್ರಗಳು ಎರಡನೆಯ ಮುದ್ರಣ
3. ಸದಾಚಾರ ವೈಭವವ್ (ಹಬ್ಬ ಹರಿದಿನಗಳ ಕೈ ಪಿಡಿ) ಎರಡನೆಯ ಮುದ್ರಣ
4. ಸುಂದರಕಾಂಡ (ಶ್ರೀಕೇಶವ ನಾಮ-ಮಧ್ವನಾಮ ಸಹಿತ)
5. ವಿಘ್ನೇಶ್ವರ ಸ್ತೋತ್ರ ಸಂಧಿ (ಹರಿಕಥಾಮೃತಸಾರದಿಂದ-ಅರ್ಥಸಹಿತ)
6. ಮಧ್ವಸಿದ್ಧಾಂತದಲ್ಲಿ ಶಿವನ ಸಂಸಾರ
7. ಶ್ರೀವಿಷ್ಣುಸಹಸ್ರನಾಮ (ಅರ್ಥಸಹಿತ) ಬಿಜಾಪುರದ 'ಗೀತಾ ಪ್ರಕಾಶನ'ದ ಸಹಯೋಗ)
8. ಶ್ರೀರಾಘವೇಂದ್ರ ಸ್ವಾಮಿಗಳ ಸಂದೇಶ (ಬೃಂದಾವನ ಪ್ರವೇಶದ ಮುನ್ನ)
9. ಶ್ರಾದ್ಧಕರ್ಮ (ತಿಲತರ್ಪಣವಿಧಿ ಸಹಿತ) ಎರಡನೆಯ ಮುದ್ರಣ
10. ದಶಾವತಾರಸ್ತುತಿ ಮತ್ತು ಅಣುಮಧ್ವವಿಜಯ (ಅರ್ಥಸಹಿತ)

# ಮತತ್ರಯಸಮೀಕ್ಷಾ

## ಶಂಕರ-ರಾಮಾನುಜ-ಮಧ್ವ ದರ್ಶನಗಳ ಕಿರು ಪರಿಚಯ

ಲೇಖಕರು :

**ಡಾ। ಎ.ವಿ. ನಾಗಸಂಪಿಗೆ**

ನಿರ್ದೇಶಕರು, ಪೂರ್ಣಪ್ರಜ್ಞ ಸಂಶೋಧನ ಮಂದಿರ, ಬೆಂಗಳೂರು

ಪ್ರಕಾಶಕರು :

**ಶ್ರೀ ರಾಘವೇಂದ್ರ ದರ್ಶನ ಕೇಂದ್ರ**

ವಿಜಯನಗರ, ಬೆಂಗಳೂರು-560 040

ದೂರವಾಣಿ : 2340 2528

2008

**MATA-TRAYA-SAMEEKSHA**
**Teachings of Shankara, Ramanuja and Madhvacharya, compiled by Dr. A.V. Nagasampige and published by Sri Raghavendra Darshana Kendra, Vijayanagar, Bangalore-40**

By : **Dr. A.V. Nagasampige**
**Director,**
**Poornaprana Samshodhana Mandiram,**
**Bangalore**

Published by : **Sri Raghavendra Darshana Kendra**
Under the auspices of
**Sri Raghavendra Swamy Mutt,**
Kengeri Upanagara, Bangalore-560 060 (India)

Total Pages : xxviii + 252



First Edition : April 2008

Copies : 2,000

Price :

Typesetting : Poornaprajna Samshodhana Mandiram,
Bangalore

Printed at : **Rashtrotthana Mudrana**
Bangalore

# ಶ್ರೀಶ್ರೀ ವಿಶ್ವೇಶತೀರ್ಥ ಶ್ರೀಪಾದರು

## ಶ್ರೀ ಪೇಜಾವರ ಅಧೋಕ್ಷಜ ಮಠ, ಉಡುಪಿ

ಪೂರ್ಣಪ್ರಜ್ಞವಿದ್ಯಾಪೀಠ, ಕತ್ತರಿಗುಪ್ಪ ಮುಖ್ಯರಸ್ತೆ, ಬೆಂಗಳೂರು-28

ದಿನಾಂಕ: 24-03-2008

# ಅನುಗ್ರಹ ಸಂದೇಶ

ರಾಘವೇಂದ್ರದರ್ಶನ ಕೇಂದ್ರವು ಪ್ರಕಾಶನ ಮಾಡಿಸಲಿರುವ 'ಮತ ತ್ರಯ ಸಮೀಕ್ಷಾ' ಕೃತಿಯನ್ನು ಅಲ್ಲಲ್ಲಿ ನೋಡಿದೆವು. ಪ್ರತಿಯೊಂದು ದಾರ್ಶನಿಕ ಪರಂಪರೆಯವರು ತಮ್ಮ ಆಚಾರ್ಯಪುರುಷರು ಮತ್ತು ಸಿದ್ಧಾಂತಗಳ ಬಗ್ಗೆ ಆದರವನ್ನು ಬೆಳೆಸಿಕೊಳ್ಳುವುದರ ಜೊತೆಗೆ ಇತರ ಸಿದ್ಧಾಂತಗಳು ಮತ್ತು ಆಚಾರ್ಯಪರಂಪರೆಯ ಕೊಡುಗೆಯನ್ನೂ ಅರಿಯುವುದು ಅತ್ಯಂತ ಆವಶ್ಯಕವಾಗಿದೆ.

ವಿಭಿನ್ನಾಂಶಗಳ ಕಡೆಗೆ ಮಾತ್ರವೇ ಗಮನಹರಿಸುವುದಕ್ಕಿಂತ ಸಮಾನಾಂಶಗಳನ್ನು ಗುರುತಿಸಿ ಪ್ರೇಮ ಸೌಹಾರ್ದದಿಂದ ಬಾಳುವುದು ಇಂದಿಗೆ ಅತ್ಯಂತ ಪ್ರಸ್ತುತವಿದೆ. ತ್ರಿಪುರದಹನ ಕಾಲದಲ್ಲಿ ಬ್ರಹ್ಮ-ವಿಷ್ಣು-ಮಹೇಶ್ವರರು ಒಗ್ಗಟ್ಟಾಗಿ ಆಸುರೀಶಕ್ತಿಯನ್ನು ದಮನಮಾಡಿದಂತೆ ಮತತ್ರಯದ ಬುದ್ಧಿಜೀವಿಗಳೊಂದೆಡೆ ಸೇರಿ ನಾಸ್ತಿಕ್ಯ ಹಾಗೂ ವಿಜ್ಞಾನದ ಸವಾಲುಗಳನ್ನು ಎದುರಿಸಬೇಕಿದೆ. ಈ ಹಿನ್ನೆಲೆಯಲ್ಲಿ ಮೂರು ದರ್ಶನಗಳ ಗುಣಾಂಶಗಳ ಪರಿಚಯ ಮಾಡಿಸಲು ರಚಿಸಿದ ಡಾ। ನಾಗಸಂಪಿಗೆಯವರ ಈ ಕೃತಿಯನ್ನು ನಾವು ಪ್ರೀತಿಯಿಂದ ಅಭಿನಂದಿಸುತ್ತೇವೆ.

ರಾಘವೇಂದ್ರದರ್ಶನಕೇಂದ್ರವು ಮಾಧ್ವತತ್ತ್ವ ಪ್ರಸಾರದ ಜೊತೆಗೆ ಸಮಗ್ರ ಬ್ರಾಹ್ಮಣ ಸಮಾಜ ಮತ್ತು ಹಿಂದೂ ಸಮಾಜದ ಅಭ್ಯುದಯಕ್ಕಾಗಿ ಯೋಜನೆ ಹಾಕಿಕೊಂಡು ಕಾರ್ಯಪ್ರವೃತ್ತವಾಗಿರುವುದು ನಮಗೆ ತುಂಬ ಸಂತೋಷ ತಂದಿದೆ.

ಪಾಠ ಪ್ರವಚನ -ಸಂಶೋಧನೆ- ಶಾಸ್ತ್ರಗ್ರಂಥಗಳ ಅನುವಾದಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡ 30ಕ್ಕೂ ಹೆಚ್ಚು ಕೃತಿಗಳನ್ನು ಹೊರತಂದ ಡಾ। ಆನಂದತೀರ್ಥ ನಾಗಸಂಪಿಗೆಯವರನ್ನು ನಾವು ತುಂಬುಹೃದಯದಿಂದ

ಆಶೀರ್ವದಿಸುತ್ತೇವೆ. ಈ ಕೃತಿಯಲ್ಲಿ ಅವರ ವ್ಯಾಪಕ ಅಧ್ಯಯನ ಪ್ರತಿಫಲನಗೊಂಡಿದೆ. ಪ್ರಮಾಣ-ಪ್ರಮೇಯಗಳನ್ನು ತಿಳಿಯಾಗಿ ವಿವರಿಸಲು ಉತ್ತಮ ಪ್ರಯತ್ನ ಮಾಡಿದ್ದಾರೆ ಸುಜನರು ಇದರಿಂದ ಉತ್ತಮ ಜ್ಞಾನ ಪಡೆಯುವಂತಾಗಲಿ ಎಂದು ಆಶಿಸುತ್ತೇವೆ. ರಾಘವೇಂದ್ರ ದರ್ಶನ ಕೇಂದ್ರದಿಂದ ಇನ್ನೂ ಹೆಚ್ಚಿನ ವಾಙ್ಮಯ ಹಾಗೂ ಸಾಮಾಜಿಕ ಸೇವೆ ನೆರವೇರಲೆಂದು ನಮ್ಮ ಆರಾಧ್ಯ ಮೂರ್ತಿ ಶ್ರೀಕೃಷ್ಣನನ್ನು ಪ್ರಾರ್ಥಿಸುತ್ತೇವೆ.

**ಶ್ರೀಶ್ರೀ ವಿಶ್ವೇಶತೀರ್ಥಶ್ರೀಪಾದರು**

# ಶ್ರೀಶ್ರೀ ರಂಗಪ್ರಿಯ ಶ್ರೀಪಾದರು

ಅಷ್ಟಾಂಗಯೋಗ ವಿಜ್ಞಾನ ಮಂದಿರ, ಬೆಂಗಳೂರು


ದಿನಾಂಕ: 25-03-2008

## ಸಂದೇಶ

ಶ್ರೀ ರಾಘವೇಂದ್ರದರ್ಶನ ಕೇಂದ್ರವು ಪ್ರಕಾಶಕ್ಕೆ ತರುತ್ತಿರುವ 'ಮತತ್ರಯ ಸಮೀಕ್ಷಾ' ಎಂಬ ಕೃತಿರತ್ನವನ್ನು ನಾವು 'ಸ್ಥಾಲೀಪುಲಾಕ'ನ್ಯಾಯದಿಂದ ಅಲ್ಲಲ್ಲಿ ಸಮೀಕ್ಷೆ ಮಾಡಿದ್ದೇವೆ. ನಾವು ಸಮೀಕ್ಷೆ ಮಾಡಿರುವ ಎಲ್ಲ ಭಾಗಗಳು ಸುಪಕ್ವವಾದ ಪರಮಾನ್ನವಾಗಿವೆ. ಭಗವಂತನ ಆರೋಗಣೆಗೆ ಯೋಗ್ಯವಾಗಿದೆಯೆಂದು ನಮಗೆ ಪ್ರಾಮಾಣಿಕವಾಗಿ ಕಂಡು ಬಂದಿದೆ. ಮಂಗಲದೇವತೆಗೆ ಮಾಂಗಲ್ಯವಾಗಿರುವ ಮಹಾಪ್ರಭುವಿನ ಸ್ಮರಣೆಯೊಡನೆ ಈ ಕೃತಿಗೆ ಮಂಗಳಾಶಾಸನ ಮಾಡುತ್ತಿದ್ದೇವೆ.

ಪ್ರಕೃತ ಮತತ್ರಯವಾದ ಅದ್ವೈತ-ವಿಶಿಷ್ಟಾದ್ವೈತ-ದ್ವೈತಗಳಲ್ಲಿ ಅನೇಕ ವೈಷಮ್ಯಗಳು ಸಾಮಾನ್ಯದೃಷ್ಟಿಗೆ ಕಂಡು ಬಂದರೂ ಎಲ್ಲವೂ ಸತ್ಯಾನ್ವೇಷಣೆ-ಸತ್ಯಸಾಕ್ಷಾತ್ಕಾರಗಳಲ್ಲಿ ತಾತ್ಪರ್ಯವನ್ನು ಹೊಂದಿವೆ. ಧರ್ಮವಿರೋಧಿಗಳಾದ ನಾಸ್ತಿಕಮತಗಳನ್ನು ಖಂಡಿಸಿ ಭಗವಂತನ ಅಸ್ತಿತ್ವವನ್ನು ಮಂಡಿಸುತ್ತವೆ.

ದಯೆ-ಅನಸೂಯೆ ಮುಂತಾದ ಆತ್ಮಗುಣಗಳನ್ನು ಸದಾಚಾರ ಸಂಪತ್ತನ್ನು ಮತ್ತು ಇವುಗಳಿಂದ ಕೂಡಿದ ಭಗವಂತನ ಉಪಾಸನೆಯನ್ನು ವಿಚಾರಪೂರ್ವಕವಾಗಿ ನಿರೂಪಿಸಿ ಲೋಕಕಲ್ಯಾಣವನ್ನು ಸಾಧಿಸುತ್ತವೆ. ಆದರೆ ಆಯಾ ಮತ ಪ್ರಚಾರಕರಲ್ಲಿ ಬಹುಮಂದಿ ತಮ್ಮ ಮತಗಳನ್ನು ಮತ್ತು ಇತರ ಮತಗಳನ್ನು ಪ್ರಾಮಾಣಿಕವಾಗಿ ಅಧ್ಯಯನ ಮಾಡುವುದಿಲ್ಲ. ಅಧ್ಯಯನ ಮಾಡುವಾಗಲೂ ಬಣ್ಣದ ಕನ್ನಡಕದಿಂದ ಅವುಗಳನ್ನು ನೋಡುತ್ತಾ ರಾಗ- ದ್ವೇಷದಿಂದ ಪ್ರೇರಿತರಾಗಿ ಪರಸ್ಪರ ಕಲಹ-ಕಲ್ಲು ತೂರಾಟಗಳಲ್ಲಿ ಕಾಲ ಕಳೆಯುತ್ತಿದ್ದಾರೆ. ಈ ಸ್ಥಿತಿಯು ತೊಲಗಬೇಕಾಗಿದ್ದರೆ, ಮೂರೂ ಮತಗಳನ್ನು ಪೂರ್ವಾಗ್ರಹರಹಿತರಾಗಿ ಅಧ್ಯಯನ ಮಾಡಬೇಕು. ಸಹಾನುಭೂತಿಯಿಂದ ಪರಿಶೀಲಿಸಬೇಕು. ಎಲ್ಲರೂ ಒಂದುಗೂಡಿ ಧರ್ಮವಿರೋಧಿಗಳನ್ನು ಪ್ರತಿಭಟಿಸಿ ಅವರಿಗೆ ಸರಿಯಾದ ತಿಳುವಳಿಕೆಯನ್ನು ನೀಡಬೇಕು. ಆತ್ಮಕಲ್ಯಾಣವನ್ನು ಹಾಗೂ ಲೋಕಕಲ್ಯಾಣವನ್ನು ಸಾಧಿಸಬೇಕು.

ಈ ದಿಸೆಯಲ್ಲಿ ವಿದ್ವನ್ಮಣಿಗಳೂ, ಆತ್ಮಗುಣಸಂಪನ್ನರೂ ಆಗಿರುವ ಡಾ। ಆನಂದತೀರ್ಥ ನಾಗಸಂಪಿಗೆಯವರು ಈ ಕೃತಿಯಲ್ಲಿ ಅನುಸರಿಸಿರುವ ಸನ್ಮಾರ್ಗವು ಎಲ್ಲರಿಗೂ ಆದರ್ಶವಾಗಿರಬೇಕು.

ಒಂದು ವಿಷಯ ನೆನಪಿರಬೇಕು- ಈ ಮತಗಳ ಸ್ಥಾಪಕರಾದ ಶ್ರೀಶಂಕರ-ಶ್ರೀರಾಮಾನುಜ ಮತ್ತು ಶ್ರೀಮದಾನಂದತೀರ್ಥರೆಂಬ ಮೂವರು ಆಚಾರ್ಯರು ಆತ್ಮಗುಣಸಂಪನ್ನರು ಬ್ರಹ್ಮಭಾವದಲ್ಲಿ ನೆಲೆಗೊಂಡವರು. ಭಾರತೀಯ ಸಂಸ್ಕೃತಿಯ ಸಂರಕ್ಷಣೆ-ಸಂವರ್ಧನಗಳಲ್ಲಿ ಮೂವರು ಆಚಾರ್ಯರ ಪಾತ್ರಗಳೂ ಸಮಾನವಾಗಿವೆ. ಭಗವಾನ್ ಶಂಕರರು, ಪ್ರಬಲವಾಗಿದ್ದ ನಾಸ್ತಿಕಮತಗಳಿಂದ ಭಗ್ನಪ್ರಾಯವಾಗಿದ್ದ ಭಾರತೀಯ ಸಂಸ್ಕೃತಿಯ ಶಿಲಾಪೀಠವನ್ನು ಎತ್ತಿ ನಿಲ್ಲಿಸಿದರು. ಭಗವದ್ರಾಮಾನುಜರು ಭಗವಂತನ ನಾನಾಮುಖವಾದ ಉಪಾಸನೆಗಳಿಗೆ ಕೇಂದ್ರವಾಗಿರುವ ದೇವಾಲಯಗಳ ನಿರ್ಮಾಣ-ರಕ್ಷಣೆ-ಸದುಪಯೋಗಗಳನ್ನು ಪ್ರಮಾಣಿಸುವ ಆಗಮುಗಳನ್ನು ಉದ್ಧಾರ ಮಾಡಿದವರು. ಶ್ರೀಮದಾನಂದತೀರ್ಥ ಭಗವತ್ಪಾದರು ಭಿಕ್ಷೆಯ ನೆಪದಲ್ಲಿ ತಾವೇ ಮನೆಮನೆಗಳಿಗೆ ಹೋಗಿ ಸದಾಚಾರಗಳನ್ನು, ಶ್ರೀಭಗವದುಪಾಸನೆಯನ್ನೂ ಸರಳ ರೀತಿಯಲ್ಲಿ ಬೋಧಿಸುವ ದಾಸಪಂಥದ ಉಗಮ ಮತ್ತು ಬೆಳವಣಿಗೆಗಳಿಗೆ ಕಾರಣರಾದವರು. ಈ ಕಾರಣಗಳಿಂದ ಎಲ್ಲ ಭಾರತೀಯ ಸಂಸ್ಕೃತಿಯ ಉಪಾಸಕರು ಈ ಮೂವರು ಆಚಾರ್ಯರ ವಿಷಯದಲ್ಲಿ ಕೃತಜ್ಞರಾಗಿರಬೇಕು. ಅವರನ್ನು ಭಕ್ತಿ-ಶ್ರದ್ಧೆಗಳಿಂದ ಸಂದರ್ಶಿಸಬೇಕು. ಅವರ ಗ್ರಂಥಗಳನ್ನು ಸಹಾನುಭೂತಿಯಿಂದಲೂ ಭಕ್ತಿ-ಶ್ರದ್ಧೆಗಳಿಂದಲೂ ಕಾಪಾಡಿಕೊಂಡು ಅವುಗಳ ಸದುಪಯೋಗ ಪಡೆಯಬೇಕು.

ಡಾ। ಆನಂದತೀರ್ಥ ನಾಗಸಂಪಿಗೆಯವರ ಪ್ರಕೃತ ಕೃತಿಯು ಇಂತಹ ಮನೋಧರ್ಮ ಮತ್ತು ಆಚರಣೆಗಳಿಗೆ ಪ್ರೇರಣೆ ನೀಡುತ್ತದೆ. ಅವರು ಮಾಡಿರುವ ಮತತ್ರಯಾಚಾರ್ಯರ ಗ್ರಂಥಗಳ ಅಧ್ಯಯನ-ವಿಶ್ಲೇಷಣೆಗಳು ಅದ್ಭುತವಾಗಿವೆ. ಅವರ ಜೀವಿತಕಾರ್ಯಗಳು ಶ್ರೀಹರ್ಷನು ಹೇಳಿರುವ 'ಅಧೀತಿ-ಬೋಧ-ಆಚರಣ-ಪ್ರಚಾರಣ'ಗಳಿಂದ ಸುರಭಿತವಾಗಿ ಸಫಲವಾಗಲಿ.

ಇತಿ ನಾರಾಯಣಸ್ಮರಣೆಗಳು

**ಶ್ರೀಶ್ರೀ ರಂಗಪ್ರಿಯಶ್ರೀಪಾದಶ್ರೀಃ**

ವಿದ್ವಾನ್ ಶೇಷಾಚಲ ಶರ್ಮಾ
ವಾಚಸ್ಪತಿ, ರಾಷ್ಟ್ರಪ್ರಶಸ್ತಿ ಹಾಗೂ ರಾಜ್ಯಪ್ರಶಸ್ತಿ ಪುರಸ್ಕೃತರು
ಬೆಂಗಳೂರು

ದಿನಾಂಕ: 24-03-2008

# ಸಂದೇಶ

ಡಾ। ಎ.ವಿ. ನಾಗಸಂಪಿಗೆಯವರು ಅದ್ವೈತದರ್ಶನಸಾರವನ್ನು ಸಂಗ್ರಹಿಸಿರುವ ಪ್ರಬಂಧವನ್ನು ಆಮೂಲಾಗ್ರವಾಗಿ ಪಠಿಸಿ ಸಂತೋಷದಿಂದ ಈ ಪ್ರಶಸ್ತಿಯನ್ನು ಬರೆಯುತ್ತಿದ್ದೇವೆ.

ಮೊದಲಿಗೆ ದರ್ಶನದ ಸಾರವನ್ನು ಸಂಕ್ಷೇಪವಾಗಿ ಬರೆದು ಪ್ರಮುಖ ಕೃತಿಕಾರರ ಬಗ್ಗೆ ಮಾಹಿತಿಯನ್ನು ನೀಡಿರುವುದು ತುಂಬ ಉಪಕಾರಿಯಾಗಿದೆ.

ಶ್ರೀ ಶಂಕರಾಚಾರ್ಯರ ಸೂತ್ರಭಾಷ್ಯ, ಗೌಡಪಾದಕಾರಿಕೆ ಹಾಗೂ ಶಂಕರಾಚಾರ್ಯರ ಭಾಷ್ಯ, ಪಂಚಪಾದಿಕಾ, ಭಾಮತೀವ್ಯಾಖ್ಯಾನ, ಸಂಕ್ಷೇಪ ಶಾರೀರಕ ಮೊದಲಾದ ಗ್ರಂಥಗಳಿಂದ ಉಲ್ಲೇಖಗಳನ್ನು ಸಂಗ್ರಹಿಸಿ ಅದ್ವೈತ ದರ್ಶನವನ್ನು ಸಮರ್ಥವಾಗಿ ಪ್ರತಿಪಾದಿಸಿದ್ದಾರೆ. ಸ್ವತಃ ದ್ವೈತ ಸಂಪ್ರದಾಯಕ್ಕೆ ಸೇರಿದವರಾದ ಡಾ। ಎ.ವಿ. ನಾಗಸಂಪಿಗೆಯವರು ಹೃದಯದ ಔದಾರ್ಯದಿಂದ ಅದ್ವೈತದರ್ಶನವನ್ನು ಪ್ರಮಾಣಬದ್ಧವಾಗಿ ಪ್ರತಿಪಾದಿಸಿರುವುದು ತುಂಬ ಸಂತೋಷದಾಯಕವಾದ ಸಂಗತಿಯಾಗಿದೆ. ಇದಕ್ಕಾಗಿ ನಾನು ಡಾ। ನಾಗಸಂಪಿಗೆಯವರನ್ನು ತುಂಬು ಹೃದಯದಿಂದ ಪ್ರಶಂಸಿಸುತ್ತೇನೆ.

ವಿದ್ವಾನ್ ಶೇಷಾಚಲ ಶರ್ಮಾ

# ಪ್ರಕಾಶಕರ ನುಡಿ

ಶ್ರೀರಾಘವೇಂದ್ರಸ್ವಾಮಿಗಳವರ ಕೃಪೆಯ ಮೂಲಕ, ಶ್ರೀಹರಿ-ವಾಯುಗಳ ಅನುಗ್ರಹ ಸಂಪಾದನೆಯೇ ನಮ್ಮ ಗುರಿ. ಕೆಂಗೇರಿ ಉಪನಗರದ ಶ್ರೀರಾಘವೇಂದ್ರಸ್ವಾಮಿಗಳವರ ಮಠದವರೇ ನಮ್ಮ ಆಶ್ರಯದಾತರು. 1994 ರಲ್ಲಿ ಗ್ರಂಥಪ್ರಕಾಶನವನ್ನು ಪ್ರಾರಂಭಿಸಿದ ನಾವು ಇದುವರೆಗೆ 10 ಗ್ರಂಥಗಳನ್ನು ಪ್ರಕಟಿಸಿದ್ದೇವೆ. (ಅವುಗಳಲ್ಲಿ ಅನೇಕ ಮರು ಮುದ್ರಣ ಗಳಾಗಿವೆ) ಈಗ, ನಮ್ಮ 11ನೇ ಗ್ರಂಥವಾಗಿ ಈ 'ಮತತ್ರಯ ಸಮೀಕ್ಷಾ' ಎಂಬ ಗ್ರಂಥವನ್ನು ಪ್ರಕಟಿಸುತ್ತಿದ್ದೇವೆ.

ಶಂಕರ-ರಾಮಾನುಜ-ಮಧ್ವರಂತಹ ಅಸಾಧಾರಣ ಪ್ರತಿಭಾಶಾಲಿಗಳು ಪ್ರಚಾರ ಮಾಡಿದ ಸಿದ್ಧಾಂತಗಳ ಪರಿಚಯ, ಎಲ್ಲ ವೇದಾಂತ ಜಿಜ್ಞಾಸುಗಳಿಗೆ, ಒಂದೇ ಗ್ರಂಥದಲ್ಲಿ ದೊರೆತರೆ, ತುಲನಾತ್ಮಕವಾಗಿ ಅಧ್ಯಯನ ಮಾಡಲು ಅನುಕೂಲವಾಗುತ್ತದೆ ಎಂಬ ದೃಷ್ಟಿಯಿಂದ ಈ ಗ್ರಂಥವನ್ನು ಪ್ರಕಟಿಸಿದ್ದೇವೆ. ಭಗವದ್ ಭಕ್ತರ ಅಧ್ಯಯನಕ್ಕೆ ಇದು ಸಹಕಾರಿಯಾದಲ್ಲಿ ನಾವು ಧನ್ಯರು!

ವಿಷಯ ಪ್ರತಿಪಾದನೆಯಲ್ಲಿ, ನಿರೂಪಣಾ ವಿಧಾನದಲ್ಲಿ, ಏನಾದರೂ ಲೋಪದೋಷಗಳಿದ್ದಲ್ಲಿ ಸಹೃದಯರಾದ ಪಂಡಿತರು, ಆಧಾರಸಹಿತವಾಗಿ, ಬರವಣಿಗೆಯ ಮೂಲಕ ನಮಗೆ ತಿಳಿಸಿದಲ್ಲಿ, ಮುಂದಿನ ಮುದ್ರಣದಲ್ಲಿ ಸೂಕ್ತ ತಿದ್ದುಪಡಿಗಳನ್ನು ಮಾಡಲು ನಾವು ಸದಾ ಸಿದ್ಧರಿದ್ದೇವೆ.

ಈ ಗ್ರಂಥ ಪ್ರಕಟಣೆಯ ಕಾರ್ಯದಲ್ಲಿ, ನಮಗೆ ಹಲವಾರು ಪಂಡಿತರು, ದಾನಿಗಳು ಹಾಗೂ ಸಜ್ಜನ ಬಂಧುಗಳು ಸಹಾಯ-ಸಹಕಾರಗಳನ್ನು ನೀಡಿದ್ದಾರೆ. ಅಂತಹ ಭಗವದ್ ಭಕ್ತರ ಸಹಕಾರವೇ ನಮಗೆ ಶ್ರೀರಕ್ಷೆ. ಅವರುಗಳಿಗೆ ಪ್ರತಿಯಾಗಿ ನಾವು ಏನನ್ನೂ ನೀಡಲಾರೆವು. ತುಂಬು ಹೃದಯ ದಿಂದ ಅವರುಗಳಿಗೆ ನಮ್ಮ ಕೃತಜ್ಞತೆಗಳನ್ನು ಅರ್ಪಿಸುವುದಷ್ಟೆ ನಮ್ಮಿಂದಾಗುವ ಕೆಲಸ.

ನಮ್ಮ ಕೃತಜ್ಞತೆಗಳನ್ನು ಇವರಿಗೆ ಅರ್ಪಿಸುತ್ತೇವೆ-

1. ನಮ್ಮ ಪ್ರಾರ್ಥನೆಯನ್ನು ಮನ್ನಿಸಿ, ಪೂರ್ಣಪ್ರಜ್ಞ ಸಂಶೋಧನ ಮಂದಿರದ ನಿರ್ದೇಶಕರಾದ ಡಾ। ಎ.ವಿ.ನಾಗಸಂಪಿಗೆ ಅವರು ಈ

ಗ್ರಂಥವನ್ನು ರಚಿಸಿ ಕೊಟ್ಟಿದ್ದಾರೆ. ಹಲವು ದರ್ಶನಗಳನ್ನು ಆಳವಾಗಿ ಅಧ್ಯಯನ ಮಾಡಿರುವ, ಡಾ। ಎ.ವಿ.ನಾಗಸಂಪಿಗೆ ಅವರು, ಬರವಣಿಗೆ ಮತ್ತು ಪ್ರವಚನ ಕಲೆಗಳಲ್ಲಿ ಸಿದ್ಧಹಸ್ತರು. ಅವರ ಬಿಡುವಿಲ್ಲದ ಕಾರ್ಯಭಾರಗಳ ನಡುವೆಯೂ, ನಮ್ಮ ಸಮಯಾ ಸಮಯವರಿಯದ ಬೇಡಿಕೆಗಳನ್ನು, ನಗುಮುಖದಿಂದ ಮನ್ನಿಸಿ, ಈ ಗ್ರಂಥವನ್ನು ರಚಿಸಿಕೊಟ್ಟಿದ್ದಾರೆ. ಅವರಿಗೆ ನಮ್ಮ ಸಾಷ್ಟಾಂಗ ಪ್ರಣಾಮ ಗಳು. ಭಗವದ್‌ಭಕ್ತರು ಹಾಗೂ ಸಹೃದಯರಾದ ಅಂತಹ ಪಂಡಿತರ ಗ್ರಂಥವೊಂದನ್ನು ಪ್ರಕಟಿಸುವ ಸದವಕಾಶ ನಮ್ಮ ಪಾಲಿಗೆ ಬಂದದ್ದು, ನಮ್ಮ ಭಾಗ್ಯವೆಂದೇ ನಮ್ಮ ಭಾವನೆ.

2. ಇಂತಹ ಗ್ರಂಥವನ್ನು ನಾವು ಬರೆಸಿ ಪ್ರಕಟಿಸಬೇಕೆಂಬ ಉದ್ದೇಶದ ಕಾರ್ಯ ಪ್ರಾರಂಭವಾದ ದಿನದಿಂದ, ಇಂದಿನವರೆಗೆ, ನಮಗೆ ಎಲ್ಲ ಹಂತಗಳಲ್ಲಿ ಮಾರ್ಗದರ್ಶನ ಮಾಡಿದ್ದಲ್ಲದೆ, ನಮ್ಮ ಎಲ್ಲ ಕೆಲಸ ಕಾರ್ಯಗಳಲ್ಲಿ ನಮಗಿಂತ ಹೆಚ್ಚು ಶ್ರಮವಹಿಸಿದವರೆಂದರೆ ಪೂರ್ಣಪ್ರಜ್ಞ ವಿದ್ಯಾಪೀಠದ ವೇದಾಂತ ಅಧ್ಯಾಪಕರಾದ ವಿದ್ವಾನ್ ಸಿ.ಹೆಚ್. ಬದರೀನಾಥಾಚಾರ್ಯರು. ಅವರಿಗೆ ನಮ್ಮ ಸಾಷ್ಟಾಂಗ ಪ್ರಣಾಮಗಳು.

3. ಗ್ರಂಥ ಪ್ರಕಾಶನಕ್ಕೆ, ಗ್ರಂಥ ಪ್ರಕಟವಾಗುವ ಮುನ್ನವೇ, ಆರ್ಥಿಕ ಸಹಾಯ ನೀಡಿದ ದಾನಿಗಳಿಗೆ.

4. ಸುಂದರ ಮುಖ ಪುಟವನ್ನು ರಚಿಸಿಕೊಟ್ಟ ಸುಪ್ರಸಿದ್ಧ ಕಲಾಕಾರರಾದ ಶ್ರೀ.ಕೆ.ಎಂ. ಶೇಷಗಿರಿ ಅವರಿಗೆ.

5. ಶ್ರಮಸಾಧ್ಯವಾದ ಡಿ.ಟಿ.ಪಿ.ಕಾರ್ಯವನ್ನು ನಿರ್ವಹಿಸಿದ ವಿ। ವ್ಯಾಸರಾಜ ಜೋಶಿ, ಸಹಕರಿಸಿದ ಶ್ರೀ ಮಂಜುನಾಥ ಮತ್ತು ಪ್ರಾಥಮಿಕ ಕರಡು ಪ್ರತಿ ತಿದ್ದಿದ ವಿದ್ವಾಂಸರಿಗೆ.

6. ಕೆಂಗೇರಿ ಉಪನಗರದ, ಶ್ರೀರಾಘವೇಂದ್ರ ಸೇವಾ ಸಮಿತಿ ಟ್ರಸ್ಟ್‌ನ ಆಡಳಿತ ಮಂಡಳಿಯ ಸದಸ್ಯರಿಗೆ.

7. ನಮ್ಮ ಕೆಲಸ ಕಾರ್ಯಗಳಿಗೆ ಸಂಪೂರ್ಣ ಸಹಕಾರ ನೀಡುತ್ತಿರುವ, ಪೂರ್ಣಪ್ರಜ್ಞ ವಿದ್ಯಾಪೀಠ ಪ್ರತಿಷ್ಠಾನದ ಕಾರ್ಯದರ್ಶಿಗಳಾದ,

ವಿದ್ವಾನ್ ಕೇಶವಾಚಾರ್ಯ ಹಾಗೂ ವಿದ್ವಾನ್ ಲಕ್ಷ್ಮೀನಾರಾಯಣ ಅವರಿಗೆ.

8. ಮುದ್ರಣ ಕಾರ್ಯ ನಿರ್ವಹಿಸಿದ ರಾಷ್ಟ್ರೋತ್ಥಾನ ಪರಿಷತ್ ಮುದ್ರಣ, ಬೆಂಗಳೂರು ಇವರಿಗೆ.

9. ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಸಹಾಯ ಸಹಕಾರಗಳನ್ನು ನೀಡಿದ ಎಲ್ಲ ಕಾರ್ಯಕರ್ತರುಗಳಿಗೆ.

ಭಾರತೀರಮಣ ಮುಖ್ಯ ಪ್ರಾಣಾಂತರ್ಗತನಾದ ಶ್ರೀಹರಿಯು, ನಮ್ಮ ಅನಂತ ಅಪರಾಧಗಳನ್ನು ಕ್ಷಮಿಸಿ, ಸರ್ವದಾ ಸದ್ಬುದ್ಧಿಯನ್ನು ಕೊಟ್ಟು, ಯಾವ ಪ್ರತಿಫಲಾಪೇಕ್ಷೆಯೂ ಇಲ್ಲದೆ, ಅವನ ಪ್ರೀತಿ ಸಂಪಾದನೆಯೊಂದನ್ನೇ ಗುರಿಯಾಗಿಟ್ಟುಕೊಂಡು, ಅವನ ಪಾದಸೇವೆಮಾಡುವ ಸೌಭಾಗ್ಯವನ್ನು, ನಮ್ಮೆಲ್ಲರಿಗೂ ಕರುಣಿಸಲೆಂದು ನಾವು ಪ್ರಾರ್ಥಿಸುತ್ತೇವೆ.

ಸರ್ವಜಿತ್ ಸಂವತ್ಸರದ
ಮಾಘ ಬಹುಳ ತ್ರಯೋದಶಿ ಮಹಾಶಿವರಾತ್ರಿ
ದಿನಾಂಕ 05-03-2008

ಇತಿ
**ಜಿ. ವೆಂಕಟೇಶ್**
ಪ್ರವರ್ತಕರು
ಶ್ರೀ ರಾಘವೇಂದ್ರ ದರ್ಶನ ಕೇಂದ್ರ

# ಲೇಖಕರ ನುಡಿ

ಐದಾರು ವರ್ಷಗಳ ಹಿಂದಿನ ಮಾತು, ರಾಘವೇಂದ್ರ ದರ್ಶನ ಕೇಂದ್ರದ ಪದಾಧಿಕಾರಿಗಳಾದ ಶ್ರೀ ನಾಗರಾಜರಾಯರು, ಶ್ರೀಡಿ. ವಿ. ಕೃಷ್ಣಮೂರ್ತಿ ಮತ್ತು ಶ್ರೀ ಜಿ. ವೆಂಕಟೇಶರವರು ನನ್ನನ್ನು ಭೇಟಿ ಮಾಡಿ ನರಸಿಂಹರಾಜ ಕಾಲೋನಿಯ ರಾಮಮಂದಿರದಲ್ಲಿ ಅದ್ವೈತ-ವಿಶಿಷ್ಟಾದ್ವೈತ- ದ್ವೈತದರ್ಶನಗಳ ಬಗ್ಗೆ ಒಂದು ವಾರ ಪ್ರವಚನ ಮಾಡಲು ಕೇಳಿದ್ದರು. ಒಂದೆರಡು ಸ್ಥಳಗಳಲ್ಲಿ ಈ ವಿಷಯದ ಬಗ್ಗೆ ಪುನಃ ಪ್ರವಚನ ಮಾಡಿಸಿದ್ದರು. ಕೆಲವು ಕಾಲದ ನಂತರ ರಾಘವೇಂದ್ರ ದರ್ಶನ ಕೇಂದ್ರದ ಪದಾಧಿಕಾರಿಗಳು ಈ ವಿಷಯದಲ್ಲಿ ಒಂದು ಪುಸ್ತಕ ಬರೆಯಲು ಕೇಳಿದರು. ದೀರ್ಘಕಾಲದ ನಂತರ ಅವರ ಬೇಡಿಕೆಯನ್ನು ಹರಿಗುರುಗಳ ಕೃಪೆಯಿಂದ ಪೂರ್ಣಗೊಳಿಸುತ್ತಿರುವ ಬಗ್ಗೆ ನನಗೆ ಸಮಾಧಾನ ಉಂಟಾಗಿದೆ.

ಮೂರೂ ದರ್ಶನಗಳಲ್ಲಿ ಸೂಕ್ಷ್ಮ ಭಿನ್ನತೆಗಳಿರುವುದು ವಿದ್ವಾಂಸರಿಗೆ ಹಾಗೂ ಬುದ್ಧಿಜೀವಿಗಳಿಗೆ ತಿಳಿದ ಸಂಗತಿಯಾಗಿದೆ. ಆದರೆ ಭಿನ್ನತೆಗಳನ್ನೇ ಗಮನಿಸುವುದಕ್ಕಿಂತ ಸಮಾನಾಂಶಗಳನ್ನು ಗುರುತಿಸಿ ಸಾಮಾಜಿಕ ನೆಲೆಯಲ್ಲಿ ಪರಸ್ಪರ ಪ್ರೀತಿ-ಸೌಹಾರ್ದಗಳಿಂದ ಬಾಳಬೇಕೆಂಬ ದೃಷ್ಟಿಕೋನದಿಂದ ಈ ಪುಸ್ತಕದ ರಚನೆಯಾಗಿದೆ. ಪ್ರತಿಯೊಂದು ದರ್ಶನವೂ ತಮ್ಮ ಸಿದ್ಧಾಂತದ ಪೂರ್ಣತೆಯನ್ನು ಮನಗಾಣಿಸುವುದರ ಜೊತೆಗೆ ಪರಕೀಯ ಸಿದ್ಧಾಂತಗಳಲ್ಲಿ ದೋಷಗಳನ್ನು ಆವಿಷ್ಕರಿಸುತ್ತದೆ. ಇದರಂತೆ ಪ್ರತಿಯೊಂದು ದರ್ಶನದ ಮಹಾಪುರುಷರು ತಮ್ಮ ತಮ್ಮ ಚಿಂತನೆಗಳನ್ನು ತತ್ತ್ವನಿಷ್ಠೆಗಳನ್ನು ಬಿಡದಂತೆಯೇ ಪರಕೀಯದರ್ಶನ ಹಾಗೂ ದಾರ್ಶನಿಕರನ್ನು ಗೌರವಿಸುತ್ತ ಬಂದಿರುವ ಸಂಪ್ರದಾಯವು ಎಂದಿಗೂ ಅವಿಸ್ಮರಣೀಯವಾಗಿದೆ.

ಜಗದ್ಗುರು ಮಧ್ವಾಚಾರ್ಯರು ಅದ್ವೈತಸಿದ್ಧಾಂತದ ಚಿಂತನೆಗಳ ಬಗ್ಗೆ ಭಿನ್ನ ನಿಲುವನ್ನು ತಳೆದರೂ ಅದ್ವೈತವೇದಾಂತವನ್ನು ಅಭ್ಯಸಿಸಲು ಬಯಸಿ ಬಂದ ವಿದ್ವಾಂಸರಿಗೆ ಸಂಪ್ರದಾಯಬದ್ಧವಾಗಿ ಅದ್ವೈತದ ಮೂಲ ಹಾಗೂ ವ್ಯಾಖ್ಯಾನಗ್ರಂಥಗಳನ್ನು ಪಾಠ ಹೇಳಿದರೆಂದು ಸುಮಧ್ವವಿಜಯ ದಾಖಲಿಸುತ್ತದೆ-

'ಅಖಂಡಿತೋಪನ್ಯಸನಂ ವಿಸಂಶಯಂ
ಸಸಂಪ್ರದಾಯಂ ಪ್ರವಚೋ ದೃಢೋತ್ತರಮ್ ।

ತಿಳಿಯಲು ಸಾಧ್ಯವಾಗುವುದು. ಈ ನಿಟ್ಟಿನಲ್ಲಿ ಇದೊಂದು ಕಿರು ಪ್ರಯತ್ನ ಮಾತ್ರ.

ಶ್ರೀಹರಿ-ಗುರುಗಳ ಕರುಣೆ ಈ ಕಾರ್ಯವನ್ನು ನನ್ನಿಂದ ಮಾಡಿಸಿದೆ. ಮಧ್ವವಲ್ಲಭ ಸಿರಿಯರಸ ಕೃಷ್ಣನಿಗೆ ಅನಂತ ನಮನಗಳು. ನಾನಾದರ್ಶನಗಳ ಸೂಕ್ಷ್ಮ ಚಿಂತನೆಗಳನ್ನು ಪರಿಚಯಿಸಿದ ಪ್ರಾಚೀನ ಟಿಪ್ಪಣಿಕಾರರಿಗೆ ಭಕ್ತಿ ಶ್ರದ್ಧೆಯ ನಮನಗಳನ್ನು ಅರ್ಪಿಸುತ್ತೇನೆ. ಈ ಕಿರು ಕೃತಿಯ ರಚನೆಯಲ್ಲಿ ಪರಮಪೂಜ್ಯ ಗುರುಗಳಾದ ಪೇಜಾವರ ಮಠಾಧೀಶ ಶ್ರೀ ವಿಶ್ವೇಶತೀರ್ಥ ಶ್ರೀಪಾದರ ಅನನ್ಯ ಕರುಣೆ ಅವಿಸ್ಮರಣೀಯವಾದುದು. ನ್ಯಾಯಸುಧಾದಿ ಗ್ರಂಥಗಳನ್ನು ಪಾಠ ಹೇಳಿ, ಚಿಂತನೆ ಮಾಡಿಸಿ ಪರಕೀಯ ದರ್ಶನದ ಸೂಕ್ಷ್ಮ ಪ್ರಕ್ರಿಯೆಗಳನ್ನು ಸರಳವಾಗಿ ನಿರೂಪಿಸಿದ ಅವರ ಅನುಗ್ರಹ ಸದಾ ಸ್ಮರಣೀಯ ವಾಗಿದೆ. ಪರಮಪೂಜ್ಯ ಗುರುಗಳಿಗೆ ಶ್ರದ್ಧಾಪೂರ್ವಕ ನಮನಗಳು.

ನಿರಂತರ ವಿಶಿಷ್ಟಾದ್ವೈತ ಸಿದ್ಧಾಂತದ ಗ್ರಂಥಗಳ ಪಾಠ-ಪ್ರವಚನಗಳಲ್ಲಿ ತೊಡಗಿದ ಹಾಗೂ ಅಷ್ಟಾಂಗಯೋಗ ಸಂಸ್ಥೆಯ ಅನುಗ್ರಾಹಕರಾದ ಪರಮಪೂಜ್ಯ ಶ್ರೀರಂಗಪ್ರಿಯ ಶ್ರೀಪಾದರು ಈ ಕೃತಿಯನ್ನು ಅವಲೋಕಿಸಿ ತಮ್ಮ ಆಶೀರ್ವಚನವನ್ನು ನೀಡಿ ಅನುಗ್ರಹಿಸಿದ್ದಾರೆ. ಪಂಡಿತರ ಬಗ್ಗೆ ಅವರಿಗಿರುವ ಪ್ರೀತಿ ಗೌರವಗಳನ್ನು ನಾನು ಹತ್ತಿರದಿಂದ ಅನುಭವಿಸಿದ್ದೇನೆ. ಅವರಿಗೆ ನನ್ನ ಗೌರವಪೂರ್ವಕ ನಮನಗಳನ್ನು ಅರ್ಪಿಸುತ್ತೇನೆ.

ಈ ಕೃತಿಯನ್ನು ರಚಿಸಿ ಅದ್ವೈತಭಾಗದ ಲೇಖನದ ಪರಿಶೀಲನೆಗಾಗಿ ರಾಷ್ಟ್ರಪತಿ ಪ್ರಶಸ್ತಿ ಪುರಸ್ಕೃತರೂ, ಶ್ರೇಷ್ಠ ಅದ್ವೈತ ವಿದ್ವಾಂಸರೂ ಆದ ಶ್ರೀ ಶೇಷಾಚಲ ಶರ್ಮ ಅವರನ್ನು ಪ್ರಾರ್ಥಿಸಿಕೊಂಡೆ. ಅವರು ಸಮಗ್ರ ಭಾಗವನ್ನು ಪರಿಶೀಲಿಸಿ ನಾನು ಆಕರಗಳನ್ನು ಬಿಟ್ಟಲ್ಲಿ ಅದನ್ನು ಸೂಚಿಸುವುದರ ಜೊತೆಗೆ ಬೆನ್ನು ತಟ್ಟಿ ಪ್ರೋತ್ಸಾಹಿಸಿದ್ದಾರೆ, ತಮ್ಮ ಅಭಿನಂದನ ನುಡಿಯಿಂದ ಹರಸಿದ್ದಾರೆ. ಅವರಿಗೆ ನನ್ನ ಆದರದ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

ವೈದಿಕ ಸಂಸ್ಕಾರ ಹಾಗೂ ಶಿಕ್ಷಣಗಳನ್ನು ನೀಡಿ ಬೆಳೆಸಿದ ಪೂಜ್ಯ ತಂದೆ ಯವರಾದ ವೈಶಂಪಾಯನಾಚಾರ್ಯ ನಾಗಸಂಪಿಗೆ ಹಾಗೂ ದಿ| ಮಾತೃಶ್ರೀ ರಮಾಬಾಯಿ ನಾಗಸಂಪಿಗೆ ಇವರನ್ನೂ ಭಕ್ತಿಯಿಂದ ನಮಸ್ಕರಿಸುತ್ತೇನೆ.

ರಾಘವೇಂದ್ರ ದರ್ಶನ ಕೇಂದ್ರದ ಎಲ್ಲ ಪದಾಧಿಕಾರಿಗಳ ಅಭಿಮಾನಕ್ಕೆ ನಾನು ತುಂಬ ಋಣಿಯಾಗಿದ್ದೇನೆ. ಅವರ ಈ ಬೇಡಿಕೆಯಿಂದ ವಿಭಿನ್ನ ದರ್ಶನ

ಸಮಾಗಮನ್ ಶ್ರೋತುಮಮುಷ್ಯ ಸಾಗ್ರಹಾಃ
ಜನಾಃ ಶ್ರುತಾಢ್ಯಾಃ ಚತುರಾ ಬುಭೂಷವಃ ॥' (4-48)

ನಂತರದಲ್ಲಿ ಶ್ರೀರಾಘವೇಂದ್ರ ಸ್ವಾಮಿಗಳಂತಹ ಧೀಮಂತರು ಇಂತಹ ಸಂಪ್ರದಾಯವನ್ನು ಮುಂದುವರಿಸಿದರು- 'ಶಾಬ್ದಂ ಭಾಷ್ಯಂ ಜಾಯದೇವೀಂ ಚ ಟೀಕಾಂ ಭಾಟ್ಟಂ ತಂತ್ರಂ **ಭಾಮತೀಂ** ಗೌರವಂ ಚ ।'

ಹತ್ತೊಂಭತ್ತನೆಯ ಶತಮಾನದ ಶ್ರೀಕೃಷ್ಣಾವಧೂತರು ಮತತ್ರಯಗಳಿಗೆ ಅನುಗುಣವಾಗಿ ಬ್ರಹ್ಮಸೂತ್ರಗಳಿಗೆ ವ್ಯಾಖ್ಯಾನವನ್ನು ರಚಿಸಿದ್ದಾರೆ. ಈ ಕೃತಿಯು ಕೇವಲ ಆಯಾ ಆಚಾರ್ಯಪುರುಷರ ಚಿಂತನೆಗಳನ್ನು ಮಾತ್ರವೇ ಸ್ಫುಟ ಪಡಿಸುವ ಮತಾಂತರಖಂಡನೆಗೆ ತೊಡಗದ ವ್ಯಾಖ್ಯೆಯಾಗಿದೆ.

ಪ್ರಕೃತ ಈ ಕೃತಿಯು ಆಯಾ ದರ್ಶನಗಳ ನೆಲೆಯಲ್ಲಿ ನಿಂತು ಅವುಗಳನ್ನು ಪರಿಚಯಿಸುವ ಕಾರ್ಯವನ್ನು ಮಾಡುತ್ತದೆ. ಪ್ರತಿಯೊಂದು ದರ್ಶನದ ವಿಚಾರಗಳನ್ನು ಪ್ರತಿಪಾದಿಸುವಾಗ ಅವುಗಳ ವಿಧಾಯಕ ಚಿಂತನೆಗಳ ಬಗ್ಗೆ ಬೆಳಕು ಚೆಲ್ಲಲಾಗಿದೆ. ಪರದರ್ಶನಗಳ ಖಂಡನ-ಮಂಡನಗಳ ಕಡೆಗೆ ದೃಷ್ಟಿಯನ್ನು ಹರಿಸದೆಯೇ ಕೇವಲ ಗುಣಾಂಶಗಳನ್ನು ಮಾತ್ರ (ಸಿದ್ಧಾಂತವನ್ನು ಮಂಡಿಸುವ ಅಂಶಗಳನ್ನು) ಪ್ರತಿಪಾದಿಸಲಾಗಿದೆ. ಪರದರ್ಶನಗಳ ಖಂಡನ-ಮಂಡನೆಯು ಅಪ್ರಸ್ತುತ, ಅನಾವಶ್ಯಕ ಎಂದೇನೂ ನನ್ನ ಆಶಯವಲ್ಲ. ಬೌದ್ಧಿಕ ವಿಕಾಸ ಹೊಂದಿದ ವಿದ್ವಾಂಸರ ಸ್ತರದಲ್ಲಿ ಸತ್ಯಶೋಧನೆಯ ದೃಷ್ಟಿಯಿಂದ ಇಂತಹ ವಿಚಾರ ವಿನಿಮಯ ನಡೆಯುವುದು ಅತ್ಯಂತ ಆವಶ್ಯಕವಾಗಿದೆ. ಇದರಿಂದ ಸತ್ಯಾನ್ವೇಷಣೆ ಸಾಧ್ಯವಾಗುವುದು. ಆದರೆ ಸಾಮಾಜಿಕ ಬದುಕಿನಲ್ಲಿ ಅಧ್ಯಾತ್ಮದ ಪ್ರಾಥಮಿಕ ಹಂತದಲ್ಲಿರುವ ಸಾಧಕನಿಗೆ ಇಂತಹ ಸೂಕ್ಷ್ಮ ವಿಚಾರ ಧಾರೆಗಳ ಆವಶ್ಯಕತೆ ಇರುವುದಿಲ್ಲ. ಪ್ರತಿಯೊಬ್ಬ ಸಾಧಕನೂ ಪ್ರತಿಯೊಂದು ದರ್ಶನವನ್ನು ಅಭ್ಯಾಸ ಮಾಡಿ ತನ್ನ ವಿಮರ್ಶಶಕ್ತಿಯಿಂದ ನಿರ್ಮಥನ ಮಾಡಿ ಸತ್ಯವನ್ನು ನಿರ್ಧರಿಸಬೇಕು. ಈ ಹಿನ್ನೆಲೆಯಲ್ಲಿ ಇಂತಹ ಕೃತಿಗಳ ಅಧ್ಯಯನವು ಜಿಜ್ಞಾಸುಗಳಿಗೆ ಪ್ರಯೋಜನಕಾರಿಯಾಗುವುದೆಂದು ಭಾವಿಸುತ್ತೇನೆ.

ಇಂತಹ ಗ್ರಂಥಗಳನ್ನು ಎಷ್ಟೇ ಸರಳವಾಗಿ ಬರೆಯಬಯಸಿದರೂ ದರ್ಶನ ಗ್ರಂಥಗಳ ಸಾಮಾನ್ಯ ಪರಿಚಯವೂ ಇಲ್ಲದ ವ್ಯಕ್ತಿಗಳಿಗೆ ಇವುಗಳ ಆಂತರ್ಯ ವರಿಯುವುದು ಕಷ್ಟಸಾಧ್ಯವಾಗಬಹುದು. ಆದರೂ ಮೇಲಿಂದ ಮೇಲೆ ಇಂತಹ ಕೃತಿಗಳನ್ನು ಅಧ್ಯಯನ ಮಾಡಿದಾಗ ಆ ಚಿಂತಕರ ಹೃದಯವನ್ನು

ಗಳ ವ್ಯಾಪಕವಾದ ಅಧ್ಯಯನವು ಸಾಧ್ಯವಾಯಿತು. 80ರ ಹರೆಯದಲ್ಲೂ ಶ್ರೀ ನಾಗರಾಜರಾಯರು, ಶ್ರೀ ಡಿ.ವಿ. ಕೃಷ್ಣಮೂರ್ತಿ ಹಾಗೂ ಶ್ರೀ ಜಿ. ವೆಂಕಟೇಶ್ ಮತ್ತು ಅನೇಕ ಅವರ ಜೊತೆಗಾರರು ತತ್ತ್ವಜ್ಞಾನ ಹಾಗೂ ಸಾಮಾಜಿಕ ಸೌಹಾರ್ದಕ್ಕಾಗಿ ನಡೆಸುತ್ತಿರುವ ಕಾರ್ಯಗಳು ಆದರ್ಶವಾಗಿವೆ. ಅವರಿಂದ ಇಂತಹ ಸೇವಾಕಾರ್ಯ ಸದಾ ನಡೆಯಲೆಂದು ಭಗವಂತನಲ್ಲಿ ಬಿನ್ನವಿಸುವೆ.

ಅದ್ವೈತಭಾಗದ ಕರಡುಪ್ರತಿಯನ್ನು ವಿದ್ವಾನ್ ತಿರುಮಲ ಕುಲಕರ್ಣಿ ಯವರು, ವಿಶಿಷ್ಟಾದ್ವೈತ ಭಾಗದ ಕರಡು ತಿದ್ದುವ ಕಾರ್ಯವನ್ನು ವಿದ್ವಾನ್ ರಂಗನಾಥ ಕಟ್ಟಿಯವರು, ದ್ವೈತಭಾಗದ ಕರಡು ತಿದ್ದುವ ಕಾರ್ಯವನ್ನು ವಿದ್ವಾನ್ ಶಂಕರನಾರಾಯಣ ಅಡಿಗರೂ ನಡೆಸಿಕೊಟ್ಟಿದ್ದಾರೆ. ಈ ಮೂವರು ವಿದ್ವಾಂಸರು ಉತ್ತಮ ಸಲಹೆ-ಸೂಚನೆಗಳನ್ನು ನೀಡಿ ಉಪಕರಿಸಿದ್ದಾರೆ. ಅವರಿಗೆ ನನ್ನ ಧನ್ಯವಾದಗಳು.

ವಿದ್ವಾನ್ ಸಿ.ಹೆಚ್. ಬದರೀನಾಥಾಚಾರ್ಯರು ಎಲ್ಲ ಹಂತಗಳಲ್ಲಿಯೂ ರಾಘವೇಂದ್ರ ದರ್ಶನ ಕೇಂದ್ರದ ಪದಾಧಿಕಾರಿಗಳಿಗೆ ಹಾಗೂ ವೈಯಕ್ತಿಕವಾಗಿ ನನಗೂ ಕಾರ್ಯಗಳ ಬಗ್ಗೆ ನೆನಪು ನೀಡುತ್ತಾ, ಈ ಕೃತಿ ಹೊರಬರುವಲ್ಲಿ ನಿರಂತರ ಶ್ರಮಿಸಿದ್ದಾರೆ. ಅವರಿಗೂ ನನ್ನ ವಂದನೆಗಳು.

ಈ ಕೃತಿಯ ಅಕ್ಷರಜೋಡಣೆಯ ಕಾರ್ಯವು ಶ್ರಮದಾಯಕವಾದದ್ದು. ವಿದ್ವಾನ್ ವ್ಯಾಸರಾಜ ಜೋಶಿಯವರು ರಾತ್ರಿಯ ಕಾಲದಲ್ಲೂ ಸಂಶೋಧನ ಮಂದಿರಕ್ಕೆ ಆಗಮಿಸಿ ತಮ್ಮ ಶ್ರಮವನ್ನು ಗಣನೆಗೆ ತೆಗೆದುಕೊಳ್ಳದೆಯೇ ಈ ಕಾರ್ಯವನ್ನು ತುಂಬ ಸಮರ್ಪಕವಾದ ರೀತಿಯಲ್ಲಿ ನೆರವೇರಿಸಿಕೊಟ್ಟಿದ್ದಾರೆ. ಅವರಿಗೆ ನನ್ನ ಹಾರ್ದಿಕ ಕೃತಜ್ಞತೆಗಳು.

ತಮ್ಮ ಅಮೂಲ್ಯ ಸಮಯವನ್ನು ನೀಡಿ ಸುಂದರವಾದ ಮುಖಪುಟವನ್ನು ಸಿದ್ಧಪಡಿಸಿದ ಶ್ರೀ ಕೆ.ಎಂ. ಶೇಷಗಿರಿಯವರಿಗೆ ನಾನು ಆಭಾರಿಯಾಗಿದ್ದೇನೆ.

ಸಂಶೋಧನ ಮಂದಿರದ ಚಿ| ಮಂಜುನಾಥನು ಈ ಸೇವಾಕಾರ್ಯದಲ್ಲಿ ತನ್ನನ್ನು ತೊಡಗಿಸಿಕೊಂಡಿದ್ದಾನೆ. ಅವನಿಗೆ ಭಗವಂತನ ಆಶೀರ್ವಾದಗಳು.

ಸುಜನರು ಈ ಕೃತಿಯನ್ನು ಅಭ್ಯಸಿಸಿ ಜ್ಞಾನಲಾಭವನ್ನು ಪಡೆದುಕೊಂಡರೆ ನನ್ನ ಶ್ರಮ ಸಾರ್ಥಕವೆಂದು ಭಾವಿಸುತ್ತೇನೆ.

ಇತಿ ಸುಜನವಿಧೇಯ,

**ಡಾ| ಎ.ವಿ. ನಾಗಸಂಪಿಗೆ**

## ವಿಷಯಾನುಕ್ರಮಣಿಕೆ

| ವಿಷಯ | ಪುಟ |
|---|---|

| ವಿಷಯ | ಪುಟ |
|---|---|

| ವಿಷಯ | ಪುಟ |
|---|---|

## ದ್ವೈತದರ್ಶನ

| ವಿಷಯ | ಪುಟ |
|---|---|

# ಸಂಕೇತಾಕ್ಷರ ವಿವರ

**ಅದ್ವೈತದರ್ಶನ -**

| | |
|---|---|
| ಛಾಂ. ಉ. | ಛಾಂದ್ಯೋಗೋಪನಿಷತ್ ಶಾಂಕರಭಾಷ್ಯಸಹಿತಮ್ |
| ಬ್ರ. ಸೂ. ಭಾ | ಬ್ರಹ್ಮಸೂತ್ರಶಾಂಕರಭಾಷ್ಯಮ್ |
| ಭಾಗ. | ಶ್ರೀಮದ್ ಭಾಗವತಮ್ |
| ಬೃಹ. | ಬೃಹದಾರಣ್ಯಕೋಪನಿಷತ್ |
| ಮಾಂ. ಕಾ. ಭಾ. | ಮಾಂಡೂಕ್ಯಕಾರಿಕಾಭಾಷ್ಯಮ್ |
| ಬ್ರ. ಸಿ. | ಬ್ರಹ್ಮಸಿದ್ಧಿಃ (ಮಂಡನಮಿಶ್ರಕೃತಾ) |
| ತೈ. ಆ. | ತೈತ್ತಿರೀಯಾರಣ್ಯಕಮ್ |
| ಪ್ರ. ವಾ. | ಪ್ರಮಾಣವಾರ್ತಿಕಮ್ |
| ಬೃ. ಭಾ. ವಾ. | ಬೃಹದಾರಣ್ಯಕ ಭಾಷ್ಯವಾರ್ತಿಕಮ್ |
| ಮಾ. ಶಂ. ದಿ. | ಮಾಧವೀಯಶಂಕರದಿಗ್ವಿಜಯಃ |
| ನ್ಯಾ. ಅ. ಉ. ಉ. | ನ್ಯಾಯಮೃತಾದ್ವೈತಸಿದ್ಧಿ (ಉಪೋದ್ಘಾತದಿಂದ ಉಲ್ಲಿಖಿತ) |
| ವೇ. ಪ. | ವೇದಾಂತ ಪರಿಭಾಷಾ |
| ವೇ. ಪ. ಶಿ. ಮ. | ವೇದಾಂತಪರಿಭಾಷಾ ಶಿಖಾಮಣಿ |
| ಸಿಂ. ಬಿ. ಪ್ರ. (ಅ. ವಾ. ಶಾ.) | ಸಿದ್ಧಾಂತಬಿಂದುಪ್ರಪಾತ (ಅಭ್ಯಂಕರ ವಾಸುದೇವಶಾಸ್ತ್ರಿ) |
| ವೇ. ತ. ವಿ. | ವೇದಾಂತತತ್ತ್ವವಿವೇಕಃ (ನೃಸಿಂಹಾಶ್ರಮರಚಿತ) |
| ಪಂ. ಪಾ. | ಪಂಚಪಾದಿಕಾ |
| ತೈ. ಶಾಂ. ಭಾ. | ತೈತ್ತಿರೀಯಶಾಂಕರಭಾಷ್ಯಮ್ |
| ಮುಂ. ಶಾ. ಭಾ | ಮುಂಡಕಶಾಂಕರಭಾಷ್ಯಮ್ |

| | |
|---|---|
| ಭ. ಗೀ. ಭಾ. | ಭಗವದ್ಗೀತಾಭಾಷ್ಯಮ್ ಶಂಕರಾಚಾರ್ಯರಚಿತಮ್ |
| ಸಿ. ಲೇ. ಸಂ. | ಸಿದ್ಧಾಂತಲೇಶ ಸಂಗ್ರಹ |
| ಭಾಮತೀ | ಭಾಮತೀ (ಶಾರೀರಕಭಾಷ್ಯವ್ಯಾಖ್ಯಾನ) |
| ಕಠೋ. | ಕಠೋಪನಿಷತ್ |
| ಬ್ರ. ಬಿಂ. | ಬ್ರಹ್ಮಬಿಂದೂಪನಿಷತ್ |
| ನೈ. ಸಿ. | ನೈಷ್ಕರ್ಮ್ಯಸಿದ್ಧಿಃ |
| ಅ. ಸಿ. | ಅದ್ವೈತ ಸಿದ್ಧಿಃ |
| ವೇ. ಕ. | ವೇದಾಂತ ಕಲ್ಪತರು |
| ವೇ. ಸೂ. ಮಂ. | ವೇದಾಂತಸಿದ್ಧಾಂತಸೂಕ್ತಿಮಂಜರೀ ಸಿದ್ಧಾಂತಲೇಶಸಂಗ್ರಹವ್ಯಾಖ್ಯಾ |
| ನ್ಯಾ. ಸು. ಉ. | ನ್ಯಾಯಸುಧಾ (ಉಲ್ಲಿಖಿತಭಾಗ) |
| ಮಾ. ಸೂ. | ಮಾಧ್ಯಮಕಸೂತ್ರಮ್ |
| ಮಾ. ಕಾ. | ಮಾಧ್ಯಮಿಕಕಾರಿಕಾ |
| ಬೋ. ಪಂ. | ಬೋಧಿಚರ್ಯಾವತಾರಪಂಚಿಕಾ |
| ಅ. ಸ. | ಅಭಿಸಮಯಾಲಂಕಾರ |
| ತ. ಉ. ವ | ತತ್ತ್ವೋದ್ಯೋತ-ಪ್ರಕರಣಾದುದಾಹೃತವಚನಮ್ |
| ಲಂ. ಅ | ಲಂಕಾವತಾರ |
| ಬ್ರ. ಅ. | ಬ್ರಹ್ಮಾನುಚಿಂತನಮ್ |
| ಸಂ. ಶಾ. | ಸಂಕ್ಷೇಪ ಶಾರೀರಕಮ್ |
| ಖಂ. ಖಂ. ಖಾ. | ಖಂಡನ-ಖಂಡ-ಖಾದ್ಯಮ್ |
| ಕೇನ. ಭಾ. | ಕೇನೋಪನಿಷದ್ ಭಾಷ್ಯಮ್ |
| ಇ. ಸಿ. | ಇಷ್ಟಸಿದ್ಧಿ |
| ಬ್ರ. ಜ್ಞಾ. ಮಾ | ಬ್ರಹ್ಮಜ್ಞಾನಾವಲೀಮಾಲಾ |

ವಿಶಿಷ್ಟಾದ್ವೈತದರ್ಶನ -

| | |
|---|---|
| ವೇ.ಸಂ. | ವೇದಾರ್ಥಸಂಗ್ರಹ |
| ಶ್ರೀಭಾಷ್ಯ | ಬ್ರಹ್ಮಸೂತ್ರಶ್ರೀಭಾಷ್ಯಮ್ (ಭಗವದ್ರಾಮಾನುಜಾಚಾರ್ಯ-ಪ್ರಣೀತಮ್) |
| ಯ.ದೀ. | ಯತೀಂದ್ರಮತ ದೀಪಿಕಾ |
| ವಿ.ನ | ವಿಶಿಷ್ಟಾದ್ವೈತನವನೀತಮ್ |
| ತ.ಕ. | ತತ್ತ್ವಮುಕ್ತಾಕಲಾಪ |
| ವೇ.ಕಾ. | ವೇದಾಂತ ಕಾರಿಕಾವಲೀ |
| ತ.ತ್ರ | ತತ್ತ್ವತ್ರಯಮ್ |
| ಗೀ.ಭಾ. | ಗೀತಾಭಾಷ್ಯಮ್ (ಶ್ರೀರಾಮಾನುಜಾಚಾರ್ಯ ಕೃತಮ್) |
| ಬೃಹ. | ಬೃಹದಾರಣ್ಯಕೋಪನಿಷತ್ |
| ತ.ಶು. | ತತ್ತ್ವಶುದ್ಧಿ |
| ಅ.ಸಂ. | ಅಹಿರ್ಬುಧ್ನ್ಯ ಸಂಹಿತಾ |
| ನ್ಯಾ.ಸಿ. | ನ್ಯಾಯಸಿದ್ಧಾಂಜನಮ್ |

ದ್ವೈತದರ್ಶನ -

| | |
|---|---|
| ಬ್ರ.ಸೂ.ಅನು | ಬ್ರಹ್ಮಸೂತ್ರಾನುವ್ಯಾಖ್ಯಾನಮ್ |
| ದ್ವಾ.ಸ್ತೋ. | ದ್ವಾದಶಸ್ತೋತ್ರಾಣಿ |
| ಮ.ವಿ. | ಮಧ್ವ ವಿಜಯ |
| ಪ್ರ.ಲ. | ಪ್ರಮಾಣಲಕ್ಷಣಮ್ |
| ಬೃ.ಭಾ. | ಬೃಹದಾರಣ್ಯಕಭಾಷ್ಯಮ್ |
| ಪ್ರ.ಪ. | ಪ್ರಮಾಣಪದ್ಧತಿಃ |
| ಪ್ರ.ಶ್ರೀ.ಟಿ. | ಪ್ರಮಾಣಪದ್ಧತಿಃ ಶ್ರೀನಿವಾಸತೀರ್ಥೀಯ ಟಿಪ್ಪಣೀ |
| ಪ್ರ.ವಿ.ಟಿ. | ಪ್ರಮಾಣಪದ್ಧತಿಃ ವಿಜಯೀಂದ್ರ ತೀರ್ಥೀಯ ಟಿಪ್ಪಣೀ |

| | |
|---|---|
| ಭಾಗ. | ಶ್ರೀಮದ್ ಭಾಗವತಮ್ |
| ತ.ಸಂ. | ತತ್ತ್ವಸಂಖ್ಯಾನಮ್ |
| ತ.ಸಂ.ವಿ. | ತತ್ತ್ವಸಂಖ್ಯಾನ-<br>ವಿಜಯೀಂದ್ರತೀರ್ಥೀಯ ಟಿಪ್ಪಣೀ |
| ತ.ಸಂ.ಕಾ. | ತತ್ತ್ವಸಂಖ್ಯಾನ ಕಾಶಿಕಾಟಿಪ್ಪಣೀ |
| ಋ.ಸಂ. | ಋಕ್ಸಂಹಿತಾ |
| ತೈ.ಬ್ರ.ವ. | ತೈತ್ತಿರೀಯಬ್ರಹ್ಮವಲ್ಲೀ |
| ನ್ಯಾ.ಸು.ಪ.ಉ. | ನ್ಯಾಯಸುಧಾಪರಿಮಳದಿಂದ ಉದ್ಧೃತ |
| ತಾ.ಚಂ.ಉ.ಶ್ರು. | ತಾತ್ಪರ್ಯಚಂದ್ರಿಕೋದಾಹೃತಶ್ರುತಿಃ |
| ಕಾ.ಉ.(ಕಾಠಕ) | ಕಾಠಕೋಪನಿಷತ್ |
| ಐ.ಆ. | ಐತರೇಯಾರಣ್ಯಕಮ್ |
| ಬ್ರ.ಸೂ.ಭಾ. | ಬ್ರಹ್ಮಸೂತ್ರಭಾಷ್ಯಮ್ |
| ಸ.ಶಾ.ಸಂ. | ಸರ್ವಶಾಸ್ತ್ರಾರ್ಥಸಂಗ್ರಹಃ |
| ಛಾಂ.ಉ. | ಛಾಂದೋಗ್ಯೋಪನಿಷತ್ |
| ಆಥ. | ಆಥರ್ವಣೋಪನಿಷತ್ |
| ಭಾ.ತಾ. | ಭಾಗವತತಾತ್ಪರ್ಯನಿರ್ಣಯಃ |
| ವಿ.ತ.ನಿ. | ವಿಷ್ಣುತತ್ತ್ವನಿರ್ಣಯಃ |
| ವಿ.ತ.ನಿ.ಶ್ರೀ.ಟಿ. | ವಿಷ್ಣುತತ್ತ್ವನಿರ್ಣಯ ಟೀಕಾಟಿಪ್ಪಣೀ<br>(ಶ್ರೀನಿವಾಸತೀರ್ಥೀಯಾ) |
| ಯುಕ್ತಿ.ಮ. | ಯುಕ್ತಿಮಲ್ಲಿಕಾ |
| ಬ್ರ.ಸೂ.ಅನು.ಸುಧಾ. | ಬ್ರಹ್ಮಸೂತ್ರಾನುವ್ಯಾಖ್ಯಾನ ಸುಧಾ |
| ನ್ಯಾ.ವಿ. | ನ್ಯಾಯವಿವರಣಮ್ |
| ಐ.ಭಾ. | ಐತರೇಯಾರಣ್ಯಕಭಾಷ್ಯಮ್ |
| ಮ.ತಾನಿ. | ಮಹಾಭಾರತತಾತ್ಪರ್ಯನಿರ್ಣಯಃ |
| ತಾ.ಸ.ದೀ. | ತಾರತಮ್ಯಸದ್ರತ್ನಮಾಲಾದೀಪಿಕಾ |

| | |
|---|---|
| ತಾ. ಕೌ. | ತಾರತಮ್ಯೋಕ್ತಿ ಕೌಸ್ತುಭಃ |
| ಕಾ. ಭಾ. | ಕಾಠಕೋಪನಿಷದ್ ಭಾಷ್ಯಮ್ |
| ನಾ. ಭ. ಸೂ. | ನಾರದಭಕ್ತಿಸೂತ್ರಾಣಿ |
| ತ. ಪ್ರ. ಗು. ದೀ. | ತತ್ತ್ವಪ್ರಕಾಶಿಕಾ ಗುರ್ವರ್ಥದೀಪಿಕಾ |
| ಬ್ರ. ಸೂ. ಭಾ. ದೀ. | ಬ್ರಹ್ಮಸೂತ್ರಭಾಷ್ಯದೀಪಿಕಾ |
| ಈ. ಭಾ. | ಈಶಾವಾಸ್ಯಭಾಷ್ಯಮ್ |
| ಶ್ವೇತಾಶ್ವ. | ಶ್ವೇತಾಶ್ವತರೋಪನಿಷತ್ |

# ಅದ್ವೈತದರ್ಶನ

## I. ದರ್ಶನಸಾರ

ಅದ್ವೈತವೇದಾಂತದರ್ಶನದ ಕಿರು ಪರಿಚಯವನ್ನು ಮೊದಲ ಅಧ್ಯಾಯದಲ್ಲಿ ಮಾಡಿಕೊಳ್ಳುವಾ. **'ಸಂಕ್ಷೇಪವಿಸ್ತರಾಭ್ಯಾಂ ಹಿ ಪ್ರವದಂತಿ ಮನೀಷಿಣಃ'** ಎಂಬ ವಿದ್ವಾವೃದ್ಧರ ನಾಣ್ಣುಡಿಯಂತೆ ಮೊದಲು ಸಂಕ್ಷೇಪವಾಗಿ ತಿಳಿದು ಮತ್ತೆ ಹೆಚ್ಚಿನ ಆದರದೊಂದಿಗೆ ಅರಿವಿನ ಹರವನ್ನು ಹೆಚ್ಚಿಸಿಕೊಳ್ಳಬಹುದು. ಈ ಹಿನ್ನೆಲೆಯಲ್ಲಿ ಪ್ರಮುಖವಾಗಿ ಬ್ರಹ್ಮ-ಜೀವ-ಮುಕ್ತಿಸಾಧನ-ಮುಕ್ತಿ ಎಂಬ ವಿಷಯಗಳ ಬಗ್ಗೆ ತಿಳಿಯೋಣ. ಅದ್ವೈತ ಸಿದ್ಧಾಂತದ ತತ್ತ್ವಗಳನ್ನು ಪ್ರತಿಬಿಂಬಿಸುವ ಪ್ರಸಿದ್ಧ ಶ್ಲೋಕವೊಂದು ಹೀಗಿದೆ-

**ಶ್ಲೋಕಾರ್ಧೇನ ಪ್ರವಕ್ಷ್ಯಾಮಿ ಯದುಕ್ತಂ ಗ್ರಂಥಕೋಟಿಷು ।**
**ಬ್ರಹ್ಮ ಸತ್ಯಂ ಜಗನ್ಮಿಥ್ಯಾ ಜೀವೋ ಬ್ರಹ್ಮೈವ ನಾಪರಃ ॥** (ಬ್ರ.ಜ್ಞಾ.ಮಾ.)

ಬ್ರಹ್ಮವೇ ಪಾರಮಾರ್ಥಿಕ ಸತ್ಯ. ಪರಚೇತನಕ್ಕಿಂತ ಭಿನ್ನವಾದ 'ಜೀವ' ಎಂಬ ಎರಡನೆಯ ಸತ್ಯವಸ್ತು ಇಲ್ಲ. ಕಾಣುವ ವೈವಿಧ್ಯವೆಲ್ಲ ಅವಿದ್ಯೆಯ ಕೊಡುಗೆ. **'ಅಯಮಾತ್ಮಾ ಬ್ರಹ್ಮ'**, **'ಅಹಂ ಬ್ರಹ್ಮಾಸ್ಮಿ'**, **'ತತ್ತ್ವಮಸಿ'**, **'ಪ್ರಜ್ಞಾನಂ ಬ್ರಹ್ಮ'** ಇತ್ಯಾದಿ ಶ್ರುತಿಗಳು ಜೀವ-ಬ್ರಹ್ಮ ಎಂಬ ಎರಡು ವಸ್ತುಗಳಿಲ್ಲ; ಇರುವುದು ಒಂದೇ ಚೇತನವೆಂದು ಸಾರುತ್ತಿವೆ.

**'ವಾಚಾರಂಭಣಂ ವಿಕಾರಃ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಮ್'** (ಛಾಂ. 6-4-1) ಎಂಬ ಶ್ರುತಿ ಕಾಣುವ ವಿಶ್ವವು ಚೈತನ್ಯದಲ್ಲಿ ಆರೋಪಿತ, ಅಂತಿಮಸತ್ಯವಲ್ಲ ಎನ್ನುತ್ತಿದೆ-

**'ತತ್ರ ಶ್ರುತಾದ್ ವಾಚಾರಂಭಣಶಬ್ದಾದ್ ದಾರ್ಷ್ಟಾಂತಿಕೇಽಪಿ ಬ್ರಹ್ಮ-ವ್ಯತಿರೇಕೇಣ ಕಾರ್ಯಜಾತಸ್ಯಾಭಾವ ಇತಿ ಗಮ್ಯತೇ।'**

(ಬ್ರ.ಸೂ.ಭಾ., 2-1-14, ಪುಟ196)

**'ತಸ್ಮಾತ್ ಯಥಾ ಘಟಕರಕಾದ್ಯಾಕಾಶಾನಾಂ ಮಹಾಕಾಶಾನನ್ಯತ್ವಮ್ ಯಥಾ ಚ ಮೃಗತೃಷ್ಣಿಕೋದಕಾದೀನಾಮೂಷರಾದಿಭ್ಯೋಽನನ್ಯತ್ವಂ ದೃಷ್ಟನಷ್ಟ**

**ಸ್ವರೂಪತ್ವಾತ್, ಸ್ವರೂಪೇಣಾನುಪಾಖ್ಯತ್ವಾತ್ । ಏವಮ್ ಅಸ್ಯ ಭೋಕ್ತೃ-ಭೋಗ್ಯಾದಿ ಪ್ರಪಂಚಜಾತಸ್ಯ ಬ್ರಹ್ಮವ್ಯತಿರೇಕೇಣಾಭಾವ ಇತಿ ದ್ರಷ್ಟವ್ಯಮ್ ।'**

(ಬ್ರ.ಸೂ.ಭಾ.2. 1. 14., ಪುಟ. 197)

ವಿಶ್ವವು ಪಾರಾಮಾರ್ಥಿಕ ಸತ್ಯವಲ್ಲವೆಂಬ ಸಂಗತಿಯನ್ನು ನಾವು ಸರಿಯಾಗಿ ಅರ್ಥಮಾಡಿಕೊಳ್ಳಬೇಕು. ಆತ್ಮೈಕ್ಯದ ಪರಿಪಕ್ವ ಅರಿವು ಮೂಡುವ ತನಕ ಈ ವ್ಯವಹಾರದ ಸತ್ಯತೆಯನ್ನು ಅಲ್ಲಗಳೆಯುವುದಿಲ್ಲ. ಸದ್ಯದ ಸ್ಥಿತಿಯಲ್ಲಿ ಈ ವಿಶ್ವ ಸತ್ಯವಾದರೂ ಅಂತಿಮಸತ್ಯವಲ್ಲ-

**'ನೈಷ ದೋಷಃ । ಸರ್ವವ್ಯವಹಾರಾಣಾಮೇವ ಪ್ರಾಗ್ ಬ್ರಹ್ಮಾತ್ಮತಾ-ವಿಜ್ಞಾನಾತ್ ಸತ್ಯತ್ವೋಪಪತ್ತೇಃ । ಸ್ವಪ್ನ ವ್ಯವಹಾರಸ್ಯೇವ ಪ್ರಾಕ್ ಪ್ರಬೋಧಾತ್ ।..... ತಸ್ಮಾತ್ ಪ್ರಾಗ್ ಬ್ರಹ್ಮಾತ್ಮತಾ ಪ್ರತಿಬೋಧಾತ್ ಉಪಪನ್ನಃ ಸರ್ವೋ ಲೌಕಿಕೋ ವೈದಿಕಶ್ಚ ವ್ಯವಹಾರಃ ।'**

(ಬ್ರ.ಸೂ.ಭಾ.2. 1. 14., ಪುಟ198)

ಇದನ್ನು ಹೀಗೆ ವಿವರಿಸಬಹುದು-

ರಕ್ತದೊತ್ತಡ ಇತ್ಯಾದಿ ರೋಗ ಇರುವ ರೋಗಿಯೊಬ್ಬ ಬೆವರು ಹೆಚ್ಚು ಕಾಣಿಸಿದಾಗ ತನಗೆ ಹೃದಯರೋಗ ಬಂದಿರಬಹುದೆ? ಎಂಬ ಶಂಕೆಯಿಂದ ವೈದ್ಯರ ಬಳಿ ಧಾವಿಸುತ್ತಾನೆ. ವೈದ್ಯನು ಪರೀಕ್ಷೆ ನಡೆಸಿ, ಕೆಲವು ವಿಶೇಷ ಪರೀಕ್ಷೆಗಳನ್ನು ಮಾಡಿಸಲು ಆದೇಶಿಸಿ ಸಂಜೆ ಕಾಣಲು ತಿಳಿಸುತ್ತಾನೆ. ಅಲ್ಲಿಯ ವರೆಗೆ ರೋಗಿಯು ನನಗೆ ಏನೇನೋ ರೋಗಗಳಿವೆಯೆಂದು ಭ್ರಮಿಸಿ ಕೊರಗುತ್ತಾನೆ. ಸಂಜೆ ವೈದ್ಯನು ವೈದ್ಯಕೀಯ ವರದಿಯನ್ನು ಪರೀಕ್ಷಿಸಿ ಯಾವ ರೋಗಗಳಿಲ್ಲವೆಂದು ಸಾರುತ್ತಾನೆ. ವೈದ್ಯರ ಈ ಘೋಷಣೆಗಿಂತ ಮೊದಲು, ರೋಗಿಯು ತನಗೆ ಬಂದಿರಬಹುದಾದ (ವಾಸ್ತವದಲ್ಲಿ ಇಲ್ಲದ) ರೋಗಗಳ ಬಗ್ಗೆ ನೆನೆಸಿಕೊಂಡು ದುಃಖಿಸುತ್ತಿರುತ್ತಾನೆ. ಇದು ಅನುಭವಕಾಲದಲ್ಲಿ ಸತ್ಯವೆನಿಸಿದರೂ ಅಂತಿಮಸತ್ಯವಲ್ಲ. ಅದರಂತೆ, ಇಂದು ತೋರುವ ಜೀವಭೇದ ಅಥವಾ ಜಡವಸ್ತುಗಳು ತೋರುವ ಕಾಲದಲ್ಲಿ ಸತ್ಯವೇ ಆಗಿದ್ದಾವೆ. ಇದನ್ನು 'ವ್ಯಾವಹಾರಿಕ ಸತ್ಯ' ಎನ್ನಲಾಗಿದೆ.ಇದು ಅಂತಿಮಸತ್ಯವಲ್ಲ. ಜ್ಞಾನಾನಂದರೂಪನೂ ನಿರ್ವಿಕಾರನೂ ಆದ ಚೇತನನಿಗೆ ಅವಿದ್ಯೆಯ ಸಂಪರ್ಕವಾದಾಗ ಕಂಡ ಪ್ರತಿಬಿಂಬವೇ ಈ 'ಜೀವ'. ಅವಿದ್ಯೆಯ

ಕೊಡುಗೆ ಈ ಭೇದ ಪ್ರಪಂಚ. ಇದನ್ನು ಸತ್ಯವೆಂದು ತಿಳಿದವನಿಗೆ ಭಯ ನಿವೃತ್ತವಾಗದು. ಭಯದ ಮೂಲವೇ ದ್ವೈತಭಾವನೆ- **'ಭಯಂ ದ್ವಿತೀಯಾಭಿನಿವೇಶತಃ ಸ್ಯಾತ್'** (ಭಾಗ 11.2.37), **'ದ್ವಿತೀಯಾದ್ ವೈ ಭಯಂ ಭವತಿ'** (ಬೃಹ. 1.4.2)

ಮನೆಯಲ್ಲಿ ಏಕಾಕಿಯಾಗಿರುವ ವ್ಯಕ್ತಿಗೆ, ತನಗರಿವಿಲ್ಲದಂತೆ ಯಾರೋ ಪ್ರವೇಶಿಸಿದರೆಂಬ ಭಾವನೆ ಬಂದಾಗ ಭಯ ಸಹಜ. ಯಾರೂ ಇಲ್ಲಿಲ್ಲ. ಇರುವುದು ನಾನೊಬ್ಬನೇ ಎಂಬ ಅರಿವು ಜಾಗೃತವಾದಾಗ ಭಯ ತಾನಾಗಿಯೇ ಕರಗುವುದು. ಈ ಹಿನ್ನೆಲೆಯಲ್ಲಿ; ಅವಿದ್ಯೆ ಹಾಗೂ ಅದರ ಕೊಡುಗೆಗಳು ಸತ್ಯವೆಂಬ ಪರಿಕಲ್ಪನೆಯೇ ದುಃಖ (ಸಂಸಾರ)ದ ಮೂಲ. ಅದ್ವಿತೀಯ ಆತ್ಮತತ್ತ್ವದ ಅರಿವಿನ ಜಾಗೃತಿ ಪಡೆಯುವುದೇ ಮುಕ್ತಿ.

ಶಾಸ್ತ್ರಗಂಥಗಳು, ಆತ್ಮನ ಸತ್ಯ-ನಿತ್ಯ-ಅದ್ವಿತೀಯ ಎಂಬ ಸತ್ಯವನ್ನು ನೆನೆಪಿಸುತ್ತವೆ. ಹೊಸದನ್ನು ಆವಿಷ್ಕರಿಸುವುದಿಲ್ಲ. ಕಳ್ಳರ ಗುಂಪಿನಲ್ಲಿ ಬೆಳೆದ ರಾಜಕುಮಾರನಿಗೆ ಅವನ ಪೂರ್ವಾಪರ ಮತ್ತು ಲಕ್ಷಣಗಳ ಅರಿವಿರುವ ಹಿತೈಷಿಯೋರ್ವನು, 'ನೀನು ರಾಜಕುಮಾರ'ನೆಂಬ ಸತ್ಯವರುಹುವನು. ಈ ಸತ್ಯದ ವಿಸ್ಮೃತಿಯೇ ರಾಜಕುಮಾರನ ದುಃಖ ದುಮ್ಮಾನಗಳಿಗೆ ಕಾರಣವಾಗಿತ್ತು. ಯಾವಾಗ ಅವನಿಗೆ ತನ್ನ ನಿಜರೂಪದ ಅರಿವಾಯಿತೋ ಅಗ ಅವನು ಅಸ್ವಾಭಾವಿಕವಾದ ಚೌರ್ಯ-ದುರ್ನಡತೆಗಳಿಂದ ದೂರನಾಗಿ ಸಂತಸದ ಬಾಳು ಬಾಳುವನು. ಅದರಂತೆ, ಶಾಸ್ತ್ರಗಳು, ಅವಿದ್ಯೆಯ ಸಂಪರ್ಕದಿಂದ ತಾನು ಜೀವನೆಂದೂ, ಈ ವಿಶ್ವವೆಲ್ಲ ಸತ್ಯವೆಂದೂ ಭ್ರಮಿಸಿ, ತನ್ನ ನಿಜರೂಪವನ್ನು ಮರೆತ ಚೇತನನಿಗೆ, 'ನೀನು ಬ್ರಹ್ಮ' ಎಂಬ ಎಚ್ಚರವನ್ನು ಮೂಡಿಸುತ್ತವೆ. ಹೊಸದಾದ ಏನನ್ನೂ ತಂದು ಕೊಡುವುದಿಲ್ಲ. ಭೇದ ಭ್ರಮೆಯನ್ನು ನಿವೃತ್ತಿಗೊಳಿಸುವುದೇ ಶಾಸ್ತ್ರದ ಗುರಿಯಾಗಿದೆ- **'ಸಿದ್ಧಂ ತು ನಿವರ್ತಕತ್ವಾತ್'** (ಮಾಂ.ಕಾ.ಭಾ. 2-32)

ಈ ಹಿನ್ನೆಲೆಯಲ್ಲಿ ಅವಿದ್ಯೆ ಮತ್ತು ಅದರ ವಿಕಾಸವೇ ಸಂಸಾರ. ಅವಿದ್ಯೆಯ ಬಿಡುಗಡೆಯಾಗಿ ನಿರ್ವಿಕಾರವಾದ ಆತ್ಮತತ್ತ್ವವೊಂದಿರುವುದೇ ಮುಕ್ತಿ- **'ಅವಿದ್ಯಾಸ್ತಮಯೋ ಮೋಕ್ಷಃ ಸಾ ಸಂಸಾರ ಉದಾಹೃತಃ'** (ಬ್ರಹ್ಮಸಿದ್ಧಿ 3.106)

ಇಂತಹ ಆತ್ಮೈಕ್ಯಜ್ಞಾನವೇ ಮುಕ್ತಿಗೆ ಉಪಾಯವೆನಿಸಿದೆ- **'ವಿದ್ಯಯಾ**

**ಅಮೃತಮಶ್ನುತೇ'** (ಈಶ. 11.), **'ತಮೇವಂ ವಿದ್ವಾನ್ ಅಮೃತ ಇಹ ಭವತಿ'** (ತೈ.ಆ. 3.1.3) ಇತ್ಯಾದಿ ಶ್ರುತಿಗಳೂ ಇದೇ ಸತ್ಯವನ್ನು ಸಾರುತ್ತಿವೆ.

ವೇದೋಕ್ತವಾದ ವರ್ಣಾಶ್ರಮೋಚಿತವಾದ ಕರ್ಮಗಳು, ಮನಸ್ಸಿನ ಕೊಳೆ ತೊಳೆಯುವ ಪ್ರಾಥಮಿಕ ಸಾಧನವೆನಿಸಿವೆ. ಅರಿವಿನ ಜಾಗೃತಿಯ ನಂತರ ಇದರ ಆವಶ್ಯಕತೆ ಇಲ್ಲ. ಇದಿಷ್ಟು ಅದ್ವೈತದರ್ಶನದ ಕಿರು ಪರಿಚಯ.

## II. ಪ್ರಮುಖ ಕೃತಿಕಾರರು

ವೇದ-ಶಾಸ್ತ್ರಗಳಲ್ಲಿ ಅದ್ವೈತ ಚಿಂತನೆ ಹೃದಯಂಗಮವಾಗಿ ನಿರೂಪಿತವಾಗಿದೆ. ಶ್ರೀ ಶಂಕರಾಚಾರ್ಯರಿಗಿಂತ ಕೆಲವು ಶತಮಾನಗಳ ಹಿಂದೆಯೇ ಬ್ರಹ್ಮಾನಂದ ಹಾಗೂ ದ್ರವಿಡಾಚಾರ್ಯರಿಂದ ಇಂತಹ ಚಿಂತನೆಗಳು ಬಿತ್ತರಿಸಲ್ಪಟ್ಟಿವೆ. ಶ್ರೀ ಶಂಕರಾಚಾರ್ಯರು, ವಾಚಸ್ಪತಿ ಮಿಶ್ರರು, ಸರ್ವಜ್ಞಾತ್ಮರೇ ಮೊದಲಾದ ಅದ್ವೈತ ವಿದ್ವಾಂಸರು ದ್ರವಿಡಾಚಾರ್ಯರ ವಾಕ್ಯಗಳನ್ನು ಉಲ್ಲೇಖಿಸಿ ವಿವರಿಸಿದ್ದಾರೆ. ಹೀಗೆ ಅನಾದಿಕಾಲದಿಂದ ಹರಿದು ಬಂದ ವಿಚಾರಧಾರೆಗೆ ಸುಂದರ ಹಾಗೂ ತರ್ಕಬದ್ಧವಾದ ನೆಲೆ ಕಲ್ಪಿಸಿದವರು ಶ್ರೀ ಗೌಡಪಾದರು ಮತ್ತು ಶ್ರೀ ಶಂಕರಾಚಾರ್ಯರು. ಅದ್ವೈತದ ಪರಂಪರೆಯನ್ನು ಪರಿಚಯಿಸುವ ಪ್ರಸಿದ್ಧ ಶ್ಲೋಕ ಹೀಗಿದೆ-

**ನಾರಾಯಣಂ ಪದ್ಮಭುವಂ ವಶಿಷ್ಠಂ ಶಕ್ತಿಂ ಚ ತತ್ಪುತ್ರಪರಾಶರಂ ಚ**
**ವ್ಯಾಸಂ ಶುಕಂ ಗೌಡಪಾದಂ ಮಹಾಂತಂ ಗೋವಿಂದ-**
**ಯೋಗೀಂದ್ರಮಥಾಸ್ಯ ಶಿಷ್ಯಮ್ ।**
**ಶ್ರೀಶಂಕರಾಚಾರ್ಯಮಥಾಸ್ಯ ಪದ್ಮಪಾದಂ ಚ**
**ಹಸ್ತಾಮಲಕಂ ಚ ಶಿಷ್ಯಂ ತಂ ತ್ರೋಟಕಂ ವಾರ್ತಿಕಕಾರಮನ್ಯಾನ್**
**ಅಸ್ಮದ್‌ಗುರೂನ್ ಸಂತತಮಾನತೋಽಸ್ಮಿ ॥**

ನಾರಾಯಣ-ಚತುರ್ಮುಖ-ವಶಿಷ್ಠ-ಶಕ್ತಿ-ಪರಾಶರ-ವ್ಯಾಸ-ಶುಕ-ಗೌಡಪಾದ-ಶಂಕರಾಚಾರ್ಯ-ಪದ್ಮಪಾದಾಚಾರ್ಯ-ಹಸ್ತಾಮಲಕಾಚಾರ್ಯ- ತ್ರೋಟಕಾಚಾರ್ಯ-ಸುರೇಶ್ವರಾಚಾರ್ಯ ಇವರೇ ಮೊದಲಾದವರು ಅದ್ವೈತ ಪರಂಪರೆಯ ಪ್ರವರ್ತಕರು.

**ಗೌಡಪಾದರು**

ಅದ್ವೈತವೇದಾಂತದ ಹಿರಿಯ ವಿದ್ವಾಂಸರಾದ ಬಾಲಕೃಷ್ಣಾನಂದ ಸರಸ್ವತಿಯವರು, ಗೌಡಪಾದರು ಕುರುಕ್ಷೇತ್ರದ ಹತ್ತಿರದ ಹೀರಾವತಿ ನದೀತೀರದಲ್ಲಿ ಜನಿಸಿದ ಗೌಡಜಾತಿಶ್ರೇಷ್ಠರೆಂದು ವರ್ಣಿಸಿದ್ದಾರೆ-

**'ಗೌಡಚರಣಾಃ ಕುರುಕ್ಷೇತ್ರಹೀರಾವತೀನದೀತೀರಭವಗೌಡಜಾತಿಶ್ರೇಷ್ಠಾಃ ದೇಶವಿಶೇಷಭವಜಾತಿನಾಮ್ನೈವ ಪ್ರಸಿದ್ಧಾಃ ದ್ವಾಪರಯುಗಮಾರಭ್ಯೈವ ಸಮಾಧಿನಿಷ್ಠತ್ವೇನ ಆಧುನಿಕೈರ್ಜನೈರಪರಿಜ್ಞಾತವಿಶೇಷಾಭಿಧಾನಾಃ ಸಾಮಾನ್ಯನಾಮ್ನೈವ ಲೋಕೇ ವಿಖ್ಯಾತಾಃ'**

ಗೌಡಪಾದರ ಮಾಂಡೂಕ್ಯಕಾರಿಕೆ, ಅದ್ವೈತತತ್ತ್ವಗಳನ್ನು ಸುಂದರವಾಗಿ ವಿವರಿಸುವ ಛಂದೋಬದ್ಧವಾದ ಕೃತಿ. ಇದರಲ್ಲಿ ನಾಲ್ಕು ಪ್ರಕರಣಗಳಿವೆ. 1. ಆಗಮಪ್ರಕರಣ, 2. ವೈತಥ್ಯಪ್ರಕರಣ, 3. ಅದ್ವೈತಪ್ರಕರಣ ಮತ್ತು 4. ಅಲಾತಶಾಂತಿಪ್ರಕರಣ.

ಮೊದಲನೆಯದಾದ ಆಗಮಪ್ರಕರಣದಲ್ಲಿ ಕಾಣಬರುವ ಕಾರಿಕೆಗಳು ಗೌಡಪಾದರ ರಚನೆಯೇ ಅಥವಾ ಉಪನಿಷತ್ತಿನ ಭಾಗವೆ ? ಎಂಬ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಮೊದಲ ಆಗಮಪ್ರಕರಣವು ಮಾಂಡೂಕ್ಯೋಪನಿಷತ್ತಿನ ವ್ಯಾಖ್ಯಾನರೂಪವಾದ ಗೌಡಪಾದರ ಕಾರಿಕೆ ಎಂಬುದು ಅದ್ವೈತದ ನಿಶ್ಚಿತ ನಿಲುವು. ಗೌಡಪಾದರ ಇತರ ಕೃತಿಗಳೆಂದು ಉಲ್ಲಿಖಿತವಾದವುಗಳು- 1. ಉತ್ತರಗೀತಾವ್ಯಾಖ್ಯಾ, 2. ಸಾಂಖ್ಯಕಾರಿಕಾ, 3. ನೃಸಿಂಹತಾಪಿನೀ ಉಪನಿಷದ್‌ವ್ಯಾಖ್ಯಾ, 4. ದುರ್ಗಾಸಪ್ತಶತೀವ್ಯಾಖ್ಯಾ, 5. ಶ್ರೀವಿದ್ಯಾರತ್ನಸೂತ್ರಾಣಿ, 6. ಸುಭಗೋದಯ. ಇವು ಗೌಡಪಾದರ ರಚನೆಯೇ ಅಲ್ಲವೇ ? ಎಂಬ ಬಗ್ಗೆ ವಿದ್ವಾಂಸರಲ್ಲಿ ಚರ್ಚೆ ಇದೆ. ಏನೇ ಇರಲಿ, ಗೌಡಪಾದರ ಪ್ರಸಿದ್ಧವಾದ ಮಾಂಡೂಕ್ಯಕಾರಿಕೆಯು ಸಕಲ ಶಾಸ್ತ್ರಸಾರವನ್ನು ತಿಳಿಸುತ್ತದೆ. ಇವರ ಶಿಷ್ಯರೇ ಗೋವಿಂದಭಗವತ್ಪಾದರು. ಇವರ ಶಿಷ್ಯರೇ ಶ್ರೀ ಶಂಕರಾಚಾರ್ಯರು.

**ಶ್ರೀ ಶಂಕರಾಚಾರ್ಯರು (8ನೇ ಶತಕ)**

ಇಂದು ಶಂಕರಾಚಾರ್ಯರ ಹೆಸರಿನಲ್ಲಿ ನೂರಾರು ಕೃತಿಗಳು ಉಪಲಬ್ಧವಿವೆ. ಶ್ರೀ ಶಂಕರಾಚಾರ್ಯರ ದೇಶ-ಕಾಲಗಳ ಬಗ್ಗೆ ಚರ್ಚೆ ನಡೆದೇ

ಇದೆ. ಕಾಂಚೀಕಾಮಕೋಟಿ ಪೀಠದ ನಿರೂಪಣೆಯಂತೆ, ಶಂಕರಾಚಾರ್ಯ ರೆಂಬ ಹೆಸರಿನಿಂದ ಪ್ರಸಿದ್ಧರಾದವರು ಐವರಿದ್ದಾರೆ. ಕ್ರಿ.ಪೂ. ದಲ್ಲಿದ್ದವರು ಆದಿ ಶಂಕರಾಚಾರ್ಯರು. ಸಮಾನಶೈಲಿಯುಳ್ಳ ಪ್ರಸ್ಥಾನತ್ರಯಭಾಷ್ಯಗಳು ಅವರ ಕೃತಿಗಳೆಂದು ಹಲವು ವಿದ್ವಾವೃದ್ಧರ ನಂಬಿಕೆ. ಕಾಂಚೀಮಠ ಪರಂಪರೆ ನೀಡುವ ಐವರು ಶಂಕರಾಚಾರ್ಯರ ನಾಮಧೇಯಗಳು ಹೀಗಿವೆ-

1. ಆದಿಶಂಕರಾಚಾರ್ಯ (ಪ್ರಸ್ಥಾನತ್ರಯಭಾಷ್ಯಕಾರರು) ಕ್ರಿ.ಪೂ. 508-476
2. ಕೃಪಾಶಂಕರಾಚಾರ್ಯ (ಷಣ್ಮತಸ್ಥಾಪಕರು) ಕ್ರಿ.ಶ. 28-69
3. ಉಜ್ವಲಶಂಕರಾಚಾರ್ಯ (ವಾಕ್ಯಾರ್ಥಪಟು) ಕ್ರಿ.ಶ. 29-367
4. ಅರ್ಭಕಶಂಕರಾಚಾರ್ಯ (ಕಾಂಚೀಮಠಸ್ಥಾಪಕರು) ಕ್ರಿ.ಶ. 398-437
5. ಅಭಿನವ ಶಂಕರಾಚಾರ್ಯ ಕ್ರಿ.ಶ. -840
   (ಕೆಲವು ಶಂಕರದಿಗ್ವಿಜಯೋಕ್ತ ಮಹಿಮರು)

ಪ್ರಚಲಿತ ಬ್ರಹ್ಮಸೂತ್ರಶಾಂಕರಭಾಷ್ಯದಲ್ಲಿ ದಿಙ್ನಾಗನ ಆಲಂಬನಪರೀಕ್ಷಾ ಗ್ರಂಥದ ವಾಕ್ಯೋಲ್ಲೇಖವಿದೆ (2-2-28) -

**'ಯದಂತಜ್ಞೇಯರೂಪಂ ಬಹಿರ್ವದವಭಾಸತೇ ।'** (ಕಾರಿಕಾ)

ಉಲ್ಲಿಖಿತ ಶ್ಲೋಕದ ಉತ್ತರಾರ್ಧ ಹೀಗಿದೆ-

**'ಸೋಽರ್ಥೋ ವಿಜ್ಞಾನರೂಪತ್ವಾತ್ ತತ್ಪ್ರತ್ಯಯತಾಪಿ ಚ ।'**

ಇದು ಎಂಟು ಶ್ಲೋಕಗಳನ್ನೊಳಗೊಂಡ ಈ ಕೃತಿಯ ಆರನೆಯ ಶ್ಲೋಕವಾಗಿದೆ.

ಇದರಂತೆ ಧರ್ಮಕೀರ್ತಿ (635-670)ಯ ಆಶಯವನ್ನು ಅನುವಾದ ಮಾಡಲಾಗಿದೆ-

**'ಅಪಿ ಚ ಸಹೋಪಲಂಭನಿಯಮಾತ್ ಅಭೇದೋ ವಿಷಯಜ್ಞಾನ-ಯೋರಾಪತತಿ'** (ಬ್ರ.ಸೂ.ಭಾ. 2-2-28)

ಇದರ ಮೂಲ ಶ್ಲೋಕ ಹೀಗಿದೆ-

**'ಸಹೋಪಲಂಭನಿಯಮಾದಭೇದೋ ನೀಲತದ್ಧಿಯೋಃ ।'**

(ಪ್ರಮಾಣವಿನಿಶ್ಚಯ)

'ಭೇದಶ್ಚ ಭ್ರಾಂತವಿಜ್ಞಾನೈರ್ದೃಶ್ಯತೇಂದಾವಿವಾದ್ವಯೇ ॥'

(ಪ್ರಮಾಣಕಾರಿಕಾ, ಪುಟ 181)

ಈ ಮೇಲಿನ ಶ್ಲೋಕಗಳ ಸಾರವು ಬೃಹದಾರಣ್ಯಕಭಾಷ್ಯವಾರ್ತಿಕದಲ್ಲಿ (4-3-473) ಸುರೇಶ್ವರಾಚಾರ್ಯರಿಂದಲೂ ವಿವರಿಸಲ್ಪಟ್ಟಿದೆ. ಧರ್ಮಕೀರ್ತಿಯ ಕಾಲವು 635-670 ಎಂದು ನಿರ್ಧರಿಸಲ್ಪಟ್ಟಿದೆ. ಈ ಹಿನ್ನೆಲೆಯಲ್ಲಿ ಆದಿ ಶಂಕರಾಚಾರ್ಯರ ಕಾಲವನ್ನು 788-820 ಎಂದು ಸ್ಥೂಲವಾಗಿ ನಿರ್ಧರಿಸಬಹುದಾಗಿದೆ. ಇದು ಕೆಲವು ವಿಮರ್ಶಕರ ಆಶಯ.

ಶ್ರೀ ಶಂಕರಾಚಾರ್ಯರ ಆವಿರ್ಭಾವಕಾಲದಲ್ಲಿ ವೈದಿಕಧರ್ಮ ಜಿಡ್ಡುಗಟ್ಟಿತ್ತು. ಜೈನ-ಬೌದ್ಧರ ಪ್ರಾಬಲ್ಯ ವ್ಯಾಪಕವಾಗಿದ್ದಿತು. ವೇದ-ಪುರಾಣ-ತಂತ್ರಗ್ರಂಥಗಳ ಮೂಲಸ್ಫೂರ್ತಿಯರಿಯದ, ಶಾಕ್ತ-ವಾಮಾಚಾರ ಪದ್ಧತಿಗಳು ಸನಾತನ ವೈದಿಕಧರ್ಮದ ತಪ್ಪುಗ್ರಹಿಕೆಯಿಂದ ಜನಸಾಮಾನ್ಯರಲ್ಲಿ ವೈದಿಕಧರ್ಮದ ಬಗ್ಗೆ ಅನಾದರ ಮೂಡಿಸಿದ್ದವು.

ರಾಜಶೇಖರನ ಕರ್ಪೂರಮಂಜರಿ (ಶ್ಲೋ. 1-22) ಅಂದಿನ ವಾಮಾಚಾರಿಗಳ ಸ್ಥಿತಿಯನ್ನು ವರ್ಣಿಸುತ್ತದೆ-

**ಮಂತೋಣ ತಂತೋಣ ಅ ಕಿಂಪಿ ಚಾಣಂ**
**ಝಾಣಂ ಚಣೋ ಕಿಂಪಿ ಗುರುಪ್ಪಸಾದಾ ।**
**ಮಜ್ಜಂ ಪಿ ಆಮೋ ಮಹಿಲಂ ರಮಾಮೋ**
**ಮೋಕ್ಖಂ ಚ ಜಾಮೋ ಕುಲಮಗ್ಗಲಗ್ಗಾ ॥**

ಮದ್ಯಮಾಂಸಮಾನಿನಿಯರ ಮೇರೆ ಇಲ್ಲದ ಅನುಭೂತಿಯೊಂದಿಗೆ ಧರ್ಮದ ಹೆಸರಿನಲ್ಲಿ ವ್ಯಸನಪರಂಪರೆ ಬೀಡುಬಿಟ್ಟಿತ್ತು. ಮತ್ತೊಂದೆಡೆ ರಾಜಾಶ್ರಯವನ್ನು ಪಡೆದ ಕೆಲವು ಸಂಕುಚಿತ ಜೈನ-ಬೌದ್ಧ ದಾರ್ಶನಿಕರ ದಬ್ಬಾಳಿಕೆ ವೈದಿಕಧರ್ಮಕ್ಕೆ ಆಘಾತ ನೀಡಿತ್ತು-

**'ಸಶಿಷ್ಯಸಂಘಾಃ ಪ್ರವಿಶಂತಿ ರಾಜ್ಞಾಂ ಗೇಹಂ**
**ತದಾದಿಸ್ವವಶೇ ವಿಧಾತುಮ್ ।**
**ರಾಜಾ ಮದೀಯೋಽಜಿರಮಸ್ಮದೀಯಂ**
**ತದಾದ್ರಿಯಧ್ವಂ ನ ತು ವೇದಮಾರ್ಗಮ್ ॥'** (ಮಾ.ಶಂ.ದಿ. 7-91)

ಹೀಗೆ ವೈದಿಕಧರ್ಮದ ಅವನತಿ ಮತ್ತು ಒತ್ತಡಕ್ಕೊಳಪಟ್ಟ ಕಾಲದಲ್ಲಿ ಆರ್ಯಾಂಬಾ-ಶಿವಗುರು ದಂಪತಿಗಳಲ್ಲಿ ಜನಿಸಿದ ಅಸಾಧಾರಣ ಪ್ರತಿಭಾನ್ವಿತ ಶಿಶು, ಗೋವಿಂದಭಗವತ್ಪಾದರಲ್ಲಿ ಸನ್ಯಾಸದೀಕ್ಷೆ ಪಡೆದು ಶಂಕರಾಚಾರ್ಯರೆನಿಸಿದರು. 32 ವರ್ಷಗಳಲ್ಲಿ ಅಖಂಡ ಭಾರತವನ್ನು ಸಂಚರಿಸಿ ಜ್ಞಾನದ (ಆತ್ಮತತ್ತ್ವದ) ಮಹತ್ತ್ವವನ್ನು ಪ್ರಚುರಪಡಿಸಿದ ಶ್ರೀ ಶಂಕರಾಚಾರ್ಯರ ಸಾಧನೆ ಅಸಾಧಾರಣವಾದುದು-

**ಅಷ್ಟವರ್ಷೇ ಚತುರ್ವೇದೀ ದ್ವಾದಶೇ ಸರ್ವಶಾಸ್ತ್ರವಿತ್ ।**
**ಷೋಡಶೇ ಕೃತವಾನ್ ಭಾಷ್ಯಂ ದ್ವಾತ್ರಿಂಶೇ ಮುನಿರಭ್ಯಗಾತ್ ॥**

ಬುದ್ಧಿಜೀವಿಗಳಲ್ಲಿ ದರ್ಶನವಿಚಾರಗಳ ಬಗ್ಗೆ ಭಿನ್ನಾಭಿಪ್ರಾಯ ಸಹಜವಿರಬಹುದಾದರೂ, ಶ್ರೀ ಶಂಕರಾಚಾರ್ಯರು ವೈದಿಕಧರ್ಮಸ್ಥಾಪನೆ ಮತ್ತು ಸಂರಕ್ಷಣೆಗಾಗಿ ಅಂದು ಮಾಡಿದ ಮಹಾಕಾರ್ಯಗಳು ಎಂದೆಂದಿಗೂ ಸ್ಮರಣಾರ್ಹವಾಗಿವೆ. ಇಂದಿಗೂ ಶ್ರೀ ಶಂಕರರ ಪರಂಪರೆಯ ಅನೇಕ ಮಠಗಳು ವಿಶೇಷವಾಗಿ ಚತುರಾಮ್ನಾಯ ಪೀಠಗಳು ವೇದ-ಸಂಸ್ಕೃತಿ ಸಂರಕ್ಷಣೆಯ ಕಾರ್ಯಗಳನ್ನು ಅವ್ಯಾಹತವಾಗಿ ನಡೆಸಿಕೊಂಡು ಬರುತ್ತಿವೆ. ಕಾಂಚೀ ಪರಮಾಚಾರ್ಯರೂ ದಿಗಂತವಿಶ್ರಾಂತಕೀರ್ತಿಗಳೂ ಆದ ಶ್ರೀ ಚಂದ್ರಶೇಖರೇಂದ್ರ ಸರಸ್ವತೀ ಸ್ವಾಮಿಗಳವರು ಅನೇಕ ಮಾಧ್ವರಿಗೆ, ಶ್ರೀವೈಷ್ಣವರಿಗೆ ವೇದ-ಶಾಸ್ತ್ರಾಭ್ಯಾಸಂಗ ಮಾಡಿಸಿ ಅವರ ಪಾಠಶಾಲೆಗಳ ಆರ್ಥಿಕ ಭಾರ ಹೊತ್ತಿದ್ದರು. ಇದು ಗೌರವಾದರಗಳಿಂದ ಉಲ್ಲೇಖಾರ್ಹವಾಗಿದೆ. ಪರಮಪೂಜ್ಯ ಪೇಜಾವರ ಮಠದ ಶ್ರೀ ವಿಶ್ವೇಶತೀರ್ಥ ಶ್ರೀಪಾದರ ಪೂರ್ಣಪ್ರಜ್ಞ ವಿದ್ಯಾಪೀಠವೂ ಅನೇಕ ಶಾಂಕರಪಂಥದ ವಿದ್ಯಾರ್ಥಿಗಳಿಗೆ ಶಾಸ್ತ್ರಗಳ ಶಿಕ್ಷಣ ನೀಡಿ ಗೌರವಿಸುತ್ತಿರುವುದು ಅಭಿನಂದನಾರ್ಹವಾಗಿದೆ.

ಅನೇಕ ಮಾಧ್ವ ವಿದ್ಯಾರ್ಥಿಗಳು ಮತ್ತು ವಿದ್ವಾಂಸರು ಚೆನ್ನೈನ ಶ್ರೀ ಮಣಿ ದ್ರಾವಿಡಶಾಸ್ತ್ರಿಗಳಲ್ಲಿ ಹಾಗೂ ಪುಣೆಯ ಖ್ಯಾತನಾಮರಾದ ಶ್ರೀ ದೇವದತ್ತ ಪಾಟೀಲರಲ್ಲಿ ಮೀಮಾಂಸಾ ತರ್ಕಶಾಸ್ತ್ರಗಳನ್ನು ಅಧ್ಯಯನ ಮಾಡುತ್ತಿರುವುದು ಅಭಿಮಾನದಿಂದ ಉಲ್ಲೇಖಾರ್ಹ ಸಂಗತಿಯಾಗಿದೆ. ದರ್ಶನಗಳ ವಿಭಿನ್ನ ಚಿಂತನೆಗಳ ನಡುವೆಯೂ ದಾರ್ಶನಿಕರಲ್ಲಿ ಇರಬೇಕಾದ ಇಂತಹ ಸೌಜನ್ಯ-ಸೌಹಾರ್ದಗಳು ಎಲ್ಲ ಕಾಲಕ್ಕೂ ಅನುಕರಣೀಯವಾಗಿವೆ.

## ಪದ್ಮಪಾದಾಚಾರ್ಯ (850-900)

ಶ್ರೀ ಪದ್ಮಪಾದಾಚಾರ್ಯರು ಶಂಕರಾಚಾರ್ಯರ ನೆಚ್ಚಿನ ಶಿಷ್ಯರು. ಅವರ ಗುರುಭಕ್ತಿಯ ಬಗ್ಗೆ ರೋಚಕವಾದ ಕಥೆಯೊಂದನ್ನು ಮಾಧವೀಯ ಶಂಕರದಿಗ್ವಿಜಯವು ದಾಖಲಿಸುತ್ತದೆ. ಇವರ ಮೊದಲ ಹೆಸರು ಸದಾನಂದ. ಗುರುಗಳ ಆದೇಶದ ಮೇರೆಗೆ ಹರಿಯುವ ಗಂಗೆಯಲ್ಲಿ ಹೆಜ್ಜೆ ಇಟ್ಟಾಗ ಗಂಗಾದೇವಿ, ಇವರ ಗುರುಭಕ್ತಿಗೆ ಮೆಚ್ಚಿ ಪಾದಗಳಿಗೆ ಆಸರೆಯಾಗಿ ಕಮಲವನ್ನು ನೀಡಿದಳು. ಈ ಹಿನ್ನೆಲೆಯಲ್ಲಿ ಅವರು ಪದ್ಮಪಾದಾಚಾರ್ಯ ರೆನಿಸಿದರು. ಗುರುಗಳ ಆದೇಶದಂತೆ ಅವರ ಶಾರೀರಕಭಾಷ್ಯಕ್ಕೆ ಕೈಂಕರ್ಯ ರೂಪವಾಗಿ 'ಪಂಚಪಾದಿಕಾ' ಎಂಬ ವ್ಯಾಖ್ಯಾನವನ್ನು ರಚಿಸಿದರು. ವಾಸ್ತವ ದಲ್ಲಿ ಈ ಕೃತಿ ಸಮಗ್ರ ವ್ಯಾಖ್ಯಾನವಾಗಿತ್ತಾದರೂ ಇವರ ಪೂರ್ವಾಶ್ರಮದ ಅನುಬಂಧಿಯಾದ ಕರ್ಮಠ ಮೀಮಾಂಸಕನಿಂದ ಅದು ಮನೆಯೊಡನೆ ಸುಡಲ್ಪಟ್ಟಿತು. ಶ್ರೀ ಪದ್ಮಪಾದಾಚಾರ್ಯರು ಎಷ್ಟು ಭಾಗವನ್ನು ಶ್ರೀಶಂಕರಾಚಾರ್ಯರ ಬಳಿಗೆ ಅನುವಾದ ಮಾಡಿದ್ದರೋ ಅಷ್ಟು ಭಾಗವನ್ನು ಮರಳಿ ಶಂಕರಾಚಾರ್ಯರು ಪದ್ಮಪಾದರಿಗೆ ಹೇಳಿದರು. ಬ್ರಹ್ಮಸೂತ್ರದ ಮೊದಲ ಅಧ್ಯಾಯ ಹಾಗೂ ಎರಡನೆಯ ಅಧ್ಯಾಯದ ವರೆಗಿನ ಭಾಗವನ್ನು ಗುರುಗಳ ಅಸಾಧಾರಣ ಧಾರಣಾಶಕ್ತಿಯಿಂದ ಕೇಳಿ ಮರಳಿ ಲಿಪಿಬದ್ಧ ಗೊಳಿಸಿದರು- ಪದ್ಮಪಾದಾಚಾರ್ಯರು. ಆದರೆ ಇಂದು ನಮ್ಮ ದೌರ್ಭಾಗ್ಯ ದಿಂದ ಇದು ಕೇವಲ ನಾಲ್ಕು ಸೂತ್ರಗಳ ವರೆಗೆ ಮಾತ್ರ ದೊರಕುತ್ತಿದೆ. ಇವರು 'ಸ್ವರೂಪಾನುಭವ', 'ಶಿವಪಂಚಾಕ್ಷರೀಭಾಷ್ಯ' ಎಂಬ ಸ್ವತಂತ್ರಕೃತಿಗಳನ್ನೂ ರಚಿಸಿದ್ದಾರೆ.

## ಸುರೇಶ್ವರಾಚಾರ್ಯ (850-900)

ಶಂಕರಾಚಾರ್ಯರ ಸಾಕ್ಷಾತ್‌ಶಿಷ್ಯರಲ್ಲಿ ಪ್ರಕೃಷ್ಟರಾದ ಸುರೇಶ್ವರಾ ಚಾರ್ಯರು ಬೃಹದಾರಣ್ಯಭಾಷ್ಯವಾರ್ತಿಕ, ತೈತ್ತಿರೀಯಭಾಷ್ಯವಾರ್ತಿಕ, ನೈಷ್ಕರ್ಮ್ಯಸಿದ್ಧಿ, ಮಹಾವಾಕ್ಯಾರ್ಥಪಂಚೀಕರಣ, ಮೋಕ್ಷನಿರ್ಣಯ ಮೊದಲಾದ ಕೃತಿಗಳನ್ನು ರಚಿಸಿದ್ದಾರೆ. ಮಂಡನಮಿಶ್ರರೇ ಶಂಕರಾಚಾರ್ಯರ ಬಳಿ ವಾದದಲ್ಲಿ ಪರಾಜಿತರಾಗಿ ಸುರೇಶ್ವರಾಚಾರ್ಯರಾಗಿ ವಿಖ್ಯಾತ ರಾದರೆಂದು ಕೆಲವರ ಆಶಯವಿದೆ. ಮಂಡನಮಿಶ್ರರ ಬ್ರಹ್ಮಸಿದ್ಧಿಯನ್ನು ಸಂಪಾದಿಸಿದ ಪ್ರೊ। ಕುಪ್ಪುಸ್ವಾಮಿ ಶಾಸ್ತ್ರಿಗಳು ಇದರ ಬಗ್ಗೆ ವಿಭಿನ್ನ ನಿಲುವನ್ನು

ತಳೆದಿದ್ದಾರೆ. ಉಪಲಬ್ಧವಾದ ನೈಷ್ಕರ್ಮ್ಯಸಿದ್ಧಿ ಅದ್ವೈತಸಿದ್ಧಾಂತದ ತತ್ವಗಳನ್ನು ಉದಾಹರಣಪೂರ್ವಕವಾಗಿ ಮನಮುಟ್ಟುವಂತೆ ವರ್ಣಿಸಿದ ಶ್ರೇಷ್ಠ ಕೃತಿಯಾಗಿದೆ.

**ವಾಚಸ್ಪತಿ ಮಿಶ್ರ (900)**

ಷಡ್ದರ್ಶನಾಚಾರ್ಯರೆಂದೇ ವಿಖ್ಯಾತರಾದ ವಾಚಸ್ಪತಿ ಮಿಶ್ರರು,ಸಕಲ ಶಾಸ್ತ್ರಗಳಲ್ಲಿಯೂ ಕೊಡುಗೆಯನ್ನು ನೀಡುವ ಮೂಲಕ ದರ್ಶನಕ್ಷೇತ್ರದಲ್ಲಿ ಅವಿಸ್ಮರಣೀಯರಾಗಿದ್ದಾರೆ. ಶ್ರೀ ಶಂಕರಾಚಾರ್ಯರ ಶಾರೀರಕಭಾಷ್ಯಕ್ಕೆ ರಚಿಸಿದ ಅವರ ವ್ಯಾಖ್ಯೆಯ ಹೆಸರು 'ಭಾಮತೀ' ಎಂಬುದಾಗಿದೆ. ಇವರ ವ್ಯಾಖ್ಯಾನದ ಅಸಾಧಾರಣ ಪ್ರೌಢಿಮೆಯನ್ನು ಗೌರವಿಸಿ ಅವರ ಕೃತಿಗೆ ವ್ಯಾಖ್ಯಾನಗಳ ಪರಂಪರೆಯೇ ಮುಂದುವರೆಯಿತು. ಇವರ ವಿಚಾರಧಾರೆ ನಂತರದಲ್ಲಿ 'ಭಾಮತೀಪ್ರಸ್ಥಾನ'ವೆಂದೇ ಗೌರವಿಸಲ್ಪಟ್ಟಿದೆ. ಇವರ ಭಾಮತೀಕೃತಿಗೆ ಅಮಲಾನಂದರು 'ಕಲ್ಪತರು' ಎಂಬ ವ್ಯಾಖ್ಯಾನವನ್ನು ರಚಿಸಿದರೆ, ಅದಕ್ಕೆ ಅಪ್ಪಯ್ಯದೀಕ್ಷಿತರು 'ಪರಿಮಳ' ಎಂಬ ಟಿಪ್ಪಣಿಯನ್ನು ರಚಿಸಿದ್ದಾರೆ. ಇವೆಲ್ಲ ಕೃತಿಗಳು ವಿದ್ವಾಂಸರಿಗೆ ರಸದೌತಣವನ್ನು ನೀಡುತ್ತವೆ. ವಾಚಸ್ಪತಿ ಮಿಶ್ರರು ಬ್ರಹ್ಮಸಿದ್ಧಿಗೆ ವ್ಯಾಖ್ಯಾನರೂಪವಾಗಿ 'ಬ್ರಹ್ಮತತ್ತ್ವಸಮೀಕ್ಷಾ' ಎಂಬ ಕೃತಿಯನ್ನು ರಚಿಸಿದ್ದಾರೆ. ಮಂಡನಮಿಶ್ರರ 'ವಿಧಿವಿವೇಕ' ಎಂಬ ಮತ್ತೊಂದು ಕೃತಿಗೆ ಅವರು ರಚಿಸಿದ ವ್ಯಾಖ್ಯೆ 'ನಾಯಕಣಿಕಾ' ಎಂದು ಪ್ರಸಿದ್ಧವಾಗಿದೆ. ಪೂರ್ವಮೀಮಾಂಸಾ ದರ್ಶನದ ಭಾಟ್ಟಪರಂಪರೆಯ ಚಿಂತನೆಗಳನ್ನು ಹೃದಯಂಗಮವಾಗಿ ವಿವರಿಸುವ ಅವರ ಸ್ವತಂತ್ರ ಕೃತಿ 'ತತ್ವಬಿಂದು'. ಸಾಂಖ್ಯದರ್ಶನದ ಸೂಕ್ಷ್ಮಗಳನ್ನು ಪರಿಚಯಿಸುವ ಅವರ ಮತ್ತೊಂದು ವಿಖ್ಯಾತ ಕೃತಿ 'ಸಾಂಖ್ಯತತ್ವಕೌಮುದೀ'. 'ನ್ಯಾಯಕಣಿಕಾ ತಾತ್ಪರ್ಯ' ಇನ್ನೊಂದು ಇವರ ಪ್ರಸಿದ್ಧವಾದ ಕೃತಿಯಾಗಿದೆ.

**ಪ್ರಕಾಶಾತ್ಮಮುನಿ (1200)**

ಶ್ರೀ ಪದ್ಮಪಾದಾಚಾರ್ಯರ ಪಂಚಪಾದಿಕೆಗೆ ಪ್ರಕಾಶಾತ್ಮಮುನಿಗಳು ರಚಿಸಿದ ವ್ಯಾಖ್ಯೆಯೇ 'ವಿವರಣ'ವೆಂದು ವಿಖ್ಯಾತವಾಗಿದೆ. ಅದ್ವೈತಗ್ರಂಥಗಳಲ್ಲಿ ಅತ್ಯಂತ ಪ್ರೌಢವೂ ವಾಕ್ಯಾರ್ಥಪ್ರಿಯರಿಗೆ ರಂಜಕವೂ ಆದ ಈ ಕೃತಿಯ ಮೇಲೆ ಅನೇಕ ವ್ಯಾಖ್ಯಾನಗಳು ಮುದ್ರಿತಗೊಂಡಿವೆ. ಇವರ ಚಿಂತನಪದ್ಧತಿ

ಯಿಂದ ಪ್ರಭಾವಿತವಾದ ದಾರ್ಶನಿಕಪ್ರಪಂಚವು ಇವರ ಚಿಂತನೆಗಳನ್ನು 'ವಿವರಣಪ್ರಸ್ಥಾನ'ವೆಂದು ಗೌರವಿಸಿದೆ. 'ಶಾರೀರಕನ್ಯಾಯಸಂಗ್ರಹ', 'ಶಬ್ದನಿರ್ಣಯ ಹಾಗೂ ಲೌಕಿಕನ್ಯಾಯಸಂಗ್ರಹ' ಇವರ ಇತರ ಕೃತಿಗಳು.

**ಚಿತ್ಸುಖಾಚಾರ್ಯ (1220)**

ಅದ್ವೈತವೇದಾಂತದಲ್ಲಿ ಅತ್ಯಂತ ವಿಖ್ಯಾತರಾದ ಕೃತಿಕಾರರು ಶ್ರೀ ಚಿತ್‌ಸುಖಾಚಾರ್ಯರು. ಜ್ಞಾನೋತ್ತಮರ ಶಿಷ್ಯರಾದ ಇವರು 'ತತ್ವಪ್ರದೀಪಿಕಾ' ಎಂಬ ಅಪೂರ್ವ ಕೃತಿಯನ್ನು ರಚಿಸಿದ್ದಾರೆ. ನವ್ಯನ್ಯಾಯದ ಪರಿಷ್ಕಾರಪದ್ಧತಿಯನ್ನು ಅಳವಡಿಸಿಕೊಂಡು ಅದ್ವೈತವೇದಾಂತದ ಪ್ರಮುಖ ತತ್ತ್ವಗಳನ್ನು ಇಲ್ಲಿ ಪ್ರಬಲವಾಗಿ ಸಮರ್ಥಿಸಿದ್ದಾರೆ. ಇವರು, 'ಅಧಿಕರಣ ಸಂಗತಿ', 'ಅಧಿಕರಣಮಂಜರೀ', 'ನೈಷ್ಕರ್ಮ್ಯಸಿದ್ಧಿವ್ಯಾಖ್ಯಾ' (ಭಾವತತ್ತ್ವ ಪ್ರಕಾಶಿಕಾ), 'ಭಾವದ್ಯೋತನಿಕಾ' (ಪಂಚಪಾದಿಕಾವಿವರಣವ್ಯಾಖ್ಯಾ), 'ಪ್ರಮಾಣರತ್ನಾವಲೀನಿಬಂಧ', 'ಅಭಿನಯಪ್ರಕಾಶ' (ಬ್ರಹ್ಮಸಿದ್ಧಿವ್ಯಾಖ್ಯಾ) ಮೊದಲಾದ ಕೃತಿಗಳನ್ನು ರಚಿಸಿದ್ದಾರೆ. ಆನಂದಬೋಧರ ನ್ಯಾಯ-ಮಕರಂದದ ಮೇಲಿನ 'ವೇದಾಂತಸಿದ್ಧಾಂತಕಾರಿಕಾಮಂಜರೀ' ಎಂಬ ವ್ಯಾಖ್ಯಾನ ಹಾಗೂ ಶ್ರೀಹರ್ಷನ ಖಂಡನಖಂಡಖಾದ್ಯದ ಇವರ ವ್ಯಾಖ್ಯಾನವು ವಿದ್ವಾಂಸರ ವಲಯದಲ್ಲಿ ಅಪಾರ ಮನ್ನಣೆ ಗಳಿಸಿವೆ.

**ಶ್ರೀ ವಿದ್ಯಾರಣ್ಯರು (14ನೇ ಶತಕ)**

ಇವರ ಪೂರ್ವಾಶ್ರಮದ ಹೆಸರು ಮಾಧವಾಚಾರ್ಯ. ಮಾಧವಾಚಾರ್ಯರ ನಿರ್ದೇಶದಂತೆ ತಮ್ಮನಾದ ಸಾಯಣರು ವೇದಭಾಷ್ಯ ಗಳನ್ನು ರಚಿಸಿದರು. ಇವು ಸಾಯಣಭಾಷ್ಯವೆಂದೇ ಪ್ರಸಿದ್ಧವಾಗಿದ್ದಾವೆ. ಶ್ರೀಮಾಧವಾಚಾರ್ಯರು ಸನ್ಯಾಸದೀಕ್ಷೆಯ ನಂತರ 'ವಿದ್ಯಾರಣ್ಯ'ರೆಂದು ವಿಖ್ಯಾತರಾಗಿದ್ದಾರೆ. ಶ್ರೀ ಶಂಕರಾಚಾರ್ಯರ ನಂತರ ಅಪೂರ್ವ ವ್ಯಕ್ತಿತ್ವವನ್ನು ತೋರಿದ ಶ್ರೀ ವಿದ್ಯಾರಣ್ಯರು ವಿಜಯನಗರ ಸಾಮ್ರಾಜ್ಯದ ಸಂಸ್ಥಾಪಕರಾಗಿ ಮೆರೆದಿದ್ದಾರೆ. ಶಾಸನಗಳು ಹಾಗೂ ಪ್ರಾಚೀನಕೃತಿಗಳು ಕರ್ನಾಟಕ ಸಿಂಹಾಸನಾಧೀಶ್ವರರೆಂದು ಇವರನ್ನು ವರ್ಣಿಸಿದ್ದಾವೆ. ಇವರ ವಿಖ್ಯಾತ ಕೃತಿಗಳು- 'ಪಂಚದಶೀ', 'ಜೀವನ್ಮುಕ್ತಿವಿವೇಕ', 'ಅನುಭೂತಿಪ್ರಕಾಶಿಕಾ', 'ಪಂಚಕೋಶವಿಚಾರ', 'ಬ್ರಹ್ಮವಿದಾಶೀರ್ವಾದಪದ್ಧತಿ', 'ಮಹಾವಾಕ್ಯ

ವಿವರಣ', 'ವಾಕ್ಯಸುಧಾ', 'ವಿವರಣಪ್ರಮೇಯಸಂಗ್ರಹ', 'ಬೃಹದಾರಣ್ಯ ವಾರ್ತಿಕಸಾರ', 'ನೃಸಿಂಹತಾಪಿನ್ಯುಪನಿಷದ್ದೀಪಿಕಾ', 'ಪರಾಶರಮಾಧವೀಯ' ಇತ್ಯಾದಿಗಳು. ಇವರ ಕೃತಿಗಳು ದರ್ಶನಕ್ಷೇತ್ರದಲ್ಲಿ ವಿಶಿಷ್ಟ ಸ್ಥಾನವನ್ನು ಪಡೆದಿದ್ದಾವೆ.

### ಶ್ರೀ ನೃಸಿಂಹಾಶ್ರಮಿಗಳು (15ನೇ ಶತಕ)

ಗೀರ್ವಾಣೇಂದ್ರ ಸರಸ್ವತಿಗಳ ಶಿಷ್ಯರಾದ ನೃಸಿಂಹಾಶ್ರಮಿಗಳು ಅದ್ವೈತವೇದಾಂತದಲ್ಲಿ ಪ್ರಧಾನಕೃತಿಕಾರರು. ಅವರ 'ಅದ್ವೈತದೀಪಿಕಾ', 'ವೇದಾಂತತತ್ತ್ವವಿವೇಕ', 'ತತ್ತ್ವವಿವೇಕದೀಪನ', 'ಅದ್ವೈತರತ್ನಕೋಶ', 'ಅದ್ವೈತಸಿದ್ಧಾಂತವೈಜಯಂತೀ', 'ತತ್ತ್ವಂಪದಪ್ರಕಾಶ', 'ವೇದಾಂತರತ್ನ ಕೋಶ', 'ಭಾವಪ್ರಕಾಶಿಕಾ', 'ಭೇದಧಿಕ್ಕಾರ', 'ಮನೀಷಾಪಂಚಕವ್ಯಾಖ್ಯಾ', 'ಭಾವಜ್ಞಾನಪ್ರಕಾಶ', 'ವಾಚಾರಂಭಣವಿಮರ್ಶ', 'ತತ್ತ್ವಬೋಧಿನೀ' ಮೊದಲಾದ ಕೃತಿಗಳು ಇಂದಿಗೂ ವಾಕ್ಯಾರ್ಥಪಟುಗಳಾದ ವಿದ್ವಾಂಸರ ಮನಸ್ಸಿನಲ್ಲಿ ಹಿರಿದಾದ ಸ್ಥಾನವನ್ನು ಪಡೆದಿದ್ದಾವೆ. ಅದ್ವೈತವೇದಾಂತದ ಮೇಲೆ ಇತರ ದಾರ್ಶನಿಕರು ಮಾಡಿದ ಆಕ್ಷೇಪಗಳನ್ನು ಪರಿಹರಿಸಿ ಅದ್ವೈತದ ನಿಲುವಿನ ಪೂರ್ಣತೆಯನ್ನು ಮನದಟ್ಟಾಗುವಂತೆ ವಿವರಿಸಿದ ಹಿರಿಮೆ ನೃಸಿಂಹಾಶ್ರಮಿಗಳ ಕೃತಿಗಳಿಗಿದೆ.

### ಶ್ರೀ ಅಪ್ಪಯ್ಯದೀಕ್ಷಿತರು (1520-1593)

ಶಾಂಕರಪರಂಪರೆಯಲ್ಲಿ ವಾಚಸ್ಪತಿ ಮಿಶ್ರರಂತೆ ಕಂಗೊಳಿಸುವ, ಷಡ್‌ದರ್ಶನಗಳ ಮೇಲೆ ತಮ್ಮ ಕೃತಿಗಳ ಮೂಲಕ ಪ್ರಭುತ್ವವನ್ನು ಸಾರಿದ ಅಪ್ಪಯ್ಯದೀಕ್ಷಿತರು ಅಸಾಧಾರಣ ಪ್ರತಿಭಾವಂತರು. ಸಂಸ್ಕೃತ ವಾಙ್ಮಯದಲ್ಲಿ ನೂರಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ ಹಿರಿಮೆ ಇವರದಾಗಿದೆ. ಸಾರಸ್ವತಪ್ರಪಂಚಕ್ಕೆ ಇವರು ನೀಡಿದ ಕೊಡುಗೆ ಅವಿಸ್ಮರಣೀಯವಾದುದು. 'ಭಾಮತೀ'ವ್ಯಾಖ್ಯಾನವಾದ ಅಮಲಾನಂದರ ಕಲ್ಪತರುವಿನ ಮೇಲೆ ರಚಿಸಿದ ಇವರ 'ಪರಿಮಳ' ವಿದ್ವಾಂಸರಿಗೆ ಮುದ ನೀಡುವುದು. ಇವರ 'ನ್ಯಾಯರಕ್ಷಾಮಣಿ', 'ಶಿವಾರ್ಕಮಣಿದೀಪಿಕಾ' ಮೊದಲಾದ ಕೃತಿಗಳು ವಿಶ್ವಮಾನ್ಯವಾಗಿದ್ದಾವೆ. 'ಕುವಲಯಾನಂದ', 'ಯಾದವಾಭ್ಯುದಯವ್ಯಾಖ್ಯೆ', 'ಮಯೂಖಾವಲೀ' (ಶಾಸ್ತ್ರದೀಪಿಕಾವ್ಯಾಖ್ಯೆ) ಇವರ ನಾನಾಮುಖದ

ಪ್ರತಿಭೆಯ ಪರಿಚಾಯಕ ಕೃತಿಗಳು. ಇವರ 'ಸಿದ್ಧಾಂತಲೇಶಸಂಗ್ರಹವು', ಆವರೆಗಿನ ಅದ್ವೈತಚಿಂತಕರ ಸೂಕ್ಷ್ಮಪ್ರಭೇದಗಳನ್ನು ದಾಖಲಿಸಿ ಅದರ ಹಿಂದಿನ ಆಶಯವನ್ನು ವಿವರಿಸುವ ಸಮನ್ವಯ ಕೃತಿಯಾಗಿದೆ. ಅದ್ವೈತ ದಾರ್ಶನಿಕರ ವಿಚಾರಧಾರೆಯನ್ನು ಸುಸ್ಪಷ್ಟವಾಗಿ ಪ್ರತಿನಿಧಿಸುವ ಇಂತಹ ಗ್ರಂಥ ಮತ್ತೊಂದಿಲ್ಲ. ಕಾವ್ಯ, ಸಾಂಖ್ಯಶಾಸ್ತ್ರ, ತರ್ಕಶಾಸ್ತ್ರ, ಮೀಮಾಂಸಾಶಾಸ್ತ್ರ ಅದ್ವೈತವೇದಾಂತ ಮೊದಲಾದ ಜ್ಞಾನದ ನಾನಾಶಾಖೆಗಳಿಗೆ ಇವರ ಕೊಡುಗೆ ಅಪಾರವಾದುದು.

**ಶ್ರೀ ಮಧುಸೂದನಸರಸ್ವತೀ (15ನೇ ಶತಕದ ಕೊನೆಯ ಭಾಗ)**

ಮಧುಸೂದನ ಸರಸ್ವತಿಗಳ ರಚನೆಯಾದ 'ಅದ್ವೈತಸಿದ್ಧಿ'ಯ ಹೆಸರನ್ನು ಕೇಳದ ದರ್ಶನಶಾಸ್ತ್ರದ ವಿದ್ಯಾರ್ಥಿಯೇ ಇರಲಾರ. ಮಧುಸೂದನ ಸರಸ್ವತಿಗಳ ಆಳವನ್ನು ಸರಸ್ವತೀ ಬಲ್ಲಳು. ಸರಸ್ವತಿಯ ಅನುಗ್ರಹಧಾರೆಯನ್ನು ಇನ್ನಿಲ್ಲದಂತೆ ಪಡೆದವರು ಮಧುಸೂದನ ಸರಸ್ವತಿಗಳು-

**'ವೇತ್ತಿ ಪಾರಂ ಸರಸ್ವತ್ಯಾಃ ಮಧುಸೂದನಸರಸ್ವತೀ ।**
**ಮಧುಸೂದನಸರಸ್ವತ್ಯಾಃ ಪಾರಂ ವೇತ್ತಿ ಸರಸ್ವತೀ ॥'** (ನ್ಯಾ.ಅ.ಉ.)

ಅದ್ವೈತವೇದಾಂತಪ್ರಪಂಚದಲ್ಲಿ ಮಧುಸೂದನ ಸರಸ್ವತಿಗಳ ಆವಿರ್ಭಾವಕ್ಕಿಂತ ಮೊದಲು ಮೂರು ಸಿದ್ಧಿಗ್ರಂಥಗಳು ಪ್ರಖ್ಯಾತವಾಗಿದ್ದವು. ಮಂಡನ ಮಿಶ್ರರ ಬ್ರಹ್ಮಸಿದ್ಧಿ, ಸುರೇಶ್ವರಾಚಾರ್ಯರ ನೈಷ್ಕರ್ಮ್ಯಸಿದ್ಧಿ ಮತ್ತು ವಿಮುಕ್ತಾತ್ಮರ ಇಷ್ಟಸಿದ್ಧಿ. ಈ ಗ್ರಂಥಗಳು ವಿದ್ವಾಂಸರಿಂದ ಪಾಠ-ಪ್ರವಚನ ದಲ್ಲಿ ಅಳವಡಿಸಿಕೊಂಡ ಅಗ್ರಮಾನ್ಯ ಕೃತಿಗಳಾಗಿದ್ದವು. ನಂತರ ಬಂದ ನಾಲ್ಕನೆಯ ಸಿದ್ಧಿಗ್ರಂಥವೇ 'ಅದ್ವೈತಸಿದ್ಧಿಎನಿಸಿದೆ'-

**'ಸಿದ್ಧೀನಾಮಿಷ್ಟನೈಷ್ಕರ್ಮ್ಯಬ್ರಹ್ಮಗಾನಾಮಿಯಂ ಚಿರಾತ್ ।**
**ಅದ್ವೈತಸಿದ್ಧಿರಧುನಾ ಚತುರ್ಥೀ ಸಮಜಾಯತ ॥'**

(ಅ.ಸಿ.4. ಪ. 4, ಪುಟ 1321)

ದ್ವೈತಪಂಥದ ಶ್ರೀ ವ್ಯಾಸತೀರ್ಥರು ರಚಿಸಿದ ನ್ಯಾಯಾಮೃತಗ್ರಂಥದ ತೀಕ್ಷ್ಣ ವಿಮರ್ಶೆಯನ್ನು ನಡೆಸಿದ ಸಿದ್ಧಿಗ್ರಂಥವು ಅದ್ವೈತವೇದಾಂತದ ಸಾಮಂಜಸ್ಯವನ್ನು ಸುಂದರವಾಗಿ ಸಮರ್ಥಿಸಿದೆ. ಅದ್ವೈತಸಿದ್ಧಿಯ ರಚನೆಯ ನಂತರ ಅದ್ವೈತ ಹಾಗೂ ದ್ವೈತ ದಾರ್ಶನಿಕರಲ್ಲಿ ಹೊಸ ಮಿಂಚಿನ ಸಂಚಾರ

ವಾಯಿತು. ತಮ್ಮ ತಮ್ಮ ದರ್ಶನದ ಪೂರ್ಣತೆಯನ್ನು ಸಮರ್ಥಿಸಲು ಲೆಕ್ಕವಿಲ್ಲದಷ್ಟು ಕೃತಿಗಳು ಹೊರಹೊಮ್ಮಿದವು. ಇಂತಹ ಚಿಂತನಗಂಗೆ ಇಂದಿಗೂ ಬತ್ತದೇ ಮುಂದುವರೆಯುತ್ತಲೇ ಇದೆ. ಶ್ರೀ ಮಧುಸೂದನ ಸರಸ್ವತಿಗಳ 'ಸಿದ್ಧಾಂತಬಿಂದು', 'ಅದ್ವೈತರತ್ನರಕ್ಷಣ', 'ಅದ್ವೈತಸಾರಸಂಗ್ರಹ' (ಸಂಕ್ಷೇಪಶಾರೀರಿಕವ್ಯಾಖ್ಯಾ), 'ಗೂಢಾರ್ಥದೀಪಿಕಾ' (ಭಗವದ್ಗೀತಾ ವ್ಯಾಖ್ಯಾ) ಇತ್ಯಾದಿಗಳು ವಿಶ್ವಮಾನ್ಯವಾಗಿದ್ದಾವೆ.

ಹೀಗೆ ಅದ್ವೈತ ದಾರ್ಶನಿಕರ ಪರಂಪರೆಯು ಭಾರತೀಯದರ್ಶನ ಕ್ಷೇತ್ರದಲ್ಲಿ ತನ್ನದೇ ಆದ ವಿಚಾರಧಾರೆಯನ್ನು ಮಂಡಿಸಿ ದರ್ಶನಕ್ಷೇತ್ರವನ್ನು ಶ್ರೀಮಂತವಾಗಿಸಿದೆ. ಮೇಲ್ಕಾಣಿಸಿದ ಕೃತಿಗಳ ಅಧ್ಯಯನಪರಂಪರೆ ಇಂದಿಗೂ ಶ್ರೇಷ್ಠ ವಿದ್ವಾಂಸರಲ್ಲಿ ಜಾಗೃತವಾಗಿದೆ.

## III. ಪ್ರಮಾಣಗಳು

ಪ್ರತಿಯೊಂದು ದರ್ಶನಕ್ಕೂ ಹತ್ತಾರು ಅಂತಸ್ತಿನ ವಿಶಾಲ ಕಟ್ಟಡ ಕಟ್ಟಲು (ಪ್ರಮೇಯಗಳ ಸಮರ್ಥನೆ ಮಾಡಲು) ಮೂಲಾಧಾರವಾದುದು ಪ್ರಮಾಣಗಳ ಒಡಂಬಡಿಕೆ (ಅಡಿಪಾಯ). ಪ್ರಮಾಣಗಳ ನಿಜರೂಪ ಹಾಗೂ ಸಂಖ್ಯೆ (ವಿಭಾಗ) ತಿಳಿಯದ ತನಕ ಈ ಪ್ರಮಾಣಗಳನ್ನು ಆಧರಿಸಿಯೇ ಸಿದ್ಧಗೊಳ್ಳುವ ಪ್ರಮೇಯ ವ್ಯವಸ್ಥೆಯ (ಕಟ್ಟಡ ನಿರ್ಮಾಣದ) ಅರಿವು ಸಾಧ್ಯವಾಗಲಾರದು. ಈ ಹಿನ್ನಲೆಯಲ್ಲಿ ಪ್ರಮಾಣಸ್ವರೂಪವನ್ನು ತಿಳಿಯಲು ಯತ್ನಿಸುವಾ-

### ಪ್ರಮಾಣಲಕ್ಷಣ

'ವ್ಯವಹಾರೇ ಭಾಟ್ಟನಯಃ' ಎಂಬ ಪ್ರಾಚೀನರ ಮಾತಿನಂತೆ ಅದ್ವೈತ ವೇದಾಂತವು ಸ್ಥೂಲವಾಗಿ ಭಾಟ್ಟಮೀಮಾಂಸಕರ ಪ್ರಮಾಣಮೀಮಾಂಸೆಯನ್ನು ಒಪ್ಪಿಕೊಂಡಿದೆ. 'ಯಾವುದು, ವಸ್ತು ಇರುವಂತೆಯೇ ಅದನ್ನು ಪರಿಚಯಿಸುವ ಜ್ಞಾನಸಾಧನವಾಗಿದೆಯೋ ಅದು ಪ್ರಮಾಣವೆನಿಸಿದೆ'- **'ತತ್ರ ಪ್ರಮಾಕರಣಮ್ ಪ್ರಮಾಣಮ್'** (ವೇ.ಪ., ಪುಟ. 3) ಪ್ರತ್ಯಕ್ಷ-ಅನುಮಾನ-ಉಪಮಾನ-ಆಗಮ-ಅರ್ಥಾಪತ್ತಿ-ಅನುಪಲಬ್ಧಿ ಈ ಆರು ಪ್ರಮಾಣವೆನಿಸಿವೆ. ಬೇರೊಂದು ಪ್ರಮಾಣದಿಂದ ತಿಳಿಯಲ್ಪಡದ, ವಸ್ತು

ಸ್ವರೂಪಕ್ಕೆ ಅನುಗುಣವಾದ (ವಸ್ತು ಇರುವಂತೆಯೇ ವಿಷಯೀಕರಿಸಿದ) ಜ್ಞಾನವು 'ಪ್ರಮಾ 'ಎನಿಸುವುದು. ಸಂಸ್ಕಾರದಿಂದ ಜನಿಸುವ ಸ್ಮೃತಿಯು, ಅಬಾಧಿತಾರ್ಥ-ವಿಷಯಕವಾದರೂ (ವಸ್ತು ಸ್ವರೂಪವನ್ನು ಸರಿಯಾಗಿ ದಾಖಲಿಸಿದ್ದರೂ) ಅರಿತವಿಷಯವನ್ನು ಜ್ಞಾಪಿಸುವ ಹಿನ್ನಲೆಯಲ್ಲಿ, (ಇನ್ನೊಂದು ಪ್ರಮಾಣದಿಂದ ತಿಳಿಯಲ್ಪಡದ ಹೊಸ ವಿಷಯವನ್ನು ಪರಿಚಯಿಸದಿರುವ ಕಾರಣ) ಪ್ರಮಾಣವೆನಿಸದು-

**'ತತ್ರ ಸ್ಮೃತಿ ವ್ಯಾವೃತ್ತಂ ಪ್ರಮಾತ್ವಮ್ ಅನಧಿಗತಾಬಾಧಿತಾರ್ಥವಿಷಯಕ ಜ್ಞಾನತ್ವಮ್ ಸ್ಮೃತಿಸಾಧಾರಣಂ ತು ಅಬಾಧಿತಾರ್ಥವಿಷಯಕಜ್ಞಾನತ್ವಮ್ ।'** (ವೇ.ಪ., ಪುಟ.3)

ಇಲ್ಲಿ ಒಂದು ಪ್ರಶ್ನೆ ಸಹಜವಾಗಿದೆ-

ಚೈತನ್ಯವೊಂದೇ ಸತ್ಯ ಹಾಗೂ ವಿಶ್ವವೆಲ್ಲ ಅಸತ್ಯವೆಂಬ ದರ್ಶನದ ಪ್ರಕಾರ, 'ಘಟ' 'ಪಟ' ಮೊದಲಾದ ವಸ್ತುಗಳೆಲ್ಲ ಇಲ್ಲದ (ಅಸತ್ಯವಾದ) ಕಾರಣ ಅವುಗಳನ್ನು ಗುರುತಿಸುವ ಜ್ಞಾನಗಳೆಲ್ಲ ಬಾಧಿತಾರ್ಥವಿಷಯಕಗಳೇ ಆಗಿರುವ ಹಿನ್ನೆಲೆಯಲ್ಲಿ ಇಂತಹ ಜ್ಞಾನಗಳು ಪ್ರಮಾಣವೆನಿಸಬಲ್ಲವೆ?

ಈ ಶಂಕೆಯ ಪರಿಹಾರವನ್ನು ಹೀಗೆ ಕಾಣಬಹುದು-

ಕನಸಿನಲ್ಲಿ ಕಾಣುವ ದೃಶ್ಯಗಳೆಲ್ಲ ಸುಳ್ಳೆಂದು ತಿಳಿಯುವುದು ಎಚ್ಚರವಾದ ಮೆಲಷ್ಟೆ! ಕನಸಿನ ಅವಸ್ಥೆಯಲ್ಲಿ ಅವು ಸತ್ಯವಾಗಿರುವಂತೆ ಆತ್ಮ ತತ್ತ್ವದ ಪರಿಶುದ್ಧವಾದ ಅರಿವು ಜಾಗೃತಗೊಳ್ಳದ ತನಕ 'ಘಟ' 'ಪಟ' ಮೊದಲಾದ ವಸ್ತುಗಳನ್ನು ಗ್ರಹಿಸುವ ಜ್ಞಾನಗಳನ್ನು ಸತ್ಯ (ಅಬಾಧಿತ)ವೆನ್ನಲು ಅಡ್ಡಿ ಇಲ್ಲ-

**'ಸರ್ವವ್ಯವಹಾರಾಣಾಮೇವ ಪ್ರಾಗ್**
**ಬ್ರಹ್ಮಾತ್ಮತಾವಿಜ್ಞಾನಾತ್ ಸತ್ಯತ್ವೋಪಪತ್ತೇಃ ।**
**ಸ್ವಪ್ನವ್ಯವಹಾರಸ್ಯೇವ ಪ್ರಾಕ್ ಪ್ರಬೋಧಾತ್ ॥'** (ಸೂ.ಭಾ. 2.1.14)

ಭಾಷ್ಯಕಾರರು ಇದನ್ನು ವೃದ್ಧಸಮ್ಮತಿ ನೀಡಿ ಹೀಗೂ ಸರಳವಾಗಿ ನಿರೂಪಿಸಿದ್ದಾರೆ-

ಆತ್ಮನಿಗೆ ಜಾತಿ ಇಲ್ಲದಿದ್ದರೂ ದೇಹವನ್ನು ಆಧರಿಸಿ 'ಬ್ರಾಹ್ಮಣ' 'ಕ್ಷತ್ರಿಯ' ಇತ್ಯಾದಿ ವ್ಯವಹಾರವು (ಪ್ರತೀತಿಯು) ಹೇಗೆ ಅಂಗೀಕೃತವಾಗಿ

ದೆಯೋ ಅದರಂತೆ, ಅದ್ವಿತೀಯಾತ್ಮತತ್ತ್ವನಿಶ್ಚಯ ಜ್ಞಾನಜನಿಸುವವರೆಗೆ 'ಘಟ' 'ಪಟ'ವೇ ಮೊದಲಾದ ಲೌಕಿಕ ವ್ಯವಹಾರವೂ ಕೂಡ ಪ್ರಮಾಣವೆನಿಸ ಬಲ್ಲದು-

**ದೇಹಾತ್ಮ ಪ್ರತ್ಯಯೋ ಯದ್ವತ್ ಪ್ರಮಾಣತ್ವೇನ ಕಲ್ಪಿತಃ ।**
**ಲೌಕಿಕಂ ತದ್ವದೇವೇದಂ ಪ್ರಮಾಣಂ ತ್ವಾತ್ಮನಿಶ್ಚಯಾತ್ ॥**

(ಸೂ. ಭಾ. 1. 1.4., ಪುಟ. 24)

ಇದನ್ನು ಇನ್ನಷ್ಟು ಸ್ಫುಟವಾಗಿ ಹೀಗೆ ವಿವರಿಸಬಹುದು- 'ನಿರ್ವಿಶೇಷಾತ್ಮ ತತ್ತ್ವಸಾಕ್ಷಾತ್ಕಾರದ ನಂತರವೇ ಉಳಿದೆಲ್ಲ ವಸ್ತುಗಳು ಅಸತ್ಯ ವೆಂಬ ಅರಿವು ಜಾಗೃತಗೊಳ್ಳುವುದು. '**ಯತ್ರತ್ವಸ್ಯ ಸರ್ವಮಾತ್ಮೈವಾಭೂತ್ ಕೇನ ಕಂ ಪಶ್ಯೇತ್**' (ಬೃಹ. 4..515) ಎಂಬುದಾಗಿ ಶ್ರುತಿಯೂ ಅದ್ವಿತೀಯಾತ್ಮತತ್ತ್ವದ ಅರಿವಿನ ಜಾಗೃತಿಗೊಂಡಾಗ ವ್ಯವಹಾರದ ನಿವೃತ್ತಿಯನ್ನು ಬೋಧಿಸುತ್ತಿದೆ. ಸಂಸಾರಾವಸ್ಥೆಯಲ್ಲಿ (ಅಜ್ಞಾನದ ಪೊರೆ ಆವರಿಸಿದಾಗ) '**ಯತ್ರ ಹಿ ದ್ವೈತಮಿವ ಭವತಿ ತದಿತರ ಇತರಂ ಪಶ್ಯತಿ**' (ಬೃಹ. 2.4. 14) ಎಂಬುದಾಗಿ ಇತರ ವಸ್ತುಗಳ ಅಸ್ತಿತ್ವವನ್ನು ಅನುಮೋದಿಸುತ್ತದೆ.

ಈ ಹಿನ್ನಲೆಯಲ್ಲಿ ಆತ್ಮ ತತ್ತ್ವದ ಅರಿವು ದೃಢವಾಗಿ ಜನಿಸುವ ತನಕ ಅರಿವಿನಲ್ಲಿ ಗೋಚರವಾದ ವಸ್ತುಗಳ ಸತ್ಯತೆಯನ್ನು ಅಲ್ಲಗಳೆಯಲಾಗದು. ವಸ್ತುಗಳನ್ನು ದಾಖಲಿಸುವ ಅರಿವೂ ಪ್ರಮಾಣವೆನಿಸಬಲ್ಲದು-

**ಬ್ರಹ್ಮಸಾಕ್ಷಾತ್ಕಾರಾನಂತರಂ ಹಿ ಘಟಾದೀನಾಂ ಬಾಧಃ, 'ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್ತತ್ಕೇನ ಕಂ ಪಶ್ಯೇತ್'** (ಬೃಹ. 4.5.15) **ಇತಿ ಶ್ರುತೇಃ । ನ ತು ಸಂಸಾರದಶಾಯಾಂ ಬಾಧಃ, 'ಯತ್ರ ಹಿ ದ್ವೈತಮಿವ ಭವತಿ ತದಿತರ ಇತರಂ ಪಶ್ಯತಿ'** (ಬೃಹ. 2.4.15) **ಇತಿ ಶ್ರುತೇಃ । ತಥಾಚಾಬಾಧಿತಪದೇನ ಸಂಸಾರದಶಾಯಾಮಬಾಧಿತತ್ವಂ ವಿವಕ್ಷಿತಮಿತಿ ನ ಘಟಾದಿಪ್ರಮಾಯಾಮ್ ಅವ್ಯಾಪ್ತಿಃ ।** (ವೇ.ಪ., ಪುಟ. 37)

## ಪ್ರತ್ಯಕ್ಷ

ಪ್ರತ್ಯಕ್ಷಪ್ರಮಾತ್ಮಕ ಜ್ಞಾನ ಕರಣವಾದುದು ಪ್ರತ್ಯಕ್ಷಪ್ರಮಾಣವೆನಿಸಿದೆ.

ಪ್ರತ್ಯಕ್ಷ ಜ್ಞಾನವೆಂದರೆ ಅದು ಚೈತನ್ಯವೇ-

ಚೈತನ್ಯರೂಪವಾದ ಅರಿವೇ 'ಘಟ''ಪಟ' ಮೊದಲಾದ ವೃತ್ತಿಯೊಡನಿರುವಾಗ ಆಯಾವಸ್ತು ವಿಷಯಕ 'ಪ್ರಮಾ' ಎನಿಸುತ್ತದೆ-

**'ಪ್ರತ್ಯಕ್ಷ ಪ್ರಮಾ ಚೈತನ್ಯಮೇವ'** (ವೇ.ಸ.ಪುಟ.41)

**'ಚೈತನ್ಯರೂಪಮೇವ ಜ್ಞಾನಮಬಾಧಿತಘಟಾದಿ**
**ವೃತ್ತ್ಯವಚ್ಛಿನ್ನಂ ಘಟಾದಿಪ್ರಮೇತ್ಯುಚ್ಯತೇ'** (ವೇ.ಪ.ಶಿ.ಮ., ಪುಟ.41)

ಹೀಗೆ ವೃತ್ತಿಯಿಂದ ಕೂಡಿದ ಚೈತನ್ಯದ ಅರಿವು ಮೂಡಿಸಲು ಚಕ್ಷುರಾದಿ ಇಂದ್ರಿಯಗಳು ಸಾಧನವೆನಿಸಿ ಪ್ರತ್ಯಕ್ಷ ಪ್ರಮಾಣವೆನಿಸಿವೆ-

**ಚೆತನ್ಯರೂಪಮೇವ ಜ್ಞಾನಮಬಾಧಿತಘಟಾದಿ ವೃತ್ತ್ಯವಚ್ಛಿನ್ನಂ ಘಟಾದಿ ಪ್ರಮೇತ್ಯುಚ್ಯತೇ । ಅತ ಏವ ವಿಶಿಷ್ಟಂ ಚೈತನ್ಯಂ ಪ್ರತಿ ಚಕ್ಷುರಾದೇಃ ಕರಣತ್ವಾತ್ ಚಕ್ಷುರಾದಿ ಭವತಿ ಪ್ರತ್ಯಕ್ಷ ಪ್ರಮಾಣಮಿತಿ ।** (ವೇ.ಪ.ಶಿ.ಮ., ಪುಟ.41)

**ಪ್ರತ್ಯಕ್ಷಜ್ಞಾನ ಜನಿಸುವ ಬಗೆ**

ಅದ್ವೈತಿಗಳ ಪ್ರತ್ಯಕ್ಷ ಜ್ಞಾನ ಸ್ವರೂಪ ಮತ್ತು ಅದರ ಉತ್ಪತ್ತಿಯ ಮೇಲೆ ಈ ಕಾರಿಕೆ ಬೆಳಕು ಚೆಲ್ಲುತ್ತದೆ-

**ಸ್ವಚ್ಛೇಽಂತಃಕರಣೇಽಶಿನಿಪ್ರಸೃಮರೇ ನೇತ್ರಾದಿಮಾರ್ಗೋದ್ಗತೇ**
**ತತ್ತದ್ಬಾಹ್ಯಘಟಯಾತ್ಮನಾ ಪರಿಣತೇ ಬಿಂಬೀಭವಂತೀ ಚಿತಿಃ ।**
**ಏಕ್ಯಾಪ್ಯರ್ಥಮನೋವಿಶೇಷಕವಶಾತ್ ದ್ವೈತಂ ಪ್ರಪನ್ನಾ**
**ಹರತ್ಯಜ್ಞಾನಂ, ಪ್ರಕಟೀಕರೋತಿ ವಿಷಯಾನ್ ಜ್ಞಾತಂ ಮಯೇದಂ ತ್ವಿತಿ॥**
(ಪ್ರ.ಲ., ಶ್ರೀ.ಟಿ. ಉ., ಪುಟ 198)

**ವೃತ್ತಿ- ಜ್ಞಾನ**

ಕಾಲುವೆಯಿಂದ ನೀರನ್ನು ಗದ್ದೆಗೆ ಬಿಟ್ಟಾಗ, ಗದ್ದೆಯ ಆಕಾರವನ್ನೇ ನೀರೂ ಪಡೆಯುತ್ತದೆ. ಬಾಗಿಲು ತೆಗೆದಾಗ ಸೂರ್ಯನ ಕಿರಣಗಳು ಮನೆಯೊಳಗೆ ನುಗ್ಗಿ ವಸ್ತುಗಳ ಮೇಲೆಲ್ಲ ಬೀಳುತ್ತವೆ. ಅದರಂತೆ, ಮನಸ್ಸು ದೀಪದಂತೆ ತೈಜಸ ವಸ್ತು. ದೀಪಕ್ಕೆ ಪ್ರಕಾಶವಿದ್ದಂತೆ ಮನಸ್ಸಿಗೂ ಪ್ರಕಾಶವಿದೆ. ಆ ಪ್ರಕಾಶ ಬರಿಗಣ್ಣಿಗೆ ಕಾಣದು. ಕಣ್ಣು ತೆರೆದಾಗ, ಒಳಗಿನ ಮನಸ್ಸಿನ ತೀಕ್ಷ್ಣವಾದ ಕಿರಣಗಳು ವೇಗವಾಗಿ ಹೊರಬಂದು, ಎದುರಿನ ವಸ್ತುಗಳ ಆಕಾರವನ್ನು ಪಡೆಯುತ್ತದೆ. ಇದನ್ನು ಮನಸ್ಸಿನ ಪರಿಣಾಮ ಎಂಬ ಅರ್ಥದಲ್ಲಿ

'ಮನೋವೃತ್ತಿ' ಮತ್ತು 'ವೃತ್ತಿ' ಎಂಬ ಶಬ್ದಗಳಿಂದ ಕರೆಯಲಾಗುತ್ತದೆ. ಧೂಮದಿಂದ ವಹ್ನಿಯನ್ನು ಅನುಮಾನ ಮಾಡುವಾಗಲೂ, ಶಬ್ದದಿಂದ ಅರಿವು ಪಡೆವಲ್ಲೂ ಮನಸ್ಸಿನ ಪರಿಣಾಮ ಆಗೇ ಆಗುತ್ತದೆ. ಆದರೆ, ಅದು ಹೊರಬರದೆ, ಒಳಗೇ ಆಗುತ್ತದೆ.

ಇದಕ್ಕೆ ಸಂಬಂಧಿಸಿದ ಇನ್ನೊಂದು ವಿಷಯವನ್ನು ಇಲ್ಲಿ ತಿಳಿಯೋಣ.

'ಸರ್ವಂ ಖಲ್ವಿದಂ ಬ್ರಹ್ಮ' ಎಂಬ ಶ್ರುತಿಯು ವರ್ಣಿಸುವಂತೆ ಚೈತನ್ಯವು ಎಲ್ಲೆಡೆ ವ್ಯಾಪಿಯಾಗಿದೆ. ಪ್ರಮಾಣವಿವೇಚನೆಯ ಸಂದರ್ಭದಲ್ಲಿ, ಇದನ್ನು ಮೂರು ಬಗೆಯಾಗಿ ಗುರುತಿಸಲಾಗಿದೆ- 1. ವಿಷಯಚೈತನ್ಯ, 2. ಪ್ರಮಾತೃಚೈತನ್ಯ ಮತ್ತು 3. ಪ್ರಮಾಣಚೈತನ್ಯ ಎಂದು. ಇದರಲ್ಲಿ ವಿಷಯದಲ್ಲಿ ಚೈತನ್ಯವಿದೆ, ಇದನ್ನು 'ವಿಷಯಾವಚ್ಛಿನ್ನಚೈತನ್ಯ' ಎಂದೂ ವ್ಯವಹರಿಸಲಾಗುವುದು, ವಿಷಯಚೈತನ್ಯದ ಅರಿವು ಪಡೆವ ಆತ್ಮಚೈತನ್ಯವು 'ಪ್ರಮಾತೃಚೈತನ್ಯ'ವೆನಿಸಿದೆ. ಮನಸ್ಸಿನಲ್ಲಿರುವ ಚೈತನ್ಯವು 'ಪ್ರಮಾಣಚೈತನ್ಯ'ವೆನಿಸಿದೆ.

ಇವುಗಳಲ್ಲಿ, ಹೊರಗಿನ ವಸ್ತುಗಳನ್ನು ಆವರಿಸಿದ ಮನೋವೃತ್ತಿಯಲ್ಲಿ ಪ್ರಮಾತೃಚೈತನ್ಯವು ಪ್ರತಿಫಲಿಸುತ್ತದೆ. ಆಗ, ವಿಷಯದ ಅಜ್ಞಾನವು ನಾಶ ಹೊಂದುವುದು. ಅನಂತರ, ವಿಷಯಾವಚ್ಛಿನ್ನಚೈತನ್ಯವು ಅಭಿವ್ಯಕ್ತವಾಗಿ ಪ್ರಮಾತೃಚೈತನ್ಯಕ್ಕೂ ವಿಷಯಾವಚ್ಛಿನ್ನಚೈತನ್ಯಕ್ಕೂ (ಪ್ರಮಾಣಚೈತನ್ಯಕ್ಕೂ) ಅಭೇದ ಉಂಟಾಗುವುದು. ಆಗ 'ಇದಂ ಮಯಾ ಜ್ಞಾತಂ' ' ಇದು ನನಗೆ ತಿಳಿಯಿತು' ಎಂಬ ಅರಿವು ಮೂಡುತ್ತದೆ.

ಹೀಗೆ ಅಭಿವ್ಯಕ್ತವಾದ, ಪ್ರಮಾತೃಚೈತನ್ಯದೊಂದಿಗೆ ಅಭೇದ ಹೊಂದಿದ ಚೈತನ್ಯವೇ ಪ್ರತ್ಯಕ್ಷಜ್ಞಾನ.

ಪರೋಕ್ಷಜ್ಞಾನ ಸ್ಥಳದಲ್ಲಿ, ಒಳಗೇ ಮನೋವೃತ್ತಿ ಉಂಟಾಗುವುದರಿಂದ ಪ್ರಮಾತೃಚೆತನ್ಯವು ಒಳಗೇ ವೃತ್ತಿಯಲ್ಲಿ ಪ್ರತಿಫಲಿಸಿ, ಪ್ರಮಾಣಚೈತನ್ಯ-ಪ್ರಮಾತೃಚೈತನ್ಯಗಳ ಅಭೇದ ಉಂಟಾಗಿ ಜ್ಞಾನ ಎನಿಸುತ್ತದೆ. ಇಲ್ಲಿ ವಿಷಯಾವಚ್ಛಿನ್ನಚೈತನ್ಯದ ಅಭಿವ್ಯಕ್ತಿ ಇಲ್ಲದಿರುವುದರಿಂದ ಇದು ಪ್ರತ್ಯಕ್ಷವಲ್ಲ.

ಏನೇ ಆದರೂ, ಜ್ಞಾನ ಎಂದರೆ ಚೈತನ್ಯವೇ. ಇದಕ್ಕೆ ಸಾಧನ ಮನೋವೃತ್ತಿ. ಜ್ಞಾನಸಾಧನ ಎಂಬ ಅರ್ಥದಲ್ಲಿ ಇದನ್ನು ವೃತ್ತಿಜ್ಞಾನ ಎನ್ನುತ್ತಾರೆ.

ವ್ಯಾಕರಣದ ಭಾಷೆಯಲ್ಲಿ ಹೇಳುವುದಾದರೆ, ಚೈತನ್ಯವು ಜ್ಞಾನ ಎಂಬಲ್ಲಿ ಭಾವಾರ್ಥದಲ್ಲಿ ಲ್ಯುಟ್‌ಪ್ರತ್ಯಯ, ವೃತ್ತಿಜ್ಞಾನ ಎಂಬಲ್ಲಿ ಕರಣಾರ್ಥದಲ್ಲಿ ಲ್ಯುಟ್‌ಪ್ರತ್ಯಯ.

ಇಲ್ಲಿ ಒಂದು ಪ್ರಶ್ನೆ ಬರಬಹುದಾಗಿದೆ-

ಹಿಂದೆ ಪ್ರತ್ಯಕ್ಷಜ್ಞಾನವನ್ನೇ ಚೈತನ್ಯವೆಂದು ಕರೆಯಲಾಗಿದೆ. ಚೈತನ್ಯವಾದರೂ ಅನಾದಿನಿತ್ಯವಾಗಿದೆ . ಜ್ಞಾನಜನಕವಾದ ಹಿನ್ನೆಲೆಯಲ್ಲಿ ಇಂದ್ರಿಯಗಳು ಪ್ರಮಾಣವಾಗಬೇಕಲ್ಲವೆ? ಆದ್ದರಿಂದ ಇಂದ್ರಿಯಗಳಿಂದ ಜನ್ಯವಲ್ಲದ ಜ್ಞಾನವನ್ನು ಪ್ರತ್ಯಕ್ಷಪ್ರಮಾ ಎನ್ನುವುದು ಹೇಗೆ?

ಇದಕ್ಕೆ ಉತ್ತರವನ್ನು ಹೀಗೆ ಕಾಣಬಹುದು-

ಚೈತನ್ಯವು ಸ್ವರೂಪತಃ ಅನಾದಿಯಾಗಿದ್ದು ಇಂದ್ರಿಯಜನ್ಯವಲ್ಲದಿದ್ದರೂ, ಚೈತನ್ಯಾಭಿವ್ಯಂಜಕವಾದ ಅಂತಃಕರಣವೃತ್ತಿಯು ಇಂದ್ರಿಯ ಸನ್ನಿಕರ್ಷದಿಂದ ಜನಿಸುವುದು. ಈ ಹಿನ್ನಲೆಯಲ್ಲಿ ವೃತ್ತಿವಿಶಿಷ್ಟ ಚೈತನ್ಯವನ್ನು 'ಸಾದಿ' ಎಂದು ಕರೆಯಲಾಗುವುದು. ಜ್ಞಾನಕ್ಕೆ ಅವಚ್ಛೇದಕವಾದುದರಿಂದ ಜ್ಞಾನವೆಂಬುದಾಗಿ ವೃತ್ತಿಯನ್ನು ವ್ಯವಹರಿಸುವುದು ಗೌಣಪ್ರಯೋಗ. ಅದನ್ನೆ 'ಘಟ ಪ್ರತ್ಯಕ್ಷಪ್ರಮಾ' ಇತ್ಯಾದಿಯಾಗಿ ಕರೆಯಲಾಗಿದೆ-

**ಚೈತನ್ಯಸ್ಯಾನಾದಿತ್ವೇऽಪಿ ತದಭಿವ್ಯಂಜಕಾಂತಃಕರಣವೃತ್ತಿರಿಂದ್ರಿಯ-ಸನ್ನಿಕರ್ಷಾದಿನಾ ಜಾಯತ ಇತಿ ವೃತ್ತಿವಿಶಿಷ್ಟಂ ಚೈತನ್ಯಮಾದಿಮತ್ ಇತ್ಯುಚ್ಯತೇ। ಜ್ಞಾನಾವಚ್ಛೇದಕತ್ವಾಚ್ಚ ವೃತ್ತೌ ಜ್ಞಾನತ್ವೋಪಚಾರಃ। ತದುಕ್ತಂ ವಿವರಣೇ- 'ಅಂತಃಕರಣವೃತ್ತೌ ಜ್ಞಾನತ್ವೋಪಚಾರಾತ್' ಇತಿ ।** (ವೇ.ಪ. 42-43)

ಇಲ್ಲಿ ಒಂದು ಪ್ರಶ್ನೆ ಸಹಜ.'ನಾನು ಇದನ್ನು ನೋಡುತ್ತೇನೆ' ಎಂಬ ಅನುಭವವನ್ನು ವಿಮರ್ಶಿಸಿದಾಗ ಘಟಾದಿವಸ್ತುಗಳಿಗೆ ಪ್ರಮಾತೃ-ಚೈತನ್ಯಾಭೇದವು ಗೋಚರವಾಗುವುದಿಲ್ಲ. ಆದ್ದರಿಂದ ಅನುಭವವಿರೋಧದ ಪರಿಹಾರ ಹೇಗೆ?

ಇದಕ್ಕೆ ಪರಿಹಾರವನ್ನು ಹೀಗೆ ತಿಳಿಯಬೇಕು. ಹೇಗೆ ಅಧಿಷ್ಠಾನಕ್ಕಿಂತ ಅಧ್ಯಸ್ತವಸ್ತುವಿಗೆ ಪ್ರತ್ಯೇಕವಾದ 'ಸತ್ತಾ' (ಅಸ್ತಿತ್ವ) ಇರುವುದಿಲ್ಲವೋ ಅದರಂತೆಯೇ ಪ್ರಮಾತೃಚೈತನ್ಯದ ಸತ್ತಾಕ್ಕಿಂತಲೂ ಘಟಾದಿವಸ್ತುಗಳಿಗೆ ಪ್ರತ್ಯೇಕ ಸತ್ತಾ ತೋರದಿರುವುದೇ 'ಪ್ರಮಾತ್ರಭೇದ'ವೆನಿಸಿದೆ.

**ಅಂತಃಕರಣವು ಸಾವಯವ**

ಅಂತಃಕರಣವು ನಿರವಯವಲ್ಲವೆ? ಈ ಹಿನ್ನೆಲೆಯಲ್ಲಿ ಅಂತಃಕರಣ ಪರಿಣಾಮರೂಪವಾದ 'ವೃತ್ತಿಜ್ಞಾನವು' ಜನಿಸುವುದು ಹೇಗೆ? ಎಂಬ ಪ್ರಶ್ನೆ ಇಲ್ಲಿ ಸಹಜ. ಅಂತಃಕರಣವು (ಮನಸ್ಸು) ನಿರವಯವವಲ್ಲ.ಅದು ಸೃಷ್ಟಿಯ ವಿಕಾಸದ ಹಂತದಲ್ಲಿ ಹುಟ್ಟನ್ನು ಪಡೆದಿರುವ ಹಿನ್ನಲೆಯಲ್ಲಿ ಸಾವಯವ ವಸ್ತುವಾಗಿದೆ. 'ತನ್ಮನೋಽಸೃಜತ' ಎಂಬುದಾಗಿ ಶ್ರುತಿಯು ಮನಸ್ಸಿಗೆ ಸೃಷ್ಟಿಯನ್ನು ವರ್ಣಿಸಿರುವುದು ಗಮನಾರ್ಹ.

ಮನಸ್ಸಿನ ಪರಿಣಾಮವಾದ ಜ್ಞಾನವು ಮನಸ್ಸಿನ ಧರ್ಮವೆಂಬ ವಿಷಯ ದಲ್ಲಿ ಶ್ರುತಿಯು ಸ್ಪಷ್ಟ ಪ್ರಮಾಣವಾಗಿದೆ-

**'ಕಾಮಃ ಸಂಕಲ್ಪಃ ವಿಚಿಕಿತ್ಸಾ ಶ್ರದ್ಧಾ**
**ಅಶ್ರದ್ಧಾಧೃತಿರಧೃತಿಹ್ರೀರ್ಧೀರ್ಭೀರಿತ್ಯೇತತ್ ಸರ್ವಂ ಮನ ಏವ'**

ಇದರ ಅರ್ಥ ಹೀಗಿದೆ-

ವಿಷಯಾಭಿಲಾಷೆ-ನಿಂದಿತವಸ್ತುಗಳಲ್ಲಿ ಪ್ರೀತಿ-ಸಂಶಯ-ಆಸ್ತಿಕ್ಯಬುದ್ಧಿ-ನಾಸ್ತಿಕ್ಯದೃಷ್ಟಿ-ಧೈರ್ಯ-ಅಧೈರ್ಯ- ನಿಂದಿತಕಾರ್ಯ ಮಾಡಲು ನಾಚಿಕೆ- (ಭೀಃ) 'ಘಟ''ಪಟ' ಮೊದಲಾದ ವಸ್ತುಗಳ ಅರಿವು, ಮನೋವಿಕಾರವಾದ ಜ್ಞಾನಗಳೆನಿಸಿವೆ-

**.... ವೃತ್ತಿರೂಪಜ್ಞಾನಸ್ಯ ಮನೋ ಧರ್ಮತ್ವೇ 'ಕಾಮಃ ಸಂಕಲ್ಪಃ ವಿಚಿಕಿತ್ಸಾ ಶ್ರದ್ಧಾ ಅಶ್ರದ್ಧಾ ಧೃತಿರಧೃತಿರ್ಧೀರ್ಹ್ರೀರ್ಭೀರಿತ್ಯೇತತ್ ಸರ್ವಂ ಮನ ಏವ' ಇತಿ ಶ್ರುತಿರ್ಮಾನಮ್।' (ಬೃಹ. 1.5.3) ಧೀಶಬ್ದೇನ ವೃತ್ತಿರೂಪಜ್ಞಾನಮ್ ಅಭಿಹಿತಮ್। ಅತ ಏವ ಕಾಮಾದೇರಪಿ ಮನೋಧರ್ಮತ್ವಮ್'**

(ವೇ.ಪ., ಪುಟ 44)

**ಜ್ಞಾನ-ಸುಖಗಳು ಆತ್ಮಧರ್ಮವಲ್ಲ**

ಜ್ಞಾನ, ಇಚ್ಛಾ, ಸುಖ ಮೊದಲಾದ ಧರ್ಮಗಳು ಮನಸ್ಸನ್ನು ಆಶ್ರಯಿಸಿ ದ್ದಾವೆ ಎಂಬುದು ಅದ್ವೈತದ ನಿಲುವು-

**'ಸಿದ್ಧಾಂತೇ ಜ್ಞಾನೇಚ್ಛಾಸುಖಾದೀನಾಮಂತಃಕರಣಾಶ್ರಯತ್ವಾಭ್ಯುಪಗಮಾತ್। ಕಾಮಸಂಕಲ್ಪಾದೀನ್ ಪ್ರಕೃತ್ಯ 'ಸರ್ವಂ ಮನ ಏವ'** (ಬೃ. 1.5.3) **ಇತಿ ಶ್ರುತೇಃ ।** (ಸಿ.ಬಿ.ಪುಟ. 16. ಅ.ವಾ.ಶಾ.)

ಭಾಗವತ ಮತ್ತು ಬ್ರಹ್ಮಪುರಾಣಗಳು ಕ್ರಮವಾಗಿ ಹರ್ಷಶೋಕಾದಿಗಳು. ಮನಸ್ಸಿನ ವಿಕಾರಗಳೆಂದೂ ಆತ್ಮನು ನಿರ್ಗುಣನೆಂದು ಪ್ರತಿಪಾದಿಸುತ್ತಿರುವುದು ಗಮನಾರ್ಹ-

**''ಭಾಗವತೇ ಚ ಆತ್ಮಾಹಮರ್ಥಯೋಃ ಭೇದಂ ಸ್ವೀಕೃತ್ಯ ಹರ್ಷಾದೀನಾಮಹಂಕಾರಧರ್ಮತ್ವಂ ಪ್ರತಿಪಾದ್ಯಾತ್ಮಧರ್ಮತ್ವಂ ನಿಷಿದ್ಧಮ್-**

**'ಹರ್ಷಶೋಕಭಯಕ್ರೋಧ ಲೋಭಮೋಹಸ್ಪೃಹಾದಯಃ ।**
**ಅಹಂಕಾರಸ್ಯ ಚೈವೇತೇ ಜನ್ಮ ಮೃತ್ಯುಶ್ಚ ನಾತ್ಮನಃ ॥** (ಭಾಗ.)

**ಕರ್ತೃತ್ವಸ್ಯ ಚಾತ್ಮಧರ್ಮತ್ವಂ ಬ್ರಹ್ಮಪುರಾಣೇ ನಿಷಿದ್ಧಮ್-**

**'ಕುರ್ವಂತ್ಯಚೇತನಾಃ ಕರ್ಮದೇಹೇಂದ್ರಿಯಗಣಾಃ ಸದಾ ।**
**ಚೈತನ್ಯಸ್ತದಧಿಷ್ಠಾತಾ ಶಾಂತಾತ್ಮಾ ನ ಕರೋತ್ಯಸೌ' ॥''**

ಬ್ರ.ಪು (ಸಿ.ಬಿಂ.ಪ್ರಪಾತ., ಪುಟ. 16)

ಇಂತಹ ವೃತ್ತಿಯು ಸಂಶಯ-ನಿಶ್ಚಯ-ಗರ್ವ-ಸ್ಮರಣ ಎಂಬುದಾಗಿ ನಾಲ್ಕು ಬಗೆಯಾಗಿವೆ. ಒಂದೇ ಅಂತಃಕರಣವು ವೃತ್ತಿಭೇದದಿಂದ ಮನಸ್ಸು-ಬುದ್ಧಿ-ಅಹಂಕಾರ-ಚಿತ್ತ ಎಂದು ಕರೆಸಿಕೊಳ್ಳಲ್ಪಡುತ್ತದೆ-

**ಮನೋಬುದ್ಧಿರಹಂಕಾರಶ್ಚಿತ್ತಂ ಕರಣಮಂತರಮ್ ।**
**ಸಂಶಯೋ ನಿಶ್ಚಯೋ ಗರ್ವಃ ಸ್ಮರಣಂ ವಿಷಯಾ ಇಮೇ॥**

(ವೇ.ಪ., ಪುಟ 88)

## 2. ಅನುಮಾನ ನಿರೂಪಣೆ

ಅನುಮಿತಿಗೆ ಕರಣವಾದುದು ಅನುಮಾನ. ವ್ಯಾಪ್ತಿಜ್ಞಾನವೇ ಅನುಮಿತಿ ಜನಕವಾಗಿದೆ. ವ್ಯಾಪ್ತಿಜ್ಞಾನಸಂಸ್ಕಾರವು ಅವಾಂತರವ್ಯಾಪಾರವೆನಿಸಿದೆ. ಲಿಂಗಪರಾಮರ್ಶ ಮತ್ತು ವ್ಯಾಪ್ತಿಸ್ಮರಣಗಳು ಅನುಮಿತಿಕರಣವಲ್ಲ. ಹೇತುವು ಪಕ್ಷದಲ್ಲಿದೆ ಎಂಬ ಅಂಶವು ದೃಢವಾದಾಗ, ವ್ಯಾಪ್ತಿಯ ಅನುಭವದ ಹಿನ್ನಲೆಯಲ್ಲಿ ಸಂಸ್ಕಾರವು ಉದ್‌ಬುದ್ಧವಾಗಿ ಅನುಮಿತಿ ಜನಿಸುವ ಕಾರಣ ವ್ಯಾಪ್ತಿಜ್ಞಾನವೇ ಅನುಮಿತಿಕರಣವೆನಿಸಿದೆ. ವ್ಯಭಿಚಾರದೋಷವಿಲ್ಲದ ಸಹಚಾರದರ್ಶನದಿಂದ ವ್ಯಾಪ್ತಿಯು ಗೃಹೀತವಾಗುವುದು. ಅನ್ವಯವ್ಯಾಪ್ತಿ ಮಾತ್ರವೇ ಅಂಗೀಕೃತವಾಗಿದೆ -

ಅನುಮಿತಿಕರಣಮನುಮಾನಮ್। ತಚ್ಚ ವ್ಯಾಪ್ತಿಜ್ಞಾನಮ್। ಸಂಸ್ಕಾರೋ ವ್ಯಾಪಾರಃ । ನ ತು ಲಿಂಗಪರಾಮರ್ಶೋ ವ್ಯಾಪ್ತಿಸ್ಮರಣಂ ಚ । ಪಕ್ಷತಾ-ಧರ್ಮತಾ ಪ್ರತ್ಯಕ್ಷಾನಂತರ ಮುದ್‌ಬುದ್ಧೇ ವ್ಯಾಪ್ತ್ಯನುಭವಜನ್ಯಸಂಸ್ಕಾರೇ ಸತಿ ಅನುಮಿತ್ಯುತ್ಪತ್ತೇಃ ಆನುಭವಿಕತ್ವೇನ ಅನ್ವಯವ್ಯತಿರೇಕಾಭ್ಯಾಂ ವ್ಯಾಪ್ತಿಜ್ಞಾನ-ಸ್ಯೈವಾನುಮಿತಿಕರಣತ್ವಮ್ । (ಅ.ನ., ಪುಟ 46)

ಅನುಮಾನವು ಹೆಸರಿಗೆ ತಕ್ಕಂತೆ ಪ್ರತ್ಯಕ್ಷ ಸಂವಾದ ಹೊಂದಿದಾಗ ಮಾತ್ರವೇ ಪ್ರಮಾಣವೆನಿಸಬಲ್ಲದು. ಇಲ್ಲವಾದರೆ ಅದಕ್ಕೆ ಪ್ರಾಮಾಣ್ಯವೇ ಇರಲಾರದು-

'ನ ಚ ಅನುಮಾನಂ ಪ್ರತ್ಯಕ್ಷವಿರೋಧೇ ಪ್ರಾಮಾಣ್ಯಂ ಲಭತೇ'
(ಬೃಹ.ಭಾ., 2.1.20)

ಇಷ್ಟು ಮಾತ್ರವಲ್ಲದೇ ಅನುಮಾನವು ಎಂದೂ ಪ್ರತ್ಯಕ್ಷಕ್ಕೆ ಬಾಧಕವಾಗಲಾರದು-

'ನ ಹಿ ಪ್ರತ್ಯಕ್ಷಮನುಮಾನೇನ ಬಾಧಿತುಂ ಶಕ್ಯತೇ' (ಬೃಹ.ಭಾ., 4.3.6)

## 3. ಉಪಮಾನ

ಸಾದೃಶ್ಯ ಮೂಲಕವಾಗಿ ಜನಿಸುವ ಯಥಾರ್ಥಜ್ಞಾನಕ್ಕೆ ಸಾಧನವಾದುದು ಉಪಮಾನ ಪ್ರಮಾಣವೆನಿಸಿದೆ. ಮನೆಯಲ್ಲಿರುವ ಹಸುವನ್ನು ಕಂಡು ಕಾಡಿಗೆ ಬಂದವನು ಅಲ್ಲಿ ಗವಯವನ್ನು ನೋಡುವನು. ಅನಂತರ ಈ ಗವಯವು, ನಾನು ಕಂಡ ಗೋಸದೃಶವಾಗಿದೆ ಎಂಬ ಜ್ಞಾನ ಹುಟ್ಟುವುದು. ಅನಂತರ ಈ ಗವಯ ಸದೃಶವಾಗಿದೆ ನನ್ನ ಹಸು ಎಂಬ ಜ್ಞಾನ ಬರುವುದು. ಗವಯ ದಲ್ಲಿರುವ ಗೋಸಾದೃಶ್ಯಜ್ಞಾನವು ಕರಣವೆನಿಸಿದೆ. ವಾಕ್ಯಾರ್ಥ- ಜ್ಞಾನಜನ್ಯ ಸಂಸ್ಕಾರವು ವ್ಯಾಪಾರ-

ಸಾದೃಶ್ಯಪ್ರಮಾಕರಣಮುಪಮಾನಮ್। ತಥಾಹಿ- ಪ್ರಾಂಗಣೇಷು ದೃಷ್ಟಗೋಪಿಂಡಸ್ಯ ಪುರುಷಸ್ಯ ವನಂಗತಸ್ಯ ಗವಯೇಂದ್ರಿಯ ಸನ್ನಿಕರ್ಷೇ ಸತಿ ಭವತಿ ಪ್ರತೀತಿರಯಂ ಪಿಂಡೋ ಗೋಸದೃಶ ಇತಿ, ತದನಂತರಂ ಚ ಭವತಿ ನಿಶ್ಚಯೋಽನೇನ ಸದೃಶೀ ಮದೀಯಾ ಗೌರಿತಿ । (ವೇ.ಪ., ಪುಟ 229)

## 4. ಆಗಮ

ಪದ-ಪದಾರ್ಥಗಳ ಸಂಬಂಧಜ್ಞಾನವುಳ್ಳ ವ್ಯಕ್ತಿಗೆ ಶಬ್ದವು ಯಥಾರ್ಥ

ವಾದ ಅರಿವನ್ನು ತಂದುಕೊಡುತ್ತದೆ. ಶಬ್ದದಿಂದ ಜ್ಞಾನ ಜನಿಸಲು ಆಕಾಂಕ್ಷಾ-ಯೋಗ್ಯತಾ- ಆಸತ್ತಿ-ತಾತ್ಪರ್ಯಜ್ಞಾನವೆಂಬುದಾಗಿ ನಾಲ್ಕು ಕಾರಣಗಳು

ಪದಗಳ ನಡುವೆ ಪರಸ್ಪರ ಸಂಬಂಧ (ಜಿಜ್ಞಾಸಾ) ಇರುವುದು 'ಆಕಾಂಕ್ಷಾ' ಎನಿಸಿದೆ. ಅಗತ್ಯವಿರುವ ಪೂರ್ಣಮಾಹಿತಿ ದೊರಕಿಸುವ ಪದಪುಂಜಗಳಿರುವಲ್ಲಿ ಮಾತ್ರವೇ ವಾಕ್ಯವು ಅಭಿಲಷಿತ ಶಾಬ್ದಬೋಧವನ್ನು ಹುಟ್ಟಿಸಬಲ್ಲುದು. ಕೆಲವೊಮ್ಮೆ ಸೂಕ್ತ ಪದವನ್ನು ಸಂದರ್ಭೋಚಿತವಾಗಿ ಅಧ್ಯಾಹಾರ ಮಾಡಬೇಕಾಗಬಹುದು.

ಪದಾರ್ಥದ ಅಬಾಧಿತವಾದ ಸಂಬಂಧವನ್ನು ತಿಳಿಸುವುದು 'ಯೋಗ್ಯತಾ'. ಪದಾರ್ಥದ ಅರಿವು ಅನುಭವ ನೀಡುವಲ್ಲಿ ಸಮರ್ಥವಾದುದು,'ತಾತ್ಪರ್ಯ'ವೆನಿಸಿದೆ. ತಡೆ ಇಲ್ಲದೆಯೇ ಪದಜನ್ಯವಾದ ಪದಾರ್ಥೋಪಸ್ಥಿತಿಯು 'ಆಸತ್ತಿ' ಎನಿಸಿದೆ. ಅದೇ ವ್ಯಾಪಾರವೆನಿಸುವುದು. ಶಾಬ್ದಬೋಧವು ಫಲ.

ಶಕ್ತಿವೃತ್ತಿ ಮತ್ತು ಲಕ್ಷಣಾವೃತ್ತಿ ಎಂಬುದಾಗಿ ಎರಡು ಮಾಧ್ಯಮಗಳಿಂದ ಪದಾರ್ಥದ ಜ್ಞಾನವು ಶಬ್ದದ ಮೂಲಕ ಜನಿಸುವುದು. ಶಕ್ಯಾರ್ಥಸಂಬಂಧವು 'ಲಕ್ಷಣಾ' ಎನಿಸಿದೆ. ಅದು ಎರಡು ಬಗೆ- ಕೇವಲ ಲಕ್ಷಣಾ-ಲಕ್ಷಿತಲಕ್ಷಣಾ ಎಂಬುದಾಗಿ. ಸಾಕ್ಷಾತ್ತಾಗಿ ಶಕ್ಯ ಸಂಬಂಧವು ಲಕ್ಷಣಾ. ಗಂಗಾಪದವು ಗಂಗೆಯ ಸಂಬಂಧವುಳ್ಳ ತೀರವನ್ನು ಲಕ್ಷಣಾವೃತ್ತಿಯಿಂದ ಬೋಧಿಸುತ್ತದೆ . ಶಕ್ಯದ ಪರಂಪರಾಸಂಬಂಧವಿರುವಾಗ ಲಕ್ಷಿತಲಕ್ಷಣಾ. ದ್ವಿರೇಫ (ಎರಡು ರೇಫಗಳು ಉಳ್ಳದ್ದು ಎಂಬ ಅರ್ಥದಲ್ಲಿ) ಪದವು ಮೊದಲು ಭ್ರಮರಪದವನ್ನು ಬೋಧಿಸಿ ನಂತರ ಆ ಪದದ ಮೂಲಕ ದುಂಬಿಯನ್ನು ಬೋಧಿಸುವುದು. ಕೇವಲ ಲಕ್ಷಣಾವೃತ್ತಿಯು ಜಹತೀ-ಅಜಹತೀ-ಜಹದಜಹತೀ ಎಂಬುದಾಗಿ ಮೂರು ಬಗೆಯಾಗಿದೆ.

'ವಿಷವನ್ನು ಭಕ್ಷಿಸು' ಎಂಬಲ್ಲಿ ವಾಚ್ಯಾರ್ಥವನ್ನು ತೊರೆದು 'ಶತ್ರುವಿನ ಮನೆಗೆ ಊಟಕ್ಕೆ ಹೋಗಬೇಡ' ಎಂಬುದಾಗಿ ಭೋಜನನಿಷೇಧವನ್ನು ಲಕ್ಷಣಾವೃತ್ತಿಯಿಂದ ಈ ವಾಕ್ಯವು ಬೋಧಿಸುವುದು.

ಶಕ್ಯಾರ್ಥದ ಜೊತೆಗೆ ಎಲ್ಲ ಅರ್ಥಾಂತರವು ಬೋಧಿತವಾಗುವುದೋ ಅಲ್ಲಿ ಅಜಹಲ್ಲಕ್ಷಣಾವೃತ್ತಿಯನ್ನು ಅಂಗೀಕರಿಸಲಾಗಿದೆ. 'ನಾಯಿ ತಿನ್ನದಂತೆ

ಆಹಾರ ರಕ್ಷಿಸು' ಎಂಬಲ್ಲಿ ಸಮಾನ ಅಪಾಯಕಾರಿಯಾದ ಬೆಕ್ಕು ಮುಂತಾದ ಪ್ರಾಣಿಗಳೆಲ್ಲ ನಾಯಿಯ ಜೊತೆಗೆ ಅಜಹಲ್ಲಕ್ಷಣಾವೃತ್ತಿಯಿಂದ ಬೋಧಿತವಾಗುವವು.

ವಿಶಿಷ್ಟವಾಚಕ ಪದಪ್ರಯೋಗದಲ್ಲಿ ವಿಶೇಷಣಾಂಶವನ್ನು ತೊರೆದು ವಿಶೇಷ್ಯವನ್ನು ಮಾತ್ರವೇ ತಿಳಿಸಿದಾಗ 'ಜಹದಜಹಲ್ಲಕ್ಷಣಾ' ಎನಿಸುವುದು. 'ಸೋऽಯಂ ದೇವದತ್ತಃ' ಎಂಬಲ್ಲಿ ದೇವದತ್ತನಲ್ಲಿ ಗತಿಸಿದ ದೇಶಕಾಲಗಳ ಸಂಬಂಧವೈಶಿಷ್ಟ್ಯವನ್ನು ಹೇಳಲು ಸಾಧ್ಯವಿಲ್ಲದ ಕಾರಣ ವಿಶೇಷಣಾಂಶಗಳನ್ನು ತೊರೆದು ಕೇವಲ ದೇವದತ್ತನಲ್ಲಿ ಅಭೇದ ಹೇಳುವುದು 'ಜಹದಜಹಲ್ಲಕ್ಷಣಾ' ಎನಿಸಿದೆ. ಲಕ್ಷಣಾಕ್ಕೆ ತಾತ್ಪರ್ಯಾನುಪಪತ್ತಿಯು ಕಾರಣ. ಇಂತಹ ಆಗಮಗಳು ಪೌರುಷೇಯ-ಅಪೌರುಷೇಯವೆಂದು ಎರಡು ಬಗೆಯಾಗಿವೆ.

**ವೇದ-ಉಪನಿಷತ್ತುಗಳ ಆಂತರ್ಯ**

ಸೂರ್ಯನು ಇತರಾಪೇಕ್ಷೆ ಇಲ್ಲದೆಯೇ ರೂಪವುಳ್ಳ ವಸ್ತುವನ್ನು ತೋರಿಸುವಂತೆ, ವೇದವೂ ಅನ್ಯನಿರಪೇಕ್ಷವಾಗಿ ವಸ್ತುಪರಿಚಾಯಕವಾಗಿದೆ. ವಿಭಿನ್ನ ದಾರ್ಶನಿಕರ, ಮಾತುಗಳು ತಮ್ಮ ಪ್ರಾಮಾಣ್ಯಕ್ಕಾಗಿ ಮೂಲ ವಾಕ್ಯವೊಂದರ ಅವಲಂಬನೆ ಪಡೆದಿದ್ದಾವೆ-

**'ವೇದಸ್ಯ ಹಿ ನಿರಪೇಕ್ಷಂ ಸ್ವಾರ್ಥೇ ಪ್ರಾಮಾಣ್ಯಂ ರವೇರಿವ ರೂಪವಿಷಯೇ ಪುರುಷವಚಸಾಂ ತು ಮೂಲಾಂತರಾಪೇಕ್ಷಂ ವಕ್ತೃಸ್ಮೃತಿವ್ಯವಹಿತಂ ಚೇತಿ ವಿಪ್ರಕರ್ಷಃ ।'** (ಸೂ.ಭಾ., 2-1-1)

ಅತೀಂದ್ರಿಯವಾದ ಧರ್ಮ-ಅಧರ್ಮ-ಸ್ವರ್ಗ-ನರಕ-ಈಶ್ವರ ಸ್ವರೂಪ ನಿರ್ಧಾರಣ ವಿಷಯದಲ್ಲಿ ವೇದವೇ ಪರಮಪ್ರಮಾಣ- **'ಶ್ರುತಿಶ್ಚ ನಃ ಪ್ರಮಾಣಮತೀಂದ್ರಿಯಾರ್ಥವಿಜ್ಞಾನೋತ್ಪತ್ತೌ'** (ಸೂ.ಭಾ., 2-3-1)

ವೇದವು ತಿಳಿಸುವ ಪ್ರಮೇಯದ ಬಗ್ಗೆ ಕಪಿಲ-ಕಣಾದಮುನಿ ವಚನ ವಿರೋಧ ತೋರುವುದು ನಿಜ. ಆದರೆ ಕಪಿಲಾದಿವಚನ ಪ್ರಾಮಾಣ್ಯವೂ ಸಂಧಿಗ್ಧವಲ್ಲವೆ? ಅವುಗಳ ಪ್ರಾಮಾಣ್ಯನಿರ್ಧರಿಸಲು ಮೂಲ ಪ್ರಮಾಣ ವೊಂದರ ಅಗತ್ಯವಿದೆ. ವೇದವಿರೋಧ ಬಂದಲ್ಲಿ ಆ ಕಪಿಲಾದಿಪ್ರಣೀತ ಶಾಸ್ತ್ರವು ಪ್ರಮಾಣವೆನಿಸದು-

**ಕಾಪಿಲಕಾಣಾದಾದಿತರ್ಕಶಾಸ್ತ್ರವಿರೋಧಃ ಇತಿ ಚೇತ್ ನ । ತೇಷಾಂ ಮೂಲಾಭಾವೇ ವೇದವಿರೋಧೇ ಚ ಭ್ರಾಂತತ್ವೋಪಪತ್ತೇಃ ।**

(ತೈ.ಶಾಂ. ಭಾ. ಭೃ.ವ)

**ಶಾಸ್ತ್ರದ ಗುರಿಯಾವುದು?**

ಶಾಸ್ತ್ರವು ಅಂತಿಮಪ್ರಮಾಣ. ಆತ್ಮನಲ್ಲಿ ಯಾವ ಧರ್ಮಗಳೂ ಇಲ್ಲವೆಂದು ತಿಳಿಸಲು (ಆರೋಪಿತ ಧರ್ಮಗಳ ನಿರಾಕರಣೆ ಮಾಡಲು) ಶಾಸ್ತ್ರವು ಪ್ರವೃತ್ತವಾಗಿದೆ. ತಿಳಿಯದ ವಿಷಯವನ್ನು ತಿಳಿಯಪಡಿಸುವ ಗುರಿ ಶಾಸ್ತ್ರಕ್ಕಿಲ್ಲ-

**'ಶಾಸ್ತ್ರಂ ತು ಅಂತ್ಯಂ ಪ್ರಮಾಣಮ್ । ಅತದ್ಧರ್ಮಾರೋಪಣಮಾತ್ರ-ನಿವರ್ತಕತ್ವೇನ ಪ್ರಾಮಾಣ್ಯಮಾತ್ಮನಃ ಪ್ರತಿಪದ್ಯತೇ । ನ ತು ಅಜ್ಞಾತಾರ್ಥ-ಜ್ಞಾಪಕತ್ವೇನ ।'** (ಭ.ಗೀ.ಭಾ., 2-18)

ವೇದದ ಮುಖ್ಯಗುರಿ ಬ್ರಹ್ಮವೊಂದೇ ಸತ್ಯವೆಂದು ತಿಳಿಸುವುದಾಗಿದೆ-

**ಬ್ರಹ್ಮೈವೈಕಂ ಪರಮಾರ್ಥಸತ್ಯಮಿತಿ ವೇದಾನುಶಾಸನಮ್ ।**

(ಮುಂಡಕ.ಭಾ, 3-1-12.)

ಎಲ್ಲ ಉಪನಿಷತ್ತುಗಳೂ ಆತ್ಮನ ಶುದ್ಧವಾದ ಅರಿವನ್ನು ನೀಡಲು ಹೊರಟಿವೆ. ನಿರ್ಧರ್ಮಕನಾದ ಆತ್ಮನನ್ನು ಪರಿಚಯಿಸಿದ ನಂತರ ಅವುಗಳು, ಕಾಡಿನಲ್ಲಿ ಹುಟ್ಟಿದ ಬೆಂಕಿ ಕಾಡನ್ನು ಸುಟ್ಟು, ತಾನೂ ಅಸ್ತಿತ್ವನ್ನು ಕಳೆದು ಕೊಳ್ಳುವಂತೆ, ಬ್ರಹ್ಮಜ್ಞಾನ ಬಂದ ನಂತರ ವೇದಗಳೂ ತಮ್ಮ ಅಸ್ತಿತ್ವವನ್ನು ಕಳೆದುಕೊಳ್ಳುತ್ತವೆ - '' **'ವೇದಾಃ ಅವೇದಾಃ' ಇತಿ ವಚನಾತ್ ಇಷ್ಯತ ಏವಾಸ್ಮಾಭಿಃ ಶ್ರುತೇರಪ್ಯಭಾವಃ ಪ್ರಬೋಧೇ''** (ಸೂ.ಭಾ., 4-1-3)

## 5. ಅರ್ಥಾಪತ್ತಿ

ಒಂದು ಸಿದ್ಧವಾದ ಸಂಗತಿಯನ್ನು ಉಪಪಾದಿಸಲು ನಾವು ಏನನ್ನು ಕಲ್ಪಿಸುತ್ತೇವೆಯೋ ಅದು 'ಅರ್ಥಾಪತ್ತಿ' ಎನಿಸುವುದು. ದೇವದತ್ತನು ದಷ್ಟಪುಷ್ಟನಾಗಿರುವನು. ಆದರೆ ಹಗಲು ಊಟ ಮಾಡುವುದಿಲ್ಲ. ಪ್ರತ್ಯಕ್ಷಸಿದ್ಧವಾದ ಪೀನತ್ವ (ದಷ್ಟಪುಷ್ಟತೆಯನ್ನು)ವನ್ನು ಉಪಪಾದಿಸಲು ರಾತ್ರಿ ಭೋಜನ ಮಾಡುವನೆಂದು ಕಲ್ಪಿಸುವುದು ಅನಿವಾರ್ಯ.

### 6. ಅನುಪಲಬ್ಧಿ

ಅಭಾವಜ್ಞಾನ ಬರಲು ಯೋಗ್ಯವಸ್ತುವಿನ ಅನುಪಲಬ್ಧಿಯು ಕಾರಣವಾಗಿದೆ. ಬೆಳಕಿರುವ ಕೋಣೆಯಲ್ಲಿ ವಾಸ್ತವಿಕವಾಗಿ ನಾವು ಪುಸ್ತಕವನ್ನು ಇಟ್ಟಿಲ್ಲ. ಆದ್ದರಿಂದ ಇಲ್ಲಿ ಪುಸ್ತಕವಿಲ್ಲ ಎಂಬ ಅಭಾವ ಜ್ಞಾನವು ಜನಿಸುವುದು. ಅಭಾವಕ್ಕೂ ಇಂದ್ರಿಯಕ್ಕೂ ಸನ್ನಿಕರ್ಷವಿಲ್ಲದ ಕಾರಣ, ಇಂದ್ರಿಯದಿಂದ ಘಟಾಭಾವವನ್ನು ಗ್ರಹಿಸುವ ವೃತ್ತಿರೂಪಜ್ಞಾನವು ಜನಿಸಲಾರದು. ಆದ್ದರಿಂದ ಅಭಾವಪ್ರತ್ಯಕ್ಷಕ್ಕೆ ಅನುಪಲಬ್ಧಿಯೇ ಪ್ರಧಾನಸಾಧನವಾಗಿದ್ದು ಪ್ರಮಾಣವೆನಿಸಿದೆ.

**'ವ್ಯವಹಾರೇ ಭಾಟ್ಟನಯಃ'** ಎಂಬ ಪ್ರಾಚೀನರ ಉಕ್ತಿಯಂತೆ ಅದ್ವೈತ ವೇದಾಂತವು ಭಾಟ್ಟಮೀಮಾಂಸಕರ ಅಭಿಪ್ರಾಯದಂತೆ ಆರು ಪ್ರಮಾಣಗಳನ್ನು ಅಂಗೀಕರಿಸಿದೆ. ಅದರ ಸಂಕ್ಷಿಪ್ತ ಪರಿಚಯವನ್ನು ನಾವು ಮಾಡಿಕೊಂಡಿದ್ದೇವೆ.

ಹೀಗೆ ಅದ್ವೈತವೇದಾಂತದಂತೆ ಪ್ರಮಾಣಸ್ವರೂಪ ಮತ್ತು ವೈವಿಧ್ಯಗಳನ್ನು ಮೂಲಗ್ರಂಥಗಳನ್ನಾಧರಿಸಿ ನೀಡಲಾಗಿದೆ. ಇದನ್ನು ಆಧರಿಸಿದ ಪ್ರಮೇಯ ವ್ಯವಸ್ಥೆಯ ಬಗ್ಗೆ ಮುಂದೆ ಅಧ್ಯಯನ ಮುಂದುವರಿಸೋಣ.

## IV. ಜೀವ

ಅದ್ವೈತ ವೇದಾಂತದಲ್ಲಿ ಜೀವಸ್ವರೂಪದ ವಿವರವನ್ನು ತಿಳಿಯೋಣ. ವಸ್ತುನಿಷ್ಠವಾಗಿ ಚಿಂತಿಸುವುದಾದರೆ ಜೀವ ಎಂಬ ವಸ್ತು ಅಸ್ತಿತ್ವದಲ್ಲಿಲ್ಲ. ನಿರ್ಗುಣ-ನಿರಾಕಾರವಾದ ಚೈತನ್ಯವೊಂದೇ ಸತ್ಯವಸ್ತುವೆನಿಸಿದೆ. ಆದರೆ ಜೀವರ ಕಾಣ್ಕೆ ಅವಿದ್ಯೆಯ ಮೂಲಕ ಸಂಭವಿಸಿದೆ. ಶಾಂಕರಭಾಷ್ಯದಲ್ಲಿ ಮೂರು ಉದಾಹರಣೆಗಳ ಮೂಲಕ ಜೀವ-ಬ್ರಹ್ಮರ ಸಂಬಂಧವನ್ನು ವಿಶ್ಲೇಷಿಸಲಾಗಿದೆ. ಸೂಕ್ಷ್ಮ ವ್ಯತ್ಯಾಸಗಳನ್ನು ಗುರುತಿಸಿ ನಂತರದ ದಾರ್ಶನಿಕರು ಇದನ್ನು ಅವಚ್ಛೇದವಾದ -ಪ್ರತಿಬಿಂಬವಾದ ಆಭಾಸವಾದ ಎಂದು ಕರೆದಿದ್ದಾರೆ. ಮೇಲ್ಕಂಡ ವಾದಗಳನ್ನು ಮಂಡಿಸಿದ ಮಹನೀಯರನ್ನು ಉಲ್ಲೇಖಿಸಿದ ಸಾಂಪ್ರದಾಯಿಕ ಶ್ಲೋಕ ಹೀಗಿದೆ-

**ವಾಚಸ್ಪತೇರವಚ್ಛೇದಃ ಆಭಾಸೋ ವಾರ್ತಿಕಸ್ಯ ಚ ।**
**ಸಂಕ್ಷೇಪಶಾರೀರಕೃತಾಂ ಪ್ರತಿಬಿಂಬಮಿಹೋಚ್ಯತೇ ॥**

(ಸಿ.ಬಿಂ.ಉ, - ಅ.ವಾ.ಶಾ)

**ಅವಚ್ಛೇದವಾದ**

ಮಿತಿ ಇಲ್ಲದ ವಸ್ತುವನ್ನು ಉಪಾಧಿನಿಮಿತ್ತದಿಂದ ಮಿತಿಯುಳ್ಳದ್ದಾಗಿ ವ್ಯವಹರಿಸುವ ವಾದವನ್ನು 'ಅವಚ್ಛೇದವಾದ' ಎನ್ನುವರು. ಈ ಸಿದ್ಧಾಂತವನ್ನು ಸರಳ ಉದಾಹರಣೆಯೊಂದಿಗೆ ಹೀಗೆ ವಿವರಿಸಬಹುದು-

ನಾವು 60 X40 ಅಳತೆಯ ನಿವೇಶನದಲ್ಲಿ ಮನೆಯೊಂದನ್ನು ಕಟ್ಟುತ್ತೇವೆ. ನಾವು ಮನೆಕಟ್ಟುವ ಮೊದಲು ಅಲ್ಲಿದ್ದದ್ದು ಆಕಾಶ. (Space) ಮನೆಕಟ್ಟಿದ ನಂತರವೂ ಅಲ್ಲಿ ಆಕಾಶವಿದೆ. ಮತ್ತು ಮನೆ ಕೆಡವಿದಾಗಲೂ ಅಲ್ಲಿ ಉಳಿಯುವುದು ಆಕಾಶವೇ. ಮನೆಕಟ್ಟುವುದೆಂದರೆ, ನಿರ್ದಿಷ್ಟ ಅಳತೆಯ ನಾಲ್ಕಾರು ಕೋಣೆಗಳನ್ನು ಸಿದ್ಧಪಡಿಸಿ ಅವುಗಳಿಗೆ ದೇವಸದನ-ಭೋಜನ ಶಾಲೆ-ವಿಶ್ರಾಂತಿಧಾಮ, ಅತಿಥಿನಿವಾಸ-ಅಡುಗೆಮನೆ-ಸ್ನಾನದ ಕೋಣೆ ಇತ್ಯಾದಿ ಹೆಸರುಗಳನ್ನು ನೀಡುತ್ತೇವೆ. ವಿಸ್ತೃತವಾದ ಆಕಾಶಕ್ಕೆ ಗೋಡೆಗಳನ್ನು ಅಳವಡಿಸಿ, ಅಲ್ಲಲ್ಲಿ ನಡೆಸುವ ಕೆಲಸಗಳನ್ನು ಆಧರಿಸಿ (ಉಪಾಧಿನಿಮಿತ್ತ ದಿಂದ) ಭಿನ್ನ ಭಿನ್ನ ಶಬ್ದಗಳಿಂದ ವ್ಯವಹಾರ ನಡೆಸುತ್ತೇವೆ. ವಾಸ್ತವಿಕವಾಗಿ ನೋಡಿದರೆ ಅಲ್ಲಿ ಅಂತಿಮವಾಗಿ ಇರುವುದು, ಉಳಿಯುವುದು ಆಕಾಶವೇ. ಉಪಾಧಿಗಳಿಂದ ಅಲ್ಲಿರುವ-ಆಕಾಶವನ್ನು ಬೇರೆ ಬೇರೆ ಹೆಸರಿನಿಂದ ಕರೆಯ ಲಾಗಿದೆ. ಮತ್ತೆ ಮನೆಯನ್ನು ಕೆಡವಿದಾಗ ಸ್ನಾನದ ಕೋಣೆ-ಪಾಕಶಾಲೆ-ಭೋಜನಶಾಲೆ, ಮೊದಲಾದ ವ್ಯವಹಾರ ತಾನೇ ತಾನಾಗಿ ನಿವೃತ್ತವಾಗುವುದು. ಅಂತಿಮವಾಗಿ ಅಲ್ಲಿ ಉಳಿಯುವುದು ಅಪರಿಮಿತವಾದ ಆಕಾಶ ಮಾತ್ರ.

ಇದರಂತೆ ಬ್ರಹ್ಮಚೈತನ್ಯವು ಅಪರಿಮಿತವೂ ಅನಂತವೂ ಆಗಿದೆ. ಆ ಚೈತನ್ಯಕ್ಕೆ ಅವಿದ್ಯೆಯ ಸಂಪರ್ಕವಾದಾಗ 'ಜೀವ'ನು ಕಾಣುತ್ತಾನೆ. ಯಾವ Space (ಆಕಾಶದಲ್ಲಿ) ಅಡುಗೆ ಮಾಡುತ್ತವೋ ಆ ಹಿನ್ನೆಲೆಯಲ್ಲಿ ಅ ಆಕಾಶವನ್ನು 'ಅಡುಗೆ ಮನೆ' ಎಂದು ವ್ಯವಹರಿಸಿದಂತೆ. ಯಾವಾಗ ಈ ಉಪಾಧಿಯು ನಿವೃತ್ತವಾಗುವುದೋ ಆಗ ಉಳಿಯುವುದು ಮಹಾಕಾಶ ಮಾತ್ರ. ಅವಿದ್ಯೆಯ ಸಂಪರ್ಕವು ಚೈತನ್ಯಕ್ಕೆ ದೂರವಾದಾಗ ಉಳಿಯುವುದು ಶುದ್ಧ ಚೈತನ್ಯ ಮಾತ್ರ.

ಆದರೆ ಉಪಾಧಿಯ ಸಂಪರ್ಕದಿಂದ ಎರಡನೆಯ ವಸ್ತು ಕಾಣಬರುತ್ತದೆ. ಅದೇ ಜೀವ ಚೈತನ್ಯ.

ಶ್ರುತಿಯೂ ಇದನ್ನು ಸ್ಫುಟವಾಗಿ ವಿವರಿಸಿದೆ-

**'ಘಟಸಂವೃತಮಾಕಾಶಂ ನೀಯಮಾನೇ ಘಟೇ ಯಥಾ ।**
**ಘಟೋ ನೀಯೇತ ನಾಕಾಶಂ ತದ್ವಜ್ಜೀವೋ ನಭೋಪಮಃ ॥'**
(ಸಿ.ಲೇ.ಸಂ., ಪುಟ 119)

ಘಟಾದಿವಸ್ತುಗಳನ್ನು ಕೊಂಡೊಯ್ಯುವಾಗ ಅದರಲ್ಲಿ ಆಕಾಶವನ್ನು ಕೊಂಡುಹೋದಂತೆ ಅನ್ನಿಸುವುದು. ವಾಸ್ತವದಲ್ಲಿ ವ್ಯಾಪ್ತವಾದ ಆಕಾಶಕ್ಕೆ ಗತಿ ಇರುವುದಿಲ್ಲ. ಅದರಂತೆ ಶುದ್ಧಚೈತನ್ಯಕ್ಕೆ ಯಾವ ವಿಕಾರವಿರುವುದಿಲ್ಲ. ಅವಿದ್ಯೆಯಿಂದ ಅದು ವಿಕೃತವಾದಂತೆ ಅನ್ನಿಸುವುದು.

ಶಾಂಕರಭಾಷ್ಯದಲ್ಲಿ ಉದಾಹರಣಪೂರ್ವಕವಾಗಿ ಮೇಲಿನ ಪ್ರಮೇಯವನ್ನು ವಿವರಿಸಲಾಗಿದೆ-

1. **ಯಥಾ ಚಾಕಾಶೋ ಘಟಾದಿಷು ಗಚ್ಛತ್ಸು ಗಚ್ಛನ್ನಿವ ವಿಭಾವ್ಯಮಾನೋಽಪಿ ನ ಪರಮಾರ್ಥತೋ ಗಚ್ಛತಿ ।** (ಬ್ರ.ಸೂ.ಭಾ., 2.3.46)
2. **ಘಟಕರಕ ಗಿರಿಗುಹಾದ್ಯುಪಾಧಿಸಂಬಂಧ ಇವವ್ಯೋಮ್ನಃ।**
(ಬ್ರ.ಸೂ., 1-1-5)
3. **ಏಕಸ್ಯೈವ ತು ಭೇದವ್ಯವಹಾರ ಉಪಾಧಿಕೃತಃ । ಯಥಾ ಘಟಾಕಾಶೋ ಮಠಾಕಾಶ ಇತಿ ।** (ಬ್ರ.ಸೂ.ಭಾ., 1-2-20)

ಬ್ರಹ್ಮಸಿದ್ಧಿ ಹಾಗೂ ಭಾಮತಿಗಳಲ್ಲೂ ಅವಿದ್ಯೆಯಿಂದ ಜೀವನ ಕಾಣ್ಕೆ ಮತ್ತು ಅವನಲ್ಲಿ ಅಜ್ಞಾನದ ಒಡಂಬಡಿಕೆ ಎಂಬ ಸಂಗತಿ ಸ್ಫುಟವಾಗಿ ನಿರೂಪಿತವಾಗಿದೆ-

1. **ಉಕ್ತಮೇತಜ್ಜೀವಾನಾಮವಿದ್ಯಾಕಲುಷಿತತ್ವಂ ನ ಬ್ರಹ್ಮಣಃ । ತಸ್ಮಾದವಿದ್ಯಯಾ ಜೀವಾಃ ಸಂಸಾರಿಣಃ, ವಿದ್ಯಯಾ ಚ ಮುಚ್ಯಂತೇ ।**
(ಬ್ರ.ಸಿ., ಪುಟ 12)

2 **ಯಥಾ ಘಟಾಕಾಶೋ ನಾಮ ನ ಪರಮಾಕಾಶಾದನ್ಯಃ ಅಥ ಚ ಅನ್ಯ ಇವ ಯಾವದ್ ಘಟಮನುವರ್ತತೇ। ನ ಚಾಸೌ ದುರ್ವಿವೇಚನಃ**

**ತದುಪಾಧೇರ್ಘಟಸ್ಯ ವಿವಿಕ್ತತ್ವಾತ್ । ಏವಮನಾದ್ಯವಿದ್ಯೋಪಾಧಾನ-ಕಲ್ಪಿತೋ ಜೀವಃ ನ ವಸ್ತುತಃ ಪರಮಾತ್ಮನೋ ಭಿದ್ಯತೇ, ತದುಪಾಧ್ಯು-ದ್ಭವಾಭಾವಾಭ್ಯಾಂ ಚ ಉದ್ಭೂತ ಇವ ಅಭಿಭೂತ ಇವ ಚ ಪ್ರತೀಯತೇ ।**

(ಭಾಮತೀ 2-3-3)

3. **ಔಪಾಧಿಕತ್ವಾಚ್ಚ ಭೇದಸ್ಯ ಘಟಕರಕಾದ್ಯಾಕಾಶವತ್ ವಿರುದ್ಧಧರ್ಮ-ಸಂಸರ್ಗಸ್ಯೋಪಪತ್ತೇಃ।** (ಬ್ರ.ಶಾಂ.ಭಾ., 2-3-11)

ವಾಚಸ್ಪತಿಮಿಶ್ರರ ಪ್ರಕಾರ ಅವಿದ್ಯೆಗಳು ಅನೇಕ. ಅವುಗಳನ್ನು ಹೊಂದಿದ ಜೀವರೂ ಅನೇಕ. ಯಾರಿಗೆ ಐಕ್ಯೋಪಾಸನೆಯಿಂದ ಅವಿದ್ಯೆಯು ನಿವೃತ್ತವಾಗುವುದೋ ಅವರು ಮುಕ್ತರಾಗುವರು. ಅವಿದ್ಯೆಯನ್ನು ಅಪ್ಪಿಕೊಂಡವರು ಸಂಸಾರದಲ್ಲೇ ತೊಳಲಾಡುವರು.

**'ನ ವಯಂ ಪ್ರಧಾನವದವಿದ್ಯಾಂ ಸರ್ವಜೀವೇಷ್ವೇಕಾಮಾಚಕ್ಷ್ಮಹೇ । ಕಿಂತ್ವಿಯಂ ಪ್ರತಿಜೀವಂ ಭಿದ್ಯತೇ । ತೇನ ಯಸ್ಯೈವ ಜೀವಸ್ಯ ವಿದ್ಯೋತ್ಪನ್ನಾ ತಸ್ಯೈವಾವಿದ್ಯಾ ಅಪನೀಯತೇ । ನ ಜೀವಾಂತರಸ್ಯ'**

(ಭಾಮತೀ, ಪುಟ 377-78)

**ಆಭಾಸವಾದ**

ಶುದ್ಧಚಿದಾತ್ಮನು ಗೌಣನಾಗಿ (ಜೀವನಾಗಿ) ಕಾಣಿಸುವುದೇ ಆಭಾಸವಾದ. ಕೆಂಬಣ್ಣದ ಹೂವಿನ ಹತ್ತಿರ ಇರುವ ಬಿಳಿಯಸ್ಫಟಿಕ ಮಣಿಯಲ್ಲಿ ವಾಸ್ತವದಲ್ಲಿ ಇಲ್ಲದ ಕೆಂಬಣ್ಣ (ರಕ್ತಿಮಾಭಾಸ) ಕಾಣಿಸುವುದು.

ಪ್ರಕೃತ ಪುಷ್ಪದಲ್ಲಿರುವ ಕೆಂಬಣ್ಣವೇ ಅದರ ಹತ್ತಿರದ ಸ್ಫಟಿಕದಲ್ಲಿ ಕಾಣದೆಯೇ ಪುಷ್ಪದಲ್ಲಿರುವ ಕೆಂಬಣ್ಣದಂತಹ (ಸದೃಶವಾದ) ಬಣ್ಣವು ಕಾಣಿಸುತ್ತದೆ. ಸ್ಫಟಿಕದಲ್ಲಿ ಕಾಣುವ ಬಣ್ಣವು ಪಾರಮಾರ್ಥಿಕವಾಗಿ ಅಸತ್ಯ. ಹಾಗೇ ಚೆತನ್ಯಕ್ಕೆ ಬುದ್ಧಿಯೆಂಬ ಉಪಾಧಿಯ ಸಂಪರ್ಕ (ಸನ್ನಿಧಾನ) ಉಂಟಾದಾಗ ಬುದ್ಧಿಯಲ್ಲಿರುವ ಗುಣವು ಚೈತನ್ಯದಲ್ಲಿ ಕಾಣಿಸುವುದು. ವಾಸ್ತವದಲ್ಲಿ ಇಲ್ಲದ ಈ ಚಿದಾಭಾಸವನ್ನೇ 'ಜೀವ' ಎನ್ನುವುದು. ಇದು ಆಭಾಸವಾದದ ಸಾರ.

ಇದನ್ನು ಶ್ರೀಶಂಕರಾಚಾರ್ಯರು ಸೂತ್ರಭಾಷ್ಯದಲ್ಲಿ ವಿವರಿಸಿದ್ದಾರೆ.

ನೀರಿನಲ್ಲಿ ಕಾಣುವ ಸೂರ್ಯನಂತೆ, ಜೀವನೂ ಪರಮಚೇತನದ 'ಆಭಾಸ' ಮಾತ್ರವೆನಿಸಿದ್ದಾನೆ. (ನೀರಿನಲ್ಲಿ ಕಾಣುವ ಸೂರ್ಯ ಹೇಗೆ ವಾಸ್ತವದಲ್ಲಿ ಅಸತ್ಯನೋ ಹಾಗೆ ಜೀವನೂ ವಾಸ್ತವದಲ್ಲಿ ಅಸತ್ಯ)

1. **'ಆಭಾಸ ಏವ ಚೈಷ ಜೀವಃ ಪರಮಾತ್ಮನೋ ಜಲಸೂರ್ಯಕಾದಿವತ್ ಪ್ರತಿಪತ್ತವ್ಯಃ।'** (ಬ್ರ.ಸೂ.ಭಾ. 2-3-50)

2. **'ಜೀವೋ ಹಿ ನಾಮ ದೇವತಾಯಾಃ ಆಭಾಸಮಾತ್ರಮ್'** (ಛಾ.ಭಾ.6-3-2)

ರಾಜಕುಮಾರನೊಬ್ಬ ವ್ಯಾಧರ ನಡುವೆ ಬೆಳೆದು ತನ್ನ ನಿಜರೂಪವನ್ನು ಮರೆಯುತ್ತಾನೆ. ಸುಜನನೊಬ್ಬ ಅವನು ರಾಜಕುಮಾರನೆಂದು ಪರಿಚಯಿಸಿದಾಗ ಅಸಹಜವಾದ ವ್ಯಾಧಭಾವನ್ನು ತೊರೆದು ಸಹಜವಾದ ರಾಜತ್ವವನ್ನು ಅನುಭವಿಸುವನು.

ವಾರ್ತಿಕದಲ್ಲಿ ಶ್ರೀಸುರೇಶ್ವರಾಚಾರ್ಯರು ಈ ಪ್ರಮೇಯವನ್ನು ಹೃದಯಂಗಮವಾಗಿ ವಿವರಿಸಿದ್ದಾರೆ-

ಯಾವಾಗ ರಾಜಕುಮಾರನಿಗೆ ತನ್ನ ನಿಜರೂಪ ತಿಳಿಯುವುದೋ ಆಗ ತಾನು ಅಸಹಜಸ್ಥಿತಿಯಿಂದ ಹೊರಬರುವನು. ಇದರಂತೆ ಸಾಧಕನು 'ತತ್ತ್ವಮಸಿ' ಇತ್ಯಾದಿವಾಕ್ಯಗಳಿಂದ ತನ್ನ ನಿಜವಾದ ಅರಿವು ಪಡೆದಾಗ ಅಜ್ಞಾನವನ್ನು ಕಳೆದುಕೊಂಡು ಇರುವ ಬ್ರಹ್ಮಭಾವದ ಅಭಿವ್ಯಕ್ತಿ ಪಡೆಯುವನು-

**'ರಾಜಸೂನೋಃ ಸ್ಮೃತಿಪ್ರಾಪ್ತೌ ವ್ಯಾಧಭಾವೋ ನಿವರ್ತತೇ ।**
**ತಥೈವಮಾತ್ಮನೋಽಜ್ಞಸ್ಯ ತತ್ತ್ವಮಸ್ಯಾದಿವಾಕ್ಯತಃ ॥'**
(ಬೃ.ಭಾ.ವಾ., ಅ.1, ಬ್ರಾ.1, 33)

ಆಭಾಸವಾದದ ಅಂತರಂಗವೂ ಜೀವನ ಅಸ್ತಿತ್ವ, ಕಾಲ್ಪನಿಕವೆಂದೇ ಆಗಿರುತ್ತದೆ.

**ಪ್ರತಿಬಿಂಬವಾದ**

ಕನ್ನಡಿಯ ಮುಂದೆ ನಿಂತಾಗ ನಮ್ಮ ಪ್ರತಿಬಿಂಬವು ಕಾಣುವುದು. ತನ್ನ ಸಂಪರ್ಕಹೊಂದಿದ ವಸ್ತುವನ್ನು ತನ್ನ ಗುಣದ ಜೊತೆಗೆ ಬೇರೆಯಾಗಿ

ತೋರಿಸುವುದು ಕನ್ನಡಿಯ (ಉಪಾಧಿಯ) ಗುಣ. ಅದರಂತೆ ಅಜ್ಞಾನವೆಂಬ ಉಪಾಧಿಯ ಸಂಪರ್ಕ ಹೊಂದಿದ ಚೈತನ್ಯವು, ಜೀವನನ್ನು ತೋರಿಸುವುದು. ಇಲ್ಲಿ ಬಿಂಬವು ಸತ್ಯ. ಪ್ರತಿಬಿಂಬವು ಅಸತ್ಯ. ಅದರಂತೆ ಜೀವನು ಅಂತಿಮ ಸತ್ಯನಲ್ಲ ಮತ್ತು ಉಪಾಧಿಯ ಮೂಲಕ ಕಲ್ಪಿತನೆಂಬುದೇ 'ಪ್ರತಿಬಿಂಬ ವಾದ'ದ ಆಂತರ್ಯವಾಗಿದೆ. ಈ ಪ್ರಮೇಯವನ್ನು ಕೆಳಗಿನ ಪ್ರಮಾಣ ವಾಕ್ಯಗಳಿಂದ ಅರಿಯಬಹುದಾಗಿದೆ -

**'ರೂಪಂ ರೂಪಂ ಪ್ರತಿರೂಪೋ ಬಭೂವ'** (ಕಠೋ. 5.9)

**'ಏಕ ಏವ ಹಿ ಭೂತಾತ್ಮಾ ಭೂತೇ ಭೂತೇ ವ್ಯವಸ್ಥಿತಃ ।**
**ಏಕಧಾ ಬಹುಧಾ ಚೈವ ದೃಶ್ಯತೇ ಜಲಚಂದ್ರವತ್ ॥** (ಬ್ರ.ಬಿಂ. 12)

ಚೈತನ್ಯವು ಅದ್ವಿತೀಯವಾಗಿದ್ದರೂ ನಾನಾ ವಸ್ತುಗಳಲ್ಲಿ ಬಹುರೂಪವಾಗಿ ಕಾಣುವುದು. ಭಿನ್ನ ಭಿನ್ನ ಕಾಣ್ಕೆಗೆ ಉಪಾಧಿಗಳ ವೈಚಿತ್ರ್ಯವೇ ಕಾರಣ. ಚಂದ್ರನು ಕನ್ನಡಿ-ನೀರು-ಮೊದಲಾದ ಉಪಾಧಿಗಳಲ್ಲಿ ಭಿನ್ನ ಭಿನ್ನನಾಗಿ ಕಾಣುವನು. ಆದರೆ ಈ ಎಲ್ಲ ಪ್ರತಿಬಿಂಬಗಳು ಅಂತಿಮವಾಗಿ ಅಸತ್ಯ. ಪ್ರಕೃತ ಬಿಂಬವಾದ ಚೈತನ್ಯವು ಸತ್ಯ. ಬ್ರಹ್ಮಾದಿ ದೇವತೆಗಳಲ್ಲಿ ಅದು ಅನುಸ್ಯೂತವಾಗಿದೆ. ವಾಸ್ತವಿಕವಾಗಿ ಅದು ಒಂದೇಯಾಗಿದ್ದರೂ ಅನೇಕವಾಗಿ ಕಾಣುವುದು. ಇಲ್ಲಿ ಬಹುತ್ವವು ಕಾಲ್ಪನಿಕವೆಂದೂ ಚೈತನ್ಯದ ಏಕತೆಯು ಸತ್ಯವೆಂದೂ ಸ್ಫುಟವಾಗಿ ತಿಳಿಯುವುದು.

ಹೀಗೆ ಜೀವೇಶ್ವರ ಸ್ವರೂಪವನ್ನು ವರ್ಣಿಸುವ ಎಲ್ಲ ಪ್ರಮಾಣ ವಚನಗಳು ಪರಚೇತನದ ಪಾರಮಾರ್ಥಿಕತೆಯನ್ನು ಜೀವನ ಕಾಲ್ಪನಿಕತೆಯನ್ನು ನಿರೂಪಿಸುತ್ತಿವೆ.

ಅದ್ವಿತೀಯವಾದ ಚೇತನಕ್ಕೆ ಅಜ್ಞಾನದ ಸಂಪರ್ಕವಾದ ಕಾರಣ ಸಂಸಾರ ಕಾಣುತ್ತಿದೆ. ಹಲವು ಜೀವರು ಪ್ರತಿಫಲನ ಮಾತ್ರ. ಯಾರೊಬ್ಬರ ಅವಿದ್ಯೆಯಿಂದ ಬಹುರೂಪಿಯಾದ ಸಂಸಾರ ಕಾಣುವುದೋ ಆ ಒಬ್ಬನ ಅವಿದ್ಯೆ ಕೊನೆಗೊಂಡರೆ, ಅವನ ಅಜ್ಞಾನ ಕಲ್ಪಿತವಾದ ಈ ವಿಶ್ವವು ಸಹಜವಾಗಿ ಕಾಣೆಯಾಗುವುದೆಂಬುದು **ಏಕಜೀವಾಜ್ಞಾನವಾದ** ಆಶಯ. ಇದು ಅದ್ವೈತದ ಪ್ರಧಾನ ಸಿದ್ಧಾಂತವೂ ಆಗಿದೆ. ಶಾಂಕರಭಾಷ್ಯದ ನುಡಿಗಳು ಈ ಬಗ್ಗೆ ಸ್ಫುಟವಾದ ಬೆಳಕು ಚೆಲ್ಲುತ್ತವೆ.

1. 'ಎಲ್ಲಿಯ ತನಕ ಬುದ್ಧಿಯೆಂಬ ಉಪಾಧಿಯ ಸಂಪರ್ಕ ಚೈತನ್ಯಕ್ಕಿರುವುದೋ ಅಲ್ಲಿಯ ತನಕ ಈ ಜೀವನಿರುವನು, ಸಂಸಾರವೂ ಅಪರಿಹಾರ್ಯ. ಬುದ್ಧಿಮೊದಲಾದ ವಸ್ತುಗಳ ಸಂಘಾತಕ್ಕಿಂತ ಜೀವನು ವಾಸ್ತವದಲ್ಲಿ ಇಲ್ಲ. ನಿತ್ಯಮುಕ್ತನೂ ಜ್ಞಾನರೂಪನೂ ಆದ ಪರಮಚೇತನಕ್ಕಿಂತ, ಎರಡನೆಯ ಚೇತನ ವಸ್ತುವು ವೇದಾಂತದಲ್ಲಿ ಕಾಣಸಿಗದು-

**'ಯಾವದೇವ ಚಾಯಂ ಬುದ್ಧ್ಯುಪಾಧಿಸಂಬಂಧಃ ತಾವಜ್ಜೀವಸ್ಯ ಜೀವತ್ವಂ ಸಂಸಾರಿತ್ವಂ ಚ । ಪರಮಾರ್ಥತಸ್ತು ನ ಜೀವೋ ನಾಮ ಬುದ್ಧ್ಯುಪಾಧಿಸಂಬಂಧಪರಿಕಲ್ಪಿತ ಸ್ವರೂಪವ್ಯತಿರೇಕೇಣಾಸ್ತಿ । ನ ಹಿ ನಿತ್ಯಮುಕ್ತ ಸ್ವರೂಪಾತ್ ಸರ್ವಜ್ಞಾದೀಶ್ವರಾದನ್ಯಶ್ಚೇತನೋ ಧಾತುರ್ದ್ವಿತೀಯಃ ವೇದಾಂತಾರ್ಥನಿರೂಪಣಾಯಾಮುಪಲಭ್ಯತೇ'** (ಸೂ. ಭಾ. 2-3-30)

2. ಜೀವ-ಪರಮಾತ್ಮರ ನಡುವಣ ಭೇದವು ಅವಿದ್ಯೆಯ ಕೊಡುಗೆಯಾದ ನಾಮ-ರೂಪ-ದೇಹಗಳ ಭಿನ್ನತೆಯ ಹಿನ್ನಲೆಯಲ್ಲಿ ಕಾಣುತ್ತದೆ. ವಾಸ್ತವದಲ್ಲಿ ಭೇದವಿಲ್ಲ. ಈ ಚಿಂತನೆಯು ಎಲ್ಲ ವೇದಾಂತಿಗಳಿಂದ ಅಂಗೀಕಾರಾರ್ಹವಾಗಿದೆ-

**'ವಿಜ್ಞಾನಾತ್ಮಪರಮಾತ್ಮನೋಃ ಅವಿದ್ಯಾಪ್ರತ್ಯುಪಸ್ಥಾಪಿತ ನಾಮರೂಪರಚಿತ ದೇಹಾದ್ಯುಪಾಧಿನಿಮಿತ್ತೋ ಭೇದಃ ನ ಪಾರಮಾರ್ಥಿಕಃ ಇತ್ಯೇಷೋಽರ್ಥಃ ಸರ್ವೈರ್ವೇದಾಂತವಾದಿಭಿರಭ್ಯುಪಗಂತವ್ಯಃ'** (ಸೂ. ಭಾ. 1-4-22)

3. ಜೀವನು ಪರಮಚೇತನನಿಗಿಂತ ಬೇರೆಯಲ್ಲ -

**'ನ ಚ ವಿಜ್ಞಾನಾತ್ಮಾ ಪರಮಾತ್ಮನೋ ವಸ್ತ್ವಂತರಮ್'**

4. ಯಾರಿಗೆ ಅದ್ವಿತೀಯಾತ್ಮತತ್ತ್ವದ ಅರಿವು ಜಾಗೃತವಿದೆ ಅವರಿಗೆ ಸಂಸಾರವಿಲ್ಲ. ಹಾಗಿದ್ದರೆ ಅಜ್ಞಾನ ಯಾರಿಗೆ? ಕೇಳಿದ ವ್ಯಕ್ತಿಗೆ. ಕೇಳುಗನೂ ಪರಮಾತ್ಮನಲ್ಲವೆ? ಶ್ರುತಿಯು ಬಣ್ಣಿಸಿದ ಈ ಎಚ್ಚರ ಯಾರಿಗಿದೆ, ಅವನಿಗೆ ಅಜ್ಞಾನವಿಲ್ಲ. ಬಂಧನವೂ ಇಲ್ಲ-

**'ಕಸ್ಯ ಪುನರಯಮಪ್ರಬೋಧ ಇತಿಚೇತ್ ಯಸ್ತ್ವಂ ಪೃಚ್ಛಸಿ ತಸ್ಯ ತ ಇತಿ ವದಾಮಃ । ನನ್ವಹಮೀಶ್ವರ ಏವೋಕ್ತಃ ಶ್ರುತ್ಯಾ, ಯದ್ಯೇವಂ ಪ್ರತಿಬುದ್ಧೋಽಸಿ ನಾಸ್ತಿ ಕಸ್ಯಚಿದಪ್ರಬೋಧಃ'** (ಬ್ರ. ಸೂ. ಭಾ., 4-1-3)

ಈ ಎಲ್ಲ ವಾಕ್ಯಗಳನ್ನು ಗಮನಿಸಿದಾಗ ಜೀವನು ಕಾಲ್ಪನಿಕ ಮತ್ತು ನಿರ್ಗುಣವಾದ ಚೈತನ್ಯವೇ ವೇದಾಂತ ಬಣ್ಣಿಸುವ ಪರಮಸತ್ಯವೆಂದು ಗೋಚರವಾಗುವುದು. ಇಂತಹ ಜೀವನ ಅಜ್ಞಾನ ನಿವೃತ್ತಿಗೆ ತನ್ನತನದ (ಬ್ರಹ್ಮಭಾವದ) ಅರಿವು ಆವಶ್ಯಕ. ಈ ಹಿನ್ನಲೆಯಲ್ಲಿ ಬ್ರಹ್ಮ ಸ್ವರೂಪದ ತಿಳಿವು ಸಂಪಾದಿಸಬೇಕಿದೆ. ಅದಕ್ಕಾಗಿ ಮುಂದಿನ ಅಧ್ಯಾಯ ಪ್ರವೃತ್ತವಾಗಿದೆ.

## V. ಪರಮಾತ್ಮ

ಬ್ರಹ್ಮ-ಪರಮಾತ್ಮ-ಪರಮಚೇತನ-ಸತ್ ಇತ್ಯಾದಿಶಬ್ದಗಳಿಂದ ಕರೆಸಿಕೊಳ್ಳಲ್ಪಡುವ ಪರತತ್ತ್ವವು ಅನಾದಿ-ಅನಂತ-ವಿಜ್ಞಾನಸ್ವರೂಪವಾಗಿದೆ. ಎಲ್ಲ ಉಪನಿಷತ್ತುಗಳು ಬ್ರಹ್ಮನ ಏಕತೆಯನ್ನು ಒಕ್ಕೊರಲಿನಿಂದ ಸಾರುತ್ತಿವೆ.-

**'ಸರ್ವಶಾಖೋಪನಿಷತ್ಸು ಚ ಬ್ರಹ್ಮೈಕತ್ವವಿಜ್ಞಾನಂ ನಿಶ್ಚಿತೋಽರ್ಥಃ'**
(ಬೃಹ. ಭಾ. I.4.10)

ಜೀವನೆಂದು ಕಾಣುವ ಈ ವಸ್ತು, ತಿಳಿದಿರಲಿ ತಿಳಿಯದಿರಲಿ. ಅವನು ಬ್ರಹ್ಮನೇ ಆಗಿರುವನು -

**'ಜಾನನ್ನಜಾನಂಶ್ಚ ಸರ್ವೋ ಜಂತುಃ ಸದ್‌ಬ್ರಹ್ಮೈವ'** (ಛಾಂ. ಭಾ. 8. 3. 3)

ಎಲ್ಲ ಉಪನಿಷತ್ತುಗಳ ಗುರಿ ಆತ್ಮನ ಏಕತ್ವಪ್ರತಿಪಾದನೆಯೇ ಆಗಿರುತ್ತದೆ-

**'ಇಷ್ಯತೇ ಚ ಸರ್ವೋಪನಿಷದಾಂ ಸರ್ವಾತ್ಮೈಕ್ಯಪ್ರತಿಪಾದಕತ್ವಮ್'**
(ಮಾಂಡೂಕ್ಯ. ಭಾ. 3.)

ಇಲ್ಲಿ ಒಂದು ಪ್ರಶ್ನೆ ಸಹಜ. ಅನೇಕ ವೇದಾಂತಿಗಳು ಜೀವ-ಬ್ರಹ್ಮರ ನಡುವೆ ಭೇದವನ್ನು ಒಪ್ಪಿದ್ದಾರೆ. ಹೀಗಿರುವಾಗ ಅದ್ವೈತವೇದಾಂತಿಗಳು, ಸಕಲ ವಾದಿಗಳಿಗೆ ಸಮ್ಮತವಾದ, ವೇದಗಳಲ್ಲಿ ಪ್ರತಿಪಾದಿತವಾದ ಜೀವೇಶಭೇದ ವನ್ನು ಅಲ್ಲಗಳೆಯುವುದು ಉಚಿತವೆ?

ಇದರ ಪರಿಹಾರ ಹೀಗಿದೆ-

ಅನೇಕ ವಾದಿಗಳು ಒಂದು ಸಂಗತಿಯನ್ನು ಅಂಗೀಕರಿಸಿರುವರೆಂಬ ಹಿನ್ನಲೆಯಲ್ಲಿ ಬಹುಮತದಿಂದ ಏನನ್ನೂ ನಿರ್ಧರಿಸಲಾಗದು. ವೇದವು ಅದ್ವೈತವನ್ನು ಪ್ರತಿಪಾದಿಸುತ್ತಿರುವ ಹಿನ್ನಲೆಯಲ್ಲಿ ಅದು ಅಂಗೀಕಾರಾರ್ಹ

ವಾಗಿದೆ. ವೇದಗಳಲ್ಲಿ ಜೀವ-ಬ್ರಹ್ಮರ ನಡುವೆ ಭೇದವನ್ನು ಬಣ್ಣಿಸುವ ಅನೇಕ ಶ್ರುತಿಗಳು ಇರುವುದು ಸಹಜ. ಆದರೆ ಶ್ರುತಿಗಳಿಗೆ ಭೇದವರ್ಣನೆ ಮಾಡುವ ಗುರಿ ಇಲ್ಲ.(ತಾತ್ಪರ್ಯವಿಲ್ಲ.) ಶ್ರುತಿಗಳು ಅವಿದ್ಯೆಗೆ ಆಸರೆಯಾದ ಜೀವ ಸಮುದಾಯದ ಚಿಂತನೆಯನ್ನು ಉಲ್ಲೇಖಿಸುತ್ತವೆ . ಅಂತಿಮವಾಗಿ ಭೇದವನ್ನು ನಿಷೇಧಿಸಿ ಅಭೇದವನ್ನು ಸಮರ್ಥಿಸುತ್ತವೆ . ಈ ಹಿನ್ನಲೆಯಲ್ಲಿ ಅದ್ವೈತವೇ ವೇದದ ತಿರುಳು-

**'ನ ಹಿ ಭೇದವಾಕ್ಯಾನಾಂ ಕದಾಚಿದಪಿ ಮುಖ್ಯಭೇದಾರ್ಥಕಮುಪ-ಪದ್ಯತೇ ಸ್ವಾಭಾವಿಕಾವಿದ್ಯಾವತ್ಪ್ರಾಣಿಭೇದದೃಷ್ಟ್ಯನುವಾದಿತ್ವಾತ್ ಆತ್ಮ-ಭೇದವಾಕ್ಯಾನಾಮ್'** (ಮಾಂ.ಅದ್ವೈತಪ್ರ.ಭಾ. 14)

ಶ್ರೀಶಂಕರಾಚಾರ್ಯರು ಈ ಸಂಗತಿಯನ್ನು ಸೂತ್ರಭಾಷ್ಯದಲ್ಲಿ ಮತ್ತಷ್ಟು ವಿವರಿಸಿದ್ದಾರೆ -

**'ಜೀವಸ್ಯ ತು ನ ಪರಸ್ಮಾದನ್ಯತ್ವಂ ಪ್ರತಿಪಿಪಾದಯಿಷ್ಯತಿ ।**
**ಕಿಂತು ಅನುವದತ್ಯೇವ ಅವಿದ್ಯಾಕಲ್ಪಿತಂ ಲೋಕಪ್ರಸಿದ್ಧಂ ಜೀವಭೇದಮ್'**
(ಸೂ. ಭಾ. 1- 3- 19)

**ಪರಮಚೇತನವು ನಿರ್ವಿಶೇಷ**

ಪರಬ್ರಹ್ಮನು ಪಾರಮಾರ್ಥಿಕ ಸತ್ಯ, ನಿರ್ಗುಣ-ನಿರಾಕಾರ-ವಿಜ್ಞಾನಾನಂದ ಸ್ವರೂಪ. ಇದು ವೇದೋಪನಿಷತ್ತುಗಳು ಅವನ ಸ್ವರೂಪವನ್ನು ಪರಿಚಯಿಸುವ ಕ್ರಮ. ಬ್ರಹ್ಮನು, ನಿರ್ಗುಣ-ನಿರಾಕಾರನೆಂಬ ವಾದವನ್ನು ಆಲಿಸಿದಾಗ ಅಚ್ಚರಿಯಾಗಬಹುದು. ಆದರೆ ಉಪನಿಷತ್ತುಗಳ ಬಣ್ಣನೆಯೇ ಹೀಗಿದೆ. ಅದನ್ನು ಅಲ್ಲಗಳೆಯುವುದು ಹೇಗೆ? ಜ್ಞೇಯವಾದ ಬ್ರಹ್ಮನನ್ನು ಉಪನಿಷತ್ತುಗಳು 'ನೇತಿ ನೇತಿ' (ಅವನಲ್ಲಿ ಯಾವಧರ್ಮಗಳಿಲ್ಲ) ನಮ್ಮ ಅನುಭವಗೋಚರವಾದ ಸ್ಥೂಲತೆ-ಸೂಕ್ಷ್ಮತೆ ಮೊದಲಾದ ಧರ್ಮಗಳು ಇಲ್ಲವೆಂದು 'ಅಸ್ಥೂಲಮನಣು' ಎಂಬುದಾಗಿ ಪ್ರತಿಪಾದಿಸುತ್ತಿವೆ. ಇವನಲ್ಲಿ ಈ ಗುಣಗಳಿವೆ ಎಂದು ಪರಿಚಯಿಸುವುದಿಲ್ಲ. ಬ್ರಹ್ಮನು ಶಬ್ದಗಳಿಗೆ ನಿಲುಕುವ ವಸ್ತುವಲ್ಲ. ಅನುಭೂತವಾದ, ವಿಕೃತವಾದ ಧರ್ಮಗಳಿಲ್ಲವೆಂಬುದೇ ಅವನ ನಿಜರೂಪ -

**'ಸರ್ವಾಸು ಹಿ ಉಪನಿಷತ್ಸು ಜ್ಞೇಯಂ ಬ್ರಹ್ಮ 'ನೇತಿ ನೇತಿ' 'ಅಸ್ಥೂಲ-**

**ಮನಣು' ಇತ್ಯಾದಿವಿಶೇಷ ಪ್ರತಿಷೇಧೇನೈವ ನಿರ್ದಿಶ್ಯತೇ । ನ ಇದಂ ತತ್ ಇತಿ। ವಾಚಃ ಅಗೋಚರತ್ವಾತ್ ।'** (ಗೀ. ಭಾ. 13-12)

2. **ಸರ್ವತ್ರ ಹಿ ಬ್ರಹ್ಮಸ್ವರೂಪಪ್ರತಿಪಾದನಪರೇಷು ವಾಕ್ಯೇಷು 'ಅಶಬ್ದ-ಮಸ್ಪರ್ಶಮರೂಪಮವ್ಯಯಮ್' ಇತ್ಯೇವಮಾದಿಷ್ವಪಾಸ್ತಸಮಸ್ತವಿಶೇಷ-ಮೇವ ಬ್ರಹ್ಮೋಪದಿಶ್ಯತೇ ।** (ಸೂ. ಭಾ. 3-2-11)

'ನೇತಿ ನೇತಿ' ಎಂಬುದಾಗಿ ಉಪನಿಷತ್ತುಗಳು ಬ್ರಹ್ಮತತ್ತ್ವವನ್ನು ಪರಿಚಯಿಸಿದಾಗ ನಮಗೊಂದು ಸಂಶಯ ಸಹಜ. ಯಾವ ಧರ್ಮಗಳಿಲ್ಲದ ಬ್ರಹ್ಮವು ಶೂನ್ಯವಾಗಲಾರದೆ? ಖಂಡಿತ ಹೀಗೆ ಭಾವಿಸಬಾರದು. ಬ್ರಹ್ಮವು 'ಸತ್ಯಸ್ಯ ಸತ್ಯಮ್' ಎಂಬುದಾಗಿ ಪಾರಮಾರ್ಥಸತ್ಯವೆಂದು ಕರೆಸಿಕೊಳ್ಳಲ್ಪಟ್ಟಿದೆ. ಪರಬ್ರಹ್ಮನಿಗಿಂತ ಬೇರಾವಸ್ತುವೂ ಇಲ್ಲವೆಂದು ನಿಷೇಧಿಸುವ ಶಾಸ್ತ್ರಗಳಿಗೆ ಸತ್ಯವಾದ ಅವಧಿ (ನಿಷೇಧಕ್ಕೆ ಆಶ್ರಯವಾದುದು) ಇರಲೇಬೇಕಲ್ಲವೆ? ಏನೂ ಇಲ್ಲವಾದರೆ, ಏನನ್ನು ಎಲ್ಲಿ ನಿಷೇಧಿಸಲು ಸಾಧ್ಯವಿದೆ? ಆದ್ದರಿಂದ ಬ್ರಹ್ಮವು ನಿಷೇಧಕ್ಕೆ ಆಸರೆಯಾಗಿ ಅಂತಿಮ ಸತ್ಯವಾಗಿ ಉಳಿಯುತ್ತದೆ. ಆದ್ದರಿಂದ ಶೂನ್ಯವಾದದಲ್ಲಿ ಪರ್ಯವಸಾನವಾಗದು-

**'ನೇತಿ ನೇತಿ' ಇತ್ಯಸ್ಯ ಕೋಽರ್ಥಃ ? ನ ಹಿ ಏತಸ್ಮಾತ್ ಬ್ರಹ್ಮಣೋ ವ್ಯತಿರಿಕ್ತಮಸ್ತಿ ಇತ್ಯತೋ ನೇತಿನೇತೀತ್ಯುಚ್ಯತೇ । ನ ಪುನಃ ಸ್ವಯಮೇವ ನಾಸ್ತೀತ್ಯರ್ಥಃ । ತಚ್ಚ ದರ್ಶಯತಿ ಅನ್ಯತ್ ಪರಮಪ್ರತಿಷಿದ್ಧಂ ಬ್ರಹ್ಮಾಸ್ತೀತಿ..... ತಚ್ಚ ಬ್ರಹ್ಮಾವಸಾನೇ ಪ್ರತಿಷೇಧೇ ಸಮಂಜಸಂ ಭವತಿ। ಅಭಾವಾವಸಾನೇ ತು ಪ್ರತಿಷೇಧೇ ಕಿಂ ಸತ್ಯಸ್ಯ ಸತ್ಯಮಿತ್ಯುಚ್ಯೇತ ? ತಸ್ಮಾತ್ ಬ್ರಹ್ಮಾವಸಾನೋಽಯಂ ಪ್ರತಿಷೇಧಃ ನ ಅಭಾವಾವಸಾನ ಇತ್ಯಧ್ಯವಸ್ಯಾಮಃ ।** (ಸೂ. ಭಾ. 3-2-22)

ಜೀವ - ಬ್ರಹ್ಮರ ಅಭೇದವನ್ನು ಸ್ಫುಟವಾಗಿ ಹೀಗೆ ವಿವರಿಸಬಹುದು-

'ಜೀವನು ಬ್ರಹ್ಮನಾಗಿರುವುದೇ ಅಂತಿಮಸತ್ಯ. ಉಪಾಧಿ ನಿಮಿತ್ತವಾಗಿ ಕಾಣುವ ಜೀವತ್ವವು ಸತ್ಯವಲ್ಲ. **'ತತ್ತ್ವಮಸಿ'** (ಛಾಂ. 6-8-7), **'ನಾನ್ಯದತೋಽಸ್ತಿ ದ್ರಷ್ಟೃ'** (ಬೃ 6-8-11) ಎಂಬ ಶ್ರುತಿಗಳು ಜೀವ ಬ್ರಹ್ಮಾಭೇದವನ್ನು ಸ್ಪಷ್ಟವಾಗಿ ಪ್ರತಿಪಾದಿಸುತ್ತವೆ. ಘಟಾಕಾಶವು ಹೇಗೆ ವ್ಯಾಪ್ತಾಕಾಶಕ್ಕಿಂತ ಭಿನ್ನವಲ್ಲವೋ, ಮರುಭೂಮಿಯಲ್ಲಿ ತೋರುವ ಮರೀಚಿಕೆಯು ಹೇಗೆ ಅಧಿಷ್ಠಾನಕ್ಕಿಂತ ಭಿನ್ನ ಸ್ವರೂಪವನ್ನು ಹೊಂದಿಲ್ಲವೋ

ಹಾಗೆಯೇ ಭೋಕ್ತೃ ಭೋಗ್ಯ ಪ್ರಪಂಚವು ಬ್ರಹ್ಮನಿಗಿಂತ ಬೇರೆಯಲ್ಲ. ಇದೆಲ್ಲ ಬ್ರಹ್ಮ ಸ್ವರೂಪವೆಂದರೆ, ಅವನಲ್ಲಿ ಆರೋಪಿತವೆಂದೇ ಅರ್ಥ-

**ಪಾರಮೇಶ್ವರಮೇವ ಹಿ ಶಾರೀರಸ್ಯ ಪಾರಮಾರ್ಥಿಕಂ ಸ್ವರೂಪಮ್ । ಉಪಾಧಿಕೃತಂ ತು ಶಾರೀರತ್ವಂ 'ತತ್ತ್ವಮಸಿ' (ಛಾ. 6. 8. 7) 'ನಾನ್ಯದತೋಽಸ್ತಿ ದ್ರಷ್ಟೃ (ಬೃ. 6. 8. 11) ಇತ್ಯಾದಿ ಶ್ರುತಿಭ್ಯಃ (ಸೂ. ಭಾ. 3-4-8) ।**

**ಯಥಾ ಘಟಕರಕಾದ್ಯಾಕಾಶಾನಾಂ ಮಹಾಕಾಶಾನನ್ಯತ್ವಂ ಯಥಾ ಚ ಮೃಗತೃಷ್ಣಿಕೋದಕಾದೀನಾಮೂಷರಾದಿಭ್ಯೋಽನನ್ಯತ್ವಮ್। ದೃಷ್ಟ ನಷ್ಟ ಸ್ವರೂಪತ್ವಾತ್ ಸ್ವರೂಪೇಣಾನುಪಾಖ್ಯತ್ವಾತ್। ಏವಮಸ್ಯ ಭೋಗ್ಯ-ಭೋಕ್ತ್ರಾದಿಪ್ರಪಂಚಜಾತಸ್ಯ ಬ್ರಹ್ಮವ್ಯತಿರೇಕೇಣಾಭಾವ ಇತಿ ದ್ರಷ್ಟವ್ಯಮ್।**
(ಸೂ. ಭಾ. 2. 1. 14)

ಇನ್ನೊಂದು ಶ್ರುತಿಯ ಆದೇಶ ಗಮನಾರ್ಹವಾಗಿದೆ- 'ಯಾರು ತನ್ನನ್ನು ಪರಮಾತ್ಮ ಸ್ವರೂಪವಲ್ಲವೆಂದು ತಿಳಿಯುವನೋ ಅವನು ಜ್ಞಾನಿಯಲ್ಲ; ಪಶುವೇ.' ಎಂಬುದಾಗಿ ಆತ್ಮೈಕ್ಯವನ್ನು ಬಲವಾಗಿ ನಿರೂಪಿಸಲಾಗಿದೆ-

**'ಅಥ ಯೋಽನ್ಯಾಂ ದೇವತಾಮುಪಾಸ್ತೇ ಅನ್ಯೋಽಸಾವನ್ಯೋಽಹಮಿತಿ ನ ಸ ವೇದ ಯಥಾಪಶುಃ । (ಬೃ. 1. 4. 10)**

**ಬ್ರಹ್ಮ ಅವಾಚ್ಯ ಹೇಗೆ ?**

ಬ್ರಹ್ಮನು ನಿರ್ಗುಣ ನಿರಾಕಾರ ಹಾಗೂ ಅವಾಚ್ಯವೆಂಬುವುದು ಹೇಗೆ ? 'ನೇತಿ ನೇತಿ' ಎಂಬುದಾಗಿ ನಿಷೇಧ ಮಾಡುವುದು, 'ಸತ್ಯಸ್ಯ ಸತ್ಯಮ್' ಎಂಬುದಾಗಿ ಸ್ವರೂಪವನ್ನು ಪರಿಚಯಿಸುವುದು ಹೇಗೆ ಸಂಗತ? ಇದಕ್ಕೆ ನಾವು ಪರಿಹಾರವನ್ನು ಹೀಗೆ ಕಾಣಬಹುದಾಗಿದೆ-

ಬ್ರಹ್ಮನಲ್ಲಿ ನಾಮವಾಗಲೀ- ಆಕಾರವಾಗಲೀ ಗುಣ-ಕರ್ಮ-ಜಾತಿ ಗಳಾಗಲೀ ಇರುವುದಿಲ್ಲ ಅದನ್ನು ಅವಲಂಬಿಸಿಕೊಂಡೇ ಶಬ್ದ ಪ್ರವೃತ್ತಿಯಲ್ಲವೆ? ಶಬ್ದವು ವಸ್ತುವಿನಲ್ಲಿರುವ ಗುಣ-ಜಾತಿ-ಕ್ರಿಯೆಗಳನ್ನು ಪರಿಚಯಿಸಲು ಪ್ರವೃತ್ತವಾಗುವುದಲ್ಲವೆ? 'ರಾಮನು ಸುಂದರ' 'ಕೃಷ್ಣನು ಗೊಲ್ಲ', 'ದೇವದತ್ತನು ಶಿಕ್ಷಕ' ಇತ್ಯಾದಿ. ಬ್ರಹ್ಮನು ನಿರ್ಗುಣನೆಂದು ಶ್ರುತಿಯು ಸಿದ್ಧಾಂತಮಾಡಿ ಅವನಲ್ಲಿ ಮತ್ತೆ ಧರ್ಮಗಳನ್ನು ಬಣ್ಣಿಸಿದರೆ

ವ್ಯಾಹತಭಾಷಿಯಾಗಲಾರದೆ? ಆದ್ದರಿಂದ ಬ್ರಹ್ಮನನ್ನು ಪರಿಚಯಿಸುವಾಗ 'ಇದಲ್ಲ' 'ಇದಲ್ಲ' ಎಂಬುದಾಗಿ ನಿಷೇಧಿಸಿ ಸ್ವರೂಪವನ್ನಷ್ಟೇ ಪರಿಚಯಿಸುತ್ತದೆ. ಶಬ್ದವು ಬ್ರಹ್ಮನಲ್ಲಿ ಗುಣಧರ್ಮಗಳನ್ನು ಬಣ್ಣಿಸದ ಕಾರಣ ಅವನು ಅವಾಚ್ಯನೂ ಅಹುದು. ಶಬ್ದವು, ನಿಷೇಧಮುಖದಿಂದ ಬ್ರಹ್ಮನ ನಿರ್ವಿಕಾರತೆ ಮತ್ತು ಶಬ್ದಾತೀತತೆಗಳನ್ನು ವರ್ಣಿಸಿದೆ. ಶಬ್ದಕ್ಕೆ ನಿಲುಕುವ ವಸ್ತು, ಮಿತವೂ ವಿಕಾರಿಯೂ ಆಗಿದೆ. ಬ್ರಹ್ಮನು ಶಬ್ದಾತೀತನೂ ನಿರ್ವಿಕಾರನೂ ಆದುದರಿಂದಲೇ ಅನಂತ(ಅಪರಿಚ್ಛಿನ್ನ) ಎನಿಸಿರುವನು.

1. ....**ಯದಾಪುನಃ ಸ್ವರೂಪಮೇವ ನಿರ್ದಿದಿಕ್ಷಿತಂ ಭವತಿ ನಿರಸ್ತ-ಸರ್ವೋಪಾಧಿವಿಶೇಷಂ ತದಾ ನ ಶಕ್ಯತೇ ಕೇನಚಿದಪಿ ಪ್ರಕಾರೇಣ ನಿರ್ದೇಷ್ಟುಮ್ । ತದಾ ಅಯಮೇವಾಭ್ಯುಪಾಯೋ ಯದುತ ಪ್ರಾಪ್ತ-ನಿರ್ದೇಶಪ್ರತಿಷೇಧದ್ವಾರೇಣ ನೇತಿ ನೇತಿ ನಿರ್ದೇಶಃ ।**

(ಬೃ.ಭಾ. 2.3.6)

2. **ಷಷ್ಠೀ ಗುಣಕ್ರಿಯಾಜಾತಿರೂಢಯಃ ಶಬ್ದಹೇತವಃ ।**
**ನಾತ್ಮನ್ಯನ್ಯತಮೋಽಮೀಷಾಂ ತೇನಾತ್ಮಾ ನಾಭಿಧೀಯತೇ ॥**

(ನೈ.ಸಿ. 3-103)

3. **ಬ್ರಹ್ಮಣ್ಯವಾಚ್ಯೇ ಯೋ ವಿದ್ವಾನ್ ವಾಚ್ಯತಾಮಧಿಗಚ್ಛತಿ ।**
**ಸ ನಿಸ್ತ್ರಪೋ ನಿಮಿತ್ತಾನಾಂ ವಿರಹ್ಯೈಃ ಪ್ರತಿಬೋಧ್ಯತಾಮ್ ॥**

(ಅ.ಸಿ. 2 ಪ)

ಶಬ್ದಗಳು ಬ್ರಹ್ಮನನ್ನು ಲಕ್ಷಣಾವೃತ್ತಿಯಿಂದ ಬೋಧಿಸುತ್ತವೆ. ಬ್ರಹ್ಮನು ಜ್ಞಾನವೆಂಬ ಗುಣರಹಿತನಾದ ಕಾರಣ 'ಜ್ಞಾನ' ಪದದಿಂದ ವಾಚ್ಯನಾಗಲಾರನು. ಜ್ಞಾನಪದವು ಪ್ರಸಿದ್ಧವಾದ ಬುದ್ಧಿಯನ್ನು ತಿಳಿಯಪಡಿಸಿ, ಅಲ್ಲಿಗೆ ಸೀಮಿತವಾಗದೇ ಲಕ್ಷಣಾವೃತ್ತಿಯಿಂದ ಬ್ರಹ್ಮನನ್ನು ಬೋಧಿಸುತ್ತದೆ. ಶಬ್ದಗಳಿಂದ ವಾಚ್ಯವಾಗಲು ಬೇಕಾದ ಧರ್ಮಗಳು ಬ್ರಹ್ಮನಲ್ಲಿಲ್ಲವೆಂದು ಈಗಾಗಲೇ ತಿಳಿದಿದ್ದೇವೆ. ಇದಲ್ಲದೇ **'ಸತ್ಯಂ ಜ್ಞಾನಂ'** ಇತ್ಯಾದಿ ಸಾಮಾನಾಧಿಕರಣ್ಯವಚನವು (ಸಮಾನವಿಭಕ್ತಿಕವಾದ ಎರಡು ಪದಗಳ ಬಳಕೆ) ಸ್ವರೂಪಮಾತ್ರ ಪರಿಚಾಯಕವಾಗಿದೆ-

**ತಸ್ಮಾದೇವ ಚ ನ ಜ್ಞಾನಶಬ್ದವಾಚ್ಯಮಪಿ ತದ್ ಬ್ರಹ್ಮ। ತಥಾಽಪಿ ತದಾಭಾಸ-**

**ವಾಚಕೇನ ಬುದ್ಧಿಧರ್ಮವಿಷಯೇಣ ಜ್ಞಾನ ಶಬ್ದೇನ ತಲ್ಲಕ್ಷ್ಯತೇ। ನ ತು ಉಚ್ಯತೇ। ಶಬ್ದಪ್ರವೃತ್ತಿಹೇತು ಜಾತ್ಯಾದಿಧರ್ಮರಹಿತತ್ವಾತ್ ಸತ್ಯಾನಂತಾದಿ-ಶಬ್ದಾಭ್ಯಾಂ ಸಾಮಾನಾಧಿಕರಣ್ಯಾತ್** (ತೈ.ಆ.ವ.1.)

ಇಂತಹ ಬ್ರಹ್ಮತತ್ತ್ವವು ಮಾಯೆಯ ಸಂಪರ್ಕದಿಂದ ವಿಶ್ವಕಾರಣವಾಗಿದೆ. ಸರ್ವಜ್ಞವೂ ಸರ್ವಶಕ್ತವೂ ಆಗಿದೆ. ಉಪಾಸನಾ ಸೌಕರ್ಯಕ್ಕಾಗಿ ವಿಶ್ವಕಾರಣವೂ ಸರ್ವಜ್ಞವೂ ಆದ ಬ್ರಹ್ಮನನ್ನು ವೇದಾಂತದಲ್ಲಿ ಹೇಳಲಾಗಿದೆ. ಇದನ್ನೇ 'ಸಗುಣ ಬ್ರಹ್ಮ' ಎನ್ನುವುದು. ಉಪಾಸನೆಯ ವಿಷಯವು ಸತ್ಯವೇ ಆಗಬೇಕಿಲ್ಲ. ಸರ್ವಗತನಾದ ಬ್ರಹ್ಮನನ್ನು ಶಾಲಗ್ರಾಮದಲ್ಲಿ ಆರಾಧಿಸಲು ಸ್ಮೃತಿಗ್ರಂಥಗಳು ಸೌಕರ್ಯಕಲ್ಪಿಸಿದಂತೆ, ಉಪಾಸನಾ ಸೌಕರ್ಯಕ್ಕಾಗಿ ಏಕಾಗ್ರತೆಗಾಗಿ ಸಗುಣಬ್ರಹ್ಮನ ನಿರೂಪಣೆ ವೇದಾಂತದಲ್ಲಿ ಮೂಡಿಬಂದಿದೆ-

1. **'ನಿರ್ಗುಣಮಪಿ ಸದ್‌ಬ್ರಹ್ಮ ನಾಮರೂಪಗತೈರ್ಗುಣೈಃ ಸಗುಣಮುಪಾ-ಸನಾರ್ಥಂ ತತ್ರ ತತ್ರ ಉಪದಿಶ್ಯತೇ ಇತ್ಯೇತದಪ್ಯುಕ್ತಮೇವ। ಸರ್ವಗತಸ್ಯಾಪಿ ಬ್ರಹ್ಮಣಃ ಉಪಲಬ್ಧ್ಯರ್ಥಂ ಸ್ಥಾನವಿಶೇಷೋ ನ ವಿರುಧ್ಯತೇ, ಶಾಲಗ್ರಾಮ ಇವ ವಿಷ್ಣೋಃ'** (ಸೂ.ಭಾ. 1.2. 14)
2. **ನಿರ್ವಿಶೇಷಂ ಪರಂ ಬ್ರಹ್ಮ ಸಾಕ್ಷಾತ್ಕರ್ತುಮನೀಶ್ವರಾಃ।**
   **ಯೇ ಮಂದಾಸ್ತೇಽನುಕಂಪ್ಯಂತೇ ಸವಿಶೇಷನಿರೂಪಣೈಃ॥**
   (ವೇ.ಕ. 1-1-20)

ಇದಿಷ್ಟು ಬ್ರಹ್ಮತತ್ತ್ವದ ಬಗ್ಗೆ ನಾವು ತಿಳಿಯಬೇಕಾದ ಸಂಕ್ಷಿಪ್ತ ಮಾಹಿತಿ.

## VI ಇತರ ಪ್ರಮೇಯಗಳು

### 1. ಆತ್ಮ-ಅಹಂಕಾರಗಳ ಅಂತರ

ಅದ್ವೈತವೇದಾಂತದಲ್ಲಿ 'ಅಹಂಕಾರ' ಸ್ವರೂಪವನ್ನು ಸರಿಯಾಗಿ ತಿಳಿಯಬೇಕು. ಸಿದ್ಧಾಂತ ಬಿಂದು-ವೇದಾಂತಪರಿಭಾಷಾ ಮೊದಲಾದ ಕೃತಿಗಳಲ್ಲಿ ಅವಿದ್ಯೆ-ಅಂತಃಕರಣ-ಮತ್ತು ಆತ್ಮನ ನಿಜರೂಪವನ್ನು ಹೃದಯಂಗಮವಾಗಿ ವಿವರಿಸಿದ್ದಾರೆ. ಇದನ್ನು ಹೀಗೆ ಸಂಕ್ಷಿಪ್ತವಾಗಿ ವಿವರಿಸಬಹುದಾಗಿದೆ-

'ಅಹಮ್' ಎಂಬ ಅರಿವಿಗೆ ವಿಷಯನಾದವನು ಆತ್ಮನಲ್ಲ. ಚಿತ್ ಮತ್ತು ಅಚಿತ್‌ಗಳ ಸಮಷ್ಟಿಯಾದ ಅಹಂಕಾರತತ್ತ್ವ. ಅಂದರೆ ಅಂತಃಕರಣ. ಅವಿದ್ಯೆಯ ಪರಿಣಾಮವೇ ಈ ಅಂತಃಕರಣ. ನಿದ್ರೆಯ ಸ್ಥಿತಿಯಲ್ಲಿ ಅವಿದ್ಯೆ ಅಂತಃಕರಣರೂಪದಿಂದ ವಿಕಾರಹೊಂದದೆಯೇ ಮೂಲರೂಪದಿಂದ ಅಸ್ತಿತ್ವ ಪಡೆದುಕೊಂಡಿದೆ-

**'ಸವಾಸನಾಂತಃ ಕರಣಸ್ಯ ಕಾರಣಾತ್ಮನಾಽವಸ್ಥಾನೇ ಸತಿ ವಿಶ್ರಾಮಸ್ಥಾನಂ ಸುಷುಪ್ತ್ಯವಸ್ಥಾ । ನ ಕಿಂಚಿದವೇದಿಷಮಿತಿ ಕಾರಣಮಾತ್ರೋಪಲಂಭಃ ಸುಷುಪ್ತಿಃ'** (ಸಿ.ಬಿ., ಪುಟ. 119)

ಆದ್ದರಿಂದಲೇ ಸುಷುಪ್ತಿ ಕಾಲದಲ್ಲಿ ಆತ್ಮನ (ಸಾಕ್ಷಿ) ಅನುಭವ ಮಾತ್ರವೇ ಇದೆ. ಅಂತಃಕರಣದ ವಿಕಾರವಾದ ಸುಖಾದಿಗಳ ಅನುಭವವಿಲ್ಲ. ಯಾವಾಗಲೂ ಅಹಂಕಾರವು ತನ್ನ ಪರಿಣಾಮವಾದ ಜ್ಞಾನ ಸುಖಗಳ ಜೊತೆಯಲ್ಲಿಯೇ ಅನುಭವ ಗೋಚರವಾಗುತ್ತದೆ. ಸುಷುಪ್ತಿ ಕಾಲದಲ್ಲಿ ಅಹಂಕಾರದ ಧರ್ಮಗಳಾದ ಜ್ಞಾನ-ಸುಖಗಳು ಇಲ್ಲದ ಕಾರಣ ಆಗ ಅಹಂಕಾರ ಸುಪ್ತವಾಗಿದೆ. (ತನ್ನ ಕಾರ್ಯಮಾಡುವುದಿಲ್ಲ) ಆತ್ಮನ ಜ್ಞಾನ ನಿದ್ರೆಯಲ್ಲಿ ಇದೆ. ಅಹಂಕಾರದ ಜ್ಞಾನ ಇಲ್ಲ. ಈ ಹಿನ್ನಲೆಯಲ್ಲಿ ಆತ್ಮ-ಅಹಂಕಾರಗಳು ಭಿನ್ನ ಭಿನ್ನ. 'ಸ್ವಮಪೀತೋ ಭವತಿ' ಎಂಬ ಶ್ರುತಿಯು ಸುಷುಪ್ತಿಯಲ್ಲಿ ಅಹಂಕಾರದ ವಿಲಯವನ್ನು ಪ್ರತಿಪಾದಿಸುತ್ತಿದೆ. ಇಲ್ಲವಾದರೆ ಎಚ್ಚರಕಾಲದಂತೆ 'ಅಹಂ'ಕಾರದ ಅನುಭವ ಬರಬೇಕಾದೀತು. ವಾಸ್ತವದಲ್ಲಿ ಈ ಶ್ರುತಿಯು ಗಾಢನಿದ್ರಾಕಾಲದಲ್ಲಿ ಜೀವನಿಗೆ ಬ್ರಹ್ಮನಲ್ಲಿ ಲಯವನ್ನು ಹೇಳುತ್ತಿದೆ.ಇಂತಹ ಲಯವು ಸ್ವರೂಪತಃ ಸಾಧ್ಯವಿಲ್ಲ. ಆದ್ದರಿಂದ ಉಪಾಧಿಯಾದ ಅಹಂಕಾರದ ವಿಲಯದಿಂದಲೇ ಲಯವನ್ನು ಪ್ರತಿಪಾದಿಸಬೇಕಿದೆ-

**'ಸ್ವಮಪೀತೋ ಭವತಿ' ಇತಿ ಸ್ವಾಪೇಽಹಂಕಾರಸ್ಯ ವಿಲಯಶ್ರವಣಾಚ್ಚ ತಸ್ಯಾನಾತ್ಮತ್ವಮ್। ಅಹಂಕಾರಸ್ಯ ಸುಷುಪ್ತಾವನಾಶೇ ಜಾಗ್ರತೀವಾಹ-ಮಿತ್ಯನುಭವಃ ಸ್ಯಾತ್।'** (ವೇ.ತ.ವಿ.ಪುಟ.210)

ಇಲ್ಲಿ ಒಂದು ಪ್ರಶ್ನೆ ಸಹಜ- 'ಅಹಮ್' ಪ್ರತ್ಯಯವು ಆತ್ಮವಿಷಯಕ ವಲ್ಲದೆಯೇ ಅಂತಃಕರಣವಿಷಯಕವಾದರೆ, ನಿದ್ರೆಯಿಂದ ಎದ್ದ ಮೇಲೆ

ಅಹಂಕಾರದ ಸ್ಮರಣೆ ಬರುವುದು ಹೇಗೆ ಸಾಧ್ಯ? ಸುಷುಪ್ತಿಯಲ್ಲಿ ಅಹಂಕಾರವು ಅವಿದ್ಯೆಯಲ್ಲಿ ಲಯಹೊಂದಿದೆ. 'ನಾನು ಇಷ್ಟು ಕಾಲದವರೆಗೆ ಸುಖವಾಗಿ ಮಲಗಿದ್ದೆ' (ಅಹಮೇತಾವಂತಂಕಾಲಂ ಸುಖಮಸ್ವಾಪ್ಸಮ್) ಎಂಬ ಅನುಭವ ಎಲ್ಲರಿಗಿದೆ. ಎದ್ದ ಮೇಲೆ ಅಹಂಕಾರದ ಸ್ಮರಣೆ ಹೇಗೆ ಸಾಧ್ಯ? ಇದಕ್ಕೆ ಪರಿಹಾರವನ್ನು ಹೀಗೆ ಕಾಣಬಹುದು- ಅವಿದ್ಯೆಯು ಪ್ರಲಯಕಾಲದಲ್ಲಿ ಮೂಲರೂಪದಿಂದ ಇರುತ್ತದೆ. ಆಗ ಅದರ ಪರಿಣಾಮರೂಪಪವೃತ್ತಿಯು ಇರುವುದಿಲ್ಲ. ಸುಷುಪ್ತಿಯ ನಂತರ. 'ಸುಖಮಹಮಸ್ವಾಪ್ಸಮ್' (ನಾನು ಸುಖವಾಗಿ ಮಲಗಿದ್ದೆ) ಎಂಬ ಅನುಸಂಧಾನವನ್ನು ಉಪಪಾದಿಸಲು ಸಾಕ್ಷ್ಯಾತ್ಕಾರವಾದ ಹಾಗೂ ಸುಖಾಕಾರವಾದ ಅವಿದ್ಯಾವೃತ್ತಿಯನ್ನು ಅಂಗೀಕರಿಸಬೇಕು. 'ನಾನು ಸುಖವಾಗಿ ಇಷ್ಟು ಕಾಲ ಮಲಗಿದ್ದೆ' ಎಂಬ ಸ್ಮೃತಿಯು ಸುಷುಪ್ತಿಕಾಲೀನ ಅನುಭವಜನ್ಯವಾಗಿದೆ. ಸುಷುಪ್ತಿಕಾಲೀನವಾದ ಅರಿವು ಮನೋವೃತ್ತಿ ರೂಪವಾಗಿರದೇ ಸಾಕ್ಷಿರೂಪವಾಗಿದೆ. ನಿದ್ರಾಕಾಲದಲ್ಲಿ ಅಹಂಕಾರತತ್ತ್ವವು ಇರುವುದಿಲ್ಲ. ಆದ್ದರಿಂದ ಅದರ ಧರ್ಮಗಳಾದ ಜ್ಞಾನ ಸುಖಗಳೂ ಅನುಭವಗೋಚರವಲ್ಲ. ಸುಷುಪ್ತಿಯಲ್ಲಿ ಕಾಣುವ ಸುಖವು ಕೇವಲ ದುಃಖಾಭಾವರೂಪವಾಗಿದೆ-

**'ನ ತತ್ ಸ್ವಾಪೇ ಸುಖಾನುಭವ ಸಂಸ್ಕಾರಜಂ ಸ್ಮರಣಮ್ । ಕಿಂ ತರ್ಹಿ ಸುಖಾವಮರ್ಶೋ ದುಃಖಾಭಾವನಿಮಿತ್ತಃ।** (ಪಂ.ಪಾ.ಪುಟ.96)

ಕನ್ನಡಿಯಲ್ಲಿ ಕೆಂಪುಬಣ್ಣದ ದಾಸವಾಳ ಹೂವಿನ ಸಂಪರ್ಕದಿಂದ ಕೆಂಬಣ್ಣ ತೋರುತ್ತದೆ. ಅಲ್ಲಿ ಮುಖ ನೋಡಿಕೊಂಡಾಗ, ಕನ್ನಡಿಯಲ್ಲಿ ಇಲ್ಲದ (ಆರೋಪಿತವಾದ -ಸಹಜವಲ್ಲದ) ಕೆಂಬಣ್ಣ ಮತ್ತು ಪ್ರತಿಬಿಂಬ ಎರಡೂ ಕಾಣುತ್ತವೆ ವಾಸ್ತವಿಕವಾಗಿ ಪ್ರತಿಬಿಂಬದಲ್ಲಿ ಕೆಂಬಣ್ಣವಿಲ್ಲದಿದ್ದರೂ, ಕೆಂಬಣ್ಣ ಮತ್ತು ಪ್ರತಿಬಿಂಬಗಳು ಕನ್ನಡಿಯನ್ನು ಆಶ್ರಯಿಸಿರುವುದರಿಂದ, ಕನ್ನಡಿ ನೋಡಿದಾಗ ಬಿಂಬವು (ಮುಖವು) ಕೆಂಪಾಗಿದೆ ಎಂಬ ಅರಿವು ಮೂಡುತ್ತದೆ. ಇದರಂತೆ ಸ್ಮರಣ ಮತ್ತು ಅಹಂಕಾರಗಳು ಸಾಕ್ಷಿಚೈತನ್ಯದಲ್ಲಿ ತೋರುತ್ತಿದ್ದು ಅಹಂಕಾರವು ಸ್ಮರಣಾಶ್ರಯವೆಂಬ ಪ್ರತೀತಿ ಉಂಟಾಗುತ್ತದೆ. ಸಾಕ್ಷಿಚೈತನ್ಯವು ಸುಖಾದಿಗಳನ್ನು ಅಹಂಕಾರಾಶ್ರಿತವೆಂದು ಸ್ಮರಿಸುತ್ತದೆ-

**ಅಹಂಕಾರಸ್ಯೋತ್ಥಾನಸಮಯೇ ಏವಾನುಭೂಯತೇ । ಸುಷುಪ್ತೌ**

ಲೀನತ್ವೇನ ತಸ್ಯಾನನುಭೂತತ್ವಾತ್ ಸ್ಮರಣಾನುಪಪತ್ತೇಃ । ಮುಖ-ಪ್ರತಿಬಿಂಬಾಶ್ರಯೇ ದರ್ಪಣೇ ಜಪಾಕುಸುಮಲೌಹಿತ್ಯಾಧ್ಯಾಸೇನ ರಕ್ತಂ ಮುಖಮಿತಿ ಪ್ರತೀತಿವದಹಂಕಾರಾಶ್ರಯತಯಾ ಸಾಕ್ಷಿಚೈತನ್ಯಸ್ಯ ಸ್ಮರಣಾಶ್ರಯತ್ವಾದಹಂ ಸುಖಮಸ್ವಾಪ್ಸಮಿತಿ ಸಾಮಾನಾಧಿಕರಣ್ಯಪ್ರತೀತಿಃ ।
*(ಸಿ. ಬಿ., ಪು. 123.)*

**ಪಂಚಪಾದಿಕೆಯಲ್ಲಿ ಅವಿದ್ಯೆ-ಅಹಂಕಾರಗಳ ವಿವೇಚನೆ**

ಅವಿದ್ಯೆ-ಅಹಂಕಾರ-ಜೀವ-ಬ್ರಹ್ಮಸ್ವರೂಪಗಳ ವಿವೇಚನೆ ಪಂಚಪಾದಿಕೆಯಲ್ಲಿ ಚೇತೋಹಾರಿಯಾಗಿ ಮೂಡಿಬಂದಿದೆ. ಅದನ್ನು ಸಂಕ್ಷಿಪ್ತವಾಗಿ ನೋಡೋಣ-

''ಶ್ರುತಿ-ಸ್ಮೃತಿಗಳಲ್ಲಿ ಅನಾದಿಯಾದ ಅವಿದ್ಯೆಯನ್ನು ಉಲ್ಲೇಖಿಸಲಾಗಿದೆ. ಇದರ ವಿಚಿತ್ರಶಕ್ತಿಗಳನ್ನು ಗಮನಿಸಿ ಇದಕ್ಕೆ ಹಲವು ನಾಮಕರಣ ಮಾಡಲಾಗಿದೆ. ಮಹಾಪ್ರಲಯದಲ್ಲೂ 'ನಾಮ', 'ರೂಪ'ಗಳ ಬೀಜರೂಪವಾಗಿ ಇರುವುದರಿಂದ ಇದನ್ನು 'ನಾಮರೂಪ' ಎಂದಿದ್ದಾರೆ. ಸಮಸ್ತ ವಿಶ್ವವನ್ನು ತನ್ನಲ್ಲಿ ಅಡಗಿಸಿಟ್ಟುಕೊಂಡು ಪ್ರಲಯಕಾಲದಲ್ಲಿರುವ ಹಿನ್ನಲೆಯಲ್ಲಿ 'ಅವ್ಯಾಕೃತ' ಎನ್ನಲಾಗಿದೆ. ವೇದಾಂತದಿಂದ ಜನಿಸುವ ವಿದ್ಯೆಯಿಂದ ನಿವೃತ್ತಿಹೊಂದುವ ಹಿನ್ನಲೆಯಲ್ಲಿ 'ಅವಿದ್ಯೆ' ಎನ್ನಲಾಗಿದೆ. ಅನುಪಪನ್ನವಾದ ಪ್ರಮೇಯವನ್ನು ತೋರಿಸುವ ಕಾರಣ 'ಮಾಯಾ' ಎಂದು ಕರೆಸಿಕೊಂಡಿದೆ. ಚಿತ್ರವಿಚಿತ್ರವಾದ ಈ ವಿಶ್ವರೂಪದಿಂದ ಪರಿಣಾಮಹೊಂದುವ ಶಕ್ತಿ ಇರುವುದರಿಂದ 'ಪ್ರಕೃತಿ'ಎನಿಸಿದೆ. ಪ್ರಲಯಕಾಲದಲ್ಲಿ ಚೈತನ್ಯಕ್ಕೆ ಬ್ರಹ್ಮತ್ವದ ಅನುಭೂತಿ ನೀಡದ ಹಿನ್ನಲೆಯಲ್ಲಿ (ಆಚ್ಛಾದಕವಾದುದರಿಂದ) 'ಅಗ್ರಹಣ' ಎನಿಸಿದೆ. ಪ್ರಮಾಣ-ಯುಕ್ತಿಗಳಿಂದ ಸತ್-ಅಸತ್ ಮೊದಲಾದ ಪ್ರಕಾರಗಳಿಗೆ ನಿಲುಕದ ಕಾರಣ ಅನಿರ್ವಾಚ್ಯವಾಗಿದ್ದು 'ಅವ್ಯಕ್ತ' ಎನಿಸಿದೆ. ಪ್ರಸಿದ್ಧವಾದ ಕತ್ತಲೆಯಂತೆ ಆಶ್ರಯ-ವಿಷಯಭೇದ ನಿರಪೇಕ್ಷವಾದುದರಿಂದ 'ತಮಸ್ಸು' ಎನಿಸಿದೆ. ತನಗಿಂತ ಬೇರೆ ಕಾರಣದ ಅಪೇಕ್ಷೆ ಇಲ್ಲದ ಹಿನ್ನೆಲೆಯಲ್ಲಿ 'ಕಾರಣ' ಎನಿಸಿದೆ. ಎಲ್ಲವೂ ಇದರಲ್ಲಿ ಲಯಹೊಂದುವ ಕಾರಣ 'ಲಯ' ಎನಿಸಿದೆ. ತಾನೇ ಎಲ್ಲ ಕಾರ್ಯನಿರ್ಮಹಿಸುವುದರಿಂದ 'ಶಕ್ತಿ' ಎನಿಸಿದೆ. ಬ್ರಹ್ಮಾದಿ ಜೀವರಿಗೆ, ಸ್ವರೂಪಜ್ಞಾನವಿಲ್ಲದ ಸುಷುಪ್ತಿಗೆ ಆಶ್ರಯವಾದುದರಿಂದ 'ಮಹಾಸುಪ್ತಿ' ಎನಿಸಿದೆ. ತಾನು ಒಂದೇಯಾಗಿರುವಾಗಲೂ ಬಹುಮುಖ

ವಾಗಿ ತೋರುವುದರಿಂದ 'ನಿದ್ರಾ' ಎನಿಸಿದೆ. ಜ್ಞಾನವನ್ನು ಹೊರತುಪಡಿಸಿ ಬೇರೊಂದು ಸಾಧನದಿಂದ ನಿವೃತ್ತಿಹೊಂದದ ಕಾರಣ, 'ಅಕ್ಷರ'ವೆನಿಸಿದೆ. ನಾನಾ ವಸ್ತುಗಳಂತೆ ತೋರುವುದರಿಂದ 'ಆಕಾಶ'ವೆನಿಸಿದೆ. ಹೀಗೆ ಅವಿದ್ಯೆ ಹಲವು ನಾಮಗಳನ್ನು ಹೊಂದಿದೆ.

ಇದು ಚೈತನ್ಯದ ಜ್ಞಾನಾನಂದಾದಿರೂಪತ್ವವನ್ನು ಪ್ರತಿಬಂಧಿಸಿ (ತಡೆಯೊಡ್ಡಿ) ಜೀವನಾಗಿ ಕಾಣಲು ಕಾರಣವಾಗಿದೆ. ಇದು ಭ್ರಮೆ-ಪುಣ್ಯಪಾಪರೂಪಕರ್ಮ-ಸ್ಮರಣೆ-ಸಂಸ್ಕಾರ ಎಂಬ ಚಿತ್ರಗಳಿಗೆ ಆಸರೆ ಯಾದ ಗೋಡೆಯಂತಿದೆ. ಈ ಅವಿದ್ಯೆಯು ಅನಾದಿಯೂ ಅನಿರ್ವಾಚ್ಯವೂ ಆಗಿದೆ. ಸುಷುಪ್ತಿಕಾಲದಲ್ಲಿ ಸಂಸ್ಕಾರರೂಪವಾಗಿದೆ. ಉಪಾದಾನಕಾರಣವಾದ ಈ ಅವಿದ್ಯೆಯಲ್ಲಿ ಪರಮಾತ್ಮನ ಅಧಿಷ್ಠಾನದಿಂದ ವಿಕಾರವಾಗಿ ಅಹಂಕಾರತತ್ತ್ವವು ಜನಿಸುವುದು. ಇದರಲ್ಲಿ 'ಕ್ರಿಯಾಶಕ್ತಿ' 'ವಿಜ್ಞಾನಶಕ್ತಿ' ಎಂಬ ಎರಡು ಶಕ್ತಿಗಳಿವೆ. ಕ್ರಿಯಾಶಕ್ತಿಯಿಂದ ಕರ್ತೃತ್ವವೂ ವಿಜ್ಞಾನ ಶಕ್ತಿಯಿಂದ ಭೋಕ್ತೃತ್ವವೂ ಕಾಣಿಸಿಕೊಳ್ಳುವುದು. ಅಹಂಕಾರದಲ್ಲಿರುವ ವಿಜ್ಞಾನಶಕ್ತಿಯನ್ನು ಅಂತಃಕರಣ-ಮನಸ್ಸು ಬುದ್ಧಿ ಎಂದು ವ್ಯವಹರಿಸಲಾಗುವುದು. 'ಅಹಂ' ಪದವಾಚ್ಯವಾದುದು ಕರ್ತೃತ್ವ-ಭೋಕ್ತೃತ್ವಗಳಿಗೆ ಆಶ್ರಯವಾದ ಅಹಂಕಾರತತ್ತ್ವವೇ ಆಗಿರುತ್ತದೆ. ಅಹಂಕಾರವು ಸ್ವಯಂ ಅಪರೋಕ್ಷ ವಲ್ಲದಿದ್ದರೂ ಪ್ರತ್ಯಕ್ಷನಾದ ಚೇತನನ ಸಂಬಂಧದಿಂದ ಪ್ರತ್ಯಕ್ಷವೆನಿಸಿದೆ. ಅಹಂಕಾರದ ಸಂಬಂಧದಿಂದ ಅಲ್ಲಿರುವ ಕರ್ತೃತ್ವ ಭೋಕ್ತೃತ್ವಾದಿ ಧರ್ಮಗಳು ಆತ್ಮನಲ್ಲಿ ಕಾಣಬರುತ್ತವೆ. ವಾಸ್ತವದಲ್ಲಿ ಆತ್ಮನು ಕರ್ತೃವೂ ಭೋಕ್ತೃವೂ ಆಗಿರುವುದಿಲ್ಲ. ದಾಸವಾಳ ಹೂವಿನ ಸಂಬಂಧ ಹೊಂದಿದ ಸ್ಫಟಿಕಮಣಿಯಲ್ಲಿ ಉಪಾಧಿನಿಮಿತ್ತದಿಂದ ಕೆಂಬಣ್ಣ ಕಾಣುವಂತೆ ಆತ್ಮನಲ್ಲೂ ಕರ್ತೃತ್ವಾದಿ ಧರ್ಮಗಳು ಕಾಣಿಸಿಕೊಳ್ಳುತ್ತವೆ. ವಿವೇಕಿಗಳು ಈ ಅಹಂಕಾರವನ್ನು ಚೈತನ್ಯದಿಂದ ಬೇರ್ಪಡಿಸಿ ತನ್ನಲ್ಲಿರುವ ವಿಜ್ಞಾನ ಶಕ್ತಿಯಿಂದ ಅಂತಃಕರಣ-ಮನಸ್ಸು-ಬುದ್ಧಿ ಎಂದೂ 'ಅಹಮ್' ಎಂಬ ಜ್ಞಾನಕ್ಕೆ ಆಶ್ರಯವೆಂದೂ ವ್ಯವಹರಿಸುತ್ತಾರೆ. ಅಹಂಕಾರತತ್ತ್ವದಲ್ಲಿರುವ ಕ್ರಿಯಾಶಕ್ತಿಯಿಂದ ಇದನ್ನು 'ಪ್ರಾಣ'ವೆನ್ನುತ್ತಾರೆ.

ಈ ಹಿನ್ನಲೆಯಲ್ಲಿ ಆತ್ಮನಲ್ಲಿ ಕಾಣುವ ಕರ್ತೃತ್ವಾದಿ ಧರ್ಮಗಳು ವಾಸ್ತವವಲ್ಲ-

'ಯೇಽಯಂ ಶ್ರುತಿಸ್ಮೃತೀತಿಹಾಸಪುರಾಣೇಷು ನಾಮರೂಪಂ ಅವ್ಯಾಕೃತಂ ಅವಿದ್ಯಾ ಮಾಯಾ ಪ್ರಕೃತಿಃ ಅಗ್ರಹಣಂ ಅವ್ಯಕ್ತಂ ತಮಃ ಕಾರಣಂ ಲಯಃ ಶಕ್ತಿಃ ಮಹಾಸುಪ್ತಿಃ ನಿದ್ರಾ ಅಕ್ಷರಂ ಆಕಾಶಮ್ ಇತಿ ಚ ತತ್ರ ತತ್ರ ಬಹುಧಾ ಗೀಯತೇ ಚೈತನ್ಯಸ್ಯ ಸ್ವತ ಏವಾವಸ್ಥಿತಲಕ್ಷಣಬ್ರಹ್ಮಸ್ವರೂಪತಾವಭಾಸಂ ಪ್ರತಿಬಧ್ಯ ಜೀವತ್ವಾಪಾದಿಕಾ ಅವಿದ್ಯಾಕರ್ಮಪೂರ್ವಪ್ರಜ್ಞಾಸಂಸ್ಕಾರಚಿತ್ರಭಿತ್ತಿಃ ಸುಷುಪ್ತೇ ಪ್ರಕಾಶಾಚ್ಛಾದನವಿಕ್ಷೇಪಸಂಸ್ಕಾರಮಾತ್ರರೂಪಸ್ಥಿತಿರನಾದಿರವಿದ್ಯಾ, ತಸ್ಯಾಃ ಪರಮೇಶ್ವರಾಧಿಷ್ಠಿತತ್ವಲಬ್ಧಪರಿಣಾಮವಿಶೇಷೋ ವಿಜ್ಞಾನಕ್ರಿಯಾಶಕ್ತಿ-ದ್ವಯಾಶ್ರಯಃ ಕರ್ತೃತ್ವಭೋಕ್ತೃತ್ವೈಕಾಧಾರಃ ಕೂಟಸ್ಥಚೈತನ್ಯಸಂವಲನ-ಸಂಜಾತಜ್ಯೋತಿಃ ಸ್ವಯಂಪ್ರಕಾಶಮಾನೋಽಪರೋಕ್ಷೋಽಹಂಕಾರಃ, ಯತ್ಸಂಭೇದಾತ್ ಕೂಟಸ್ಥಚೈತನ್ಯೋಽನಿದಮಂಶ ಆತ್ಮಧಾತುರಪಿ ಮಿಥ್ಯೈವ ಭೋಕ್ತೇತಿ ಪ್ರಸಿದ್ಧಿಮುಪಗತಃ । ಸ ಚ ಸುಷುಪ್ತೇ ಸಮುತ್ಖಾತನಿಖಿಲ-ಪರಿಣಾಮಾಯಾಮವಿದ್ಯಾಯಾಂ ಕುತಸ್ತ್ಯಃ । ನ ಚೈವಂ ಮಂತವ್ಯಮ್ ಆಶ್ರಿತಪರಿಣತಿ ಭೇದತಯೈವಾಹಂಕಾರನಿರ್ಭಾಸೇಽನಂತರ್ಭೂತ್ತೈವ ತನ್ನಿಮಿತ್ತಮಿತಿ । ತಥಾ ಸತಿ ಅಪಾಕೃತಾಹಂಕೃತಿಸಂಸರ್ಗೋ ಭೋಕ್ತೃತ್ವಾದಿ-ಸ್ತದ್ವಿಶೇಷಃ ಕೇವಲಮಿದಂತಯೈವಾವಭಾಸೇತ, ನ ಚ ತಥಾ ಸಮಸ್ತಿ ।

ಸ ಚ ಪರಿಣಾಮವಿಶೇಷಃ ಅನಿದಂಚಿದಾತ್ಮನೋ ಬುದ್ಧ್ಯಾ ನಿಷ್ಕೃಷ್ಯ ವೇದಾಂತವಾದಿಭಿಃ ಅಂತಃಕರಣಂ ಮನೋ ಬುದ್ಧಿರಹಂಪ್ರತ್ಯಯೀ ಇತಿ ಚ ವಿಜ್ಞಾನಶಕ್ತಿವಿಶೇಷಮಾಶ್ರಿತ್ಯ ವ್ಯಪದಿಶ್ಯತೇ, ಪರಿಸ್ಪಂದಶಕ್ತ್ಯಾ ಚ ಪ್ರಾಣ ಇತಿ । ತೇನ ಅಂತಃಕರಣೋಪರಾಗನಿಮಿತ್ತಂ ಮಿಥ್ಯೈವಾಹಂಕರ್ತೃತ್ವಮಾತ್ಮನಃ, ಸ್ಫಟಿಕಮಣೇರಿವೋಪಧಾನನಿಮಿತ್ತೋ ಲೋಹಿತಿಮಾ ।

(ಪಂ.ಪಾ., ಪುಟ 98- 100)

## 2. ಸಾಕ್ಷೀ

ವಸ್ತುವಿನ ಭಾವ-ಅಭಾವಗಳನ್ನು ವಸ್ತುವಿಗಿಂತ ಭಿನ್ನನಾದವನು ಗ್ರಹಿಸುವಂತೆ ಪ್ರಮಾತೃವಿನ ಭಾವ-ಅಭಾವಗಳನ್ನು ಗ್ರಹಿಸಲು ಸಾಕ್ಷಿಯ ಆವಶ್ಯಕತೆ ಇದೆ. ವೈಶೇಷಿಕಾದಿ ಸಿದ್ಧಾಂತಗಳಂತೆ ಅದ್ವೈತವಾದವು ಜ್ಞಾನಾಶ್ರಯನಾದ ಪ್ರಮಾತೃವನ್ನು ಒಪ್ಪುವುದಿಲ್ಲ. ಅದ್ವೈತದರ್ಶನದಲ್ಲಿ, ಮನಸ್ಸು ವಿಷಯಾಕಾರವಾಗಿ ಪರಿಣಾಮಗೊಳ್ಳುವುದನ್ನೆ 'ಜ್ಞಾನ'ವೆಂದು ಅಂಗೀಕರಿಸಲಾಗಿದೆ. ಆತ್ಮನು ಪ್ರಮಾತೃವಾದರೆ, ಅವನಿಗೆ ವಿಷಯಾಕಾರ

ಪರಿಣಾಮವನ್ನು ಒಪ್ಪಬೇಕಾಗುವುದು. ಯಾವುದು ಪರಿಣಾಮವುಳ್ಳದ್ದೋ ಅದು ದೃಶ್ಯವಾಗುತ್ತದೆ, ದೃಷ್ಟೃವಾಗಲಾರದು. ಆದ್ದರಿಂದ ಆತ್ಮನು ಸಾಕ್ಷಿಯಾಗಲಾರನು. ಜ್ಞಾನವು ವಿಷಯ ಇಂದ್ರಿಯಗಳ ಸಂಬಂಧದಿಂದ ಆತ್ಮನಲ್ಲಿ ಜನಿಸುವ ಗುಣವೆಂಬ ಪರಿಕಲ್ಪನೆ ಅದ್ವೈತ ವಾದದಲ್ಲಿ ಇಲ್ಲ. ಒಂದು ಪಕ್ಷ ಆತ್ಮನಲ್ಲಿ ಪರಿಣಾಮದ ಮೂಲಕ ಜ್ಞಾನವನ್ನು ಒಪ್ಪಿದರೆ ಅವನು ವಿಕಾರಿಯಾಗುವುನು, ಕೂಟಸ್ಥನಾಗಲಾರನು, ಯಾವುದು ಕೂಟಸ್ಥವೋ ಅದೇ ಸಾಕ್ಷಿ ಎನಿಸಿದೆ. ದೃಶ್ಯವಾದುದಲ್ಲ. ಸುಖ-ದುಃಖಾದಿಧರ್ಮಗಳು ಅಹಂಕಾರದಲ್ಲಿದ್ದು, ಅಹಂಕಾರವು ಸಾಕ್ಷಿ ಗ್ರಾಹ್ಯವಾಗಿದೆ. ಸಾಕ್ಷಿಯು ಚಿತ್ ಅಚಿತ್ ಸಂವಲನಾತ್ಮಕವಾದ ಅಹಮರ್ಥಕ್ಕಿಂತ ಭಿನ್ನವಾಗಿದೆ.

**ಸಾಕ್ಷಿಯ ಲಕ್ಷಣ**

ಉದಾಸೀನವಾಗಿರುವುದು ಮತ್ತು ಬೋದ್ಧೃವಾಗಿರುವುದು ಸಾಕ್ಷಿಯ ಸ್ವರೂಪವಾಗಿದೆ. ಆ. 'ಸ್ಥೂಲ-ಸೂಕ್ಷ್ಮ ಶರೀರಗಳಲ್ಲಿದ್ದು ಅವುಗಳ ಅವಭಾಸಕ್ಕೆ ಕಾರಣವಾದ ನಿರ್ವಿಕಾರವಾದ ಚೈತನ್ಯವನ್ನು ಸಾಕ್ಷಿ ಎಂದು ಕೂಟಸ್ಥ ದೀಪದಲ್ಲಿ ಹೇಳಲಾಗಿದೆ-

1. **'ಕೂಟಸ್ಥದೀಪೇ ದೇಹದ್ವಯಾಧಿಷ್ಠಾನಭೂತಂ ಕೂಟಸ್ಥಂ ಚೈತನ್ಯಂ ಸ್ವಾವಚ್ಛೇದಕಸ್ಯ ದೇಹದ್ವಯಸ್ಯ ಸಾಕ್ಷಾದೀಕ್ಷಣಾತ್ ನಿರ್ವಿಕಾರತ್ವಾಚ್ಚ ಸಾಕ್ಷೀತ್ಯುಚ್ಯತೇ'** (ಸಿ.ಲೇ.ಸಂ.ಪುಟ. 180)

2. **'ಕಃ ಸಾಕ್ಷೀ'? ತತ್ರ ಕೂಟಸ್ಥದೀಪೇ ಕೂಟಸ್ಥಚಿತ್‌ಸ್ವಯಮ್। ಸ್ವಾಧ್ಯಸ್ತ ದೇಹಯುಗ್ಮಾದೇಃ ಸಾಕ್ಷೀತಿ ಪ್ರತಿಪಾದಿತಃ ॥** (ವೇ.ಸಿ.ಸೂ.ಮಂ. 1.92)
(ಗಂಗಾಧರಸರಸ್ವತೀವಿರಚಿತ ವೇದಾಂತಸಿದ್ಧಾಂತ ಸೂಕ್ತಿ ಮಂಜರಿ)

ಅಂತಃಕರಣ ವೃತ್ತಿಗಳು ದೀಪದಂತೆ ಪ್ರಕಾಶಕವಾಗಬಹುದಾದರೂ ಅವುಗಳು ಜಡಗಳಾದ ಕಾರಣ ದೇಹದ್ವಯಾಭಾಸಕಗಳಾಗುವುದು ಅಸಾಧ್ಯ. ಆದ್ದರಿಂದ ಅವುಗಳ ಅವಭಾಸಕವಾದ ಸ್ವಪ್ರಕಾಶ ನಿತ್ಯಚೈತನ್ಯವನ್ನು ಒಪ್ಪಬೇಕು. ಒಟ್ಟಾರೆ ಅಂತಃಕರಣ ಪ್ರತಿಬಿಂಬನು ಜೀವನೆಂದೂ ಬಿಂಬಚೈತನ್ಯರೂಪವಾದ ಕೂಟಸ್ಥನು ಸಾಕ್ಷಿಯೆಂದೂ ತಿಳಿಯಬಹುದಾಗಿದೆ.

ತತ್ತ್ವಪ್ರದೀಪಿಕೆಯಲ್ಲಿ, ಮಾಯಾಗುಣವಿಶಿಷ್ಟವಾದ ಸಗುಣಬ್ರಹ್ಮನು, **'ಸಾಕ್ಷೀ ಚೇತಾಕೇವಲೋ ನಿರ್ಗುಣಶ್ಚ'** ಎಂಬ ಶ್ರುತಿ ವಿಷಯನಾಗದ ಕಾರಣ,

ಜೀವತ್ವ-ಈಶ್ವರತ್ವಾದಿಧರ್ಮರಹಿತವಾದ ಶುದ್ಧಚೈತನ್ಯವೇ 'ಸಾಕ್ಷಿ' ಎನಿಸುವುದು ಎಂದು ವಿವರಿಸಲಾಗಿದೆ-

**'ತತ್ತ್ವಪ್ರದೀಪಿಕಾಯಾಮಪಿ ಮಾಯಾಶಬಲಿತೇ ಸಗುಣೇ ಪರಮೇಶ್ವರೇ 'ಕೇವಲೋ ನಿರ್ಗುಣಃ' ಇತಿ ವಿಶೇಷಣಾನುಪಪತ್ತೇಃ ಸರ್ವಪ್ರತ್ಯಗ್‌ಭೂತಂ ವಿಶುದ್ಧಂ ಬ್ರಹ್ಮ ಜೀವಾಭೇದೇನ ಸಾಕ್ಷೀತಿ ಪ್ರತಿಪಾದ್ಯತೇ ಇತ್ಯುದಿತಮ್ ।**

(ಸಿ.ಲೇ.ಸಂ., ಪುಟ. 187)

ಸಾಕ್ಷಿಚೈತನ್ಯವು, ಅಜ್ಞಾನ ಸ್ಫೋರಕವಾಗಿ 'ಅಹಮಜ್ಞಃ' ಇತ್ಯಾದಿವ್ಯವಹಾರ ನಿರ್ವಾಹಕವಾಗಿದೆ. ಜೀವನಿಗೆ ಅಂತರಂಗ (ಆಪ್ತ) ನೆನಿಸಿದೆ. ಸುಷುಪ್ತಿಕಾಲದಲ್ಲಿ ಅಂತಃಕರಣವೃತ್ತಿಗಳು ಉಪರತವಾದರೂ ಜೀವನಲ್ಲಿರುವ ಅಜ್ಞಾನಕ್ಕೆ ವ್ಯಂಜಕವಾದ ಈ ಸಾಕ್ಷಿಯು 'ಪ್ರಾಜ್ಞ' ಎನಿಸಿದೆ-

**'ಸ ಚ ಕಾರಣತ್ವಾದಿಧರ್ಮಾನಾಸ್ಪದತ್ವಾತ್ ಅಪರೋಕ್ಷೋ ಜೀವಗತಮಜ್ಞಾನಾದ್ಯವಭಾಸಯಂಶ್ಚ ಜೀವಸ್ಯಾಂತರಂಗಃ । ಸುಷುಪ್ತ್ಯಾದೌ ಚ ಕಾರ್ಯ ಕಾರಣೋಪರಮೇ ಜೀವಗತಾಜ್ಞಾನಮಾತ್ರಸ್ಯ ವ್ಯಂಜಕಃ ಪ್ರಾಜ್ಞಶಬ್ದಿತಃ ।'** (ಸಿ.ಲೇ.ಸಂ.ಪುಟ 189)

## 3. ಅಧ್ಯಾಸ

ಯಾವ ವಸ್ತು ಹೇಗಿಲ್ಲವೋ ಅದನ್ನು ಹಾಗೆ ತಿಳಿಯುವುದು ಅಧ್ಯಾಸವೆನಿಸಿದೆ-

**'ಆಹ- ಕೋಽಯಮಧ್ಯಾಸೋ ನಾಮ? ಅತಸ್ಮಿನ್ ತದ್ಬುದ್ಧಿಃ'**

(ಬ್ರ.ಸೂ.ಭಾ.ಉಪೋ)

ನಮ್ಮ ಜಾಗತಿಕ ಬದುಕಿನ ಬಹುತೇಕ ವ್ಯವಹಾರಗಳ ಮೂಲ ಈ ಅಧ್ಯಾಸವಾಗಿದೆ. ನಮ್ಮ ಎಲ್ಲ ವ್ಯವಹಾರಗಳಲ್ಲೂ ಈ ಅಧ್ಯಾಸದ ಪಾತ್ರ ಗಮನಾರ್ಹವಾಗಿದೆ. ಇದರ ಅರಿವಿಲ್ಲದೆಯೇ ನಮ್ಮ ವ್ಯವಹಾರಪ್ರಪಂಚ ಸಾಗಿದೆ. ಯಾರಾದರೂ ನಮಗೆ ಕೋಲಿನಿಂದ ಹೊಡೆಯಬಂದರೆ ನಾವು ಓಡಿ ಹೋಗುತ್ತೇವೆ. ಇಲ್ಲಿ ನಾವು, ಶರೀರವನ್ನೇ ನಾವೆಂದು ತಿಳಿದಿರುವುದು ಸ್ಪಷ್ಟ. ಇದನ್ನು 'ದೇಹಾತ್ಮೈಕ್ಯ ಅಧ್ಯಾಸ' ಎನ್ನಬಹುದು. ಹೊಡೆತವನ್ನು ತಿನ್ನುವುದು ಅನಿವಾರ್ಯವೇ ಆದಾಗ ತಲೆ, ಕಣ್ಣು, ಕಿವಿ, ಮೂಗು ಮೊದಲಾದ ಜ್ಞಾನೇಂದ್ರಿಯಗಳಿಗೆ ಪೆಟ್ಟಾಗದಂತೆ ಕೈಯನ್ನು ಅಡ್ಡ ತರುತ್ತೇವೆ. ಇದು

ಇಂದ್ರಿಯಗಳೇ ಆತ್ಮನೆಂಬ ಭಾವನೆ ತಳೆದ ಬಗ್ಗೆ ಪುರಾವೆಯಾಗಿದೆ. ಇದಕ್ಕಿಂತ ತೀವ್ರವಾದುದು, 'ನಾನು ಕರ್ತಾ, ಭೋಕ್ತಾ' ಇತ್ಯಾದಿಯಾಗಿ ಭಾವಿಸುವುದು. ಇಲ್ಲಿ ಅಹಂಕಾರದ ಧರ್ಮವನ್ನೇ ಆತ್ಮಧರ್ಮವೆಂದು ಭಾವಿಸಿ ನಾವು ದುಃಖ ಪಡುತ್ತೇವೆ. ಈ ಅಧ್ಯಾಸದ ನಾನಾಮುಖಗಳನ್ನು ದೈನಂದಿನ ಅನುಭವಿಸುತ್ತಿದ್ದು ಇದರ ಸುಂದರ ಪರಿಚಯವನ್ನು ಶಂಕರಾಚಾರ್ಯರು ಮಾಡಿಕೊಟ್ಟಿದ್ದಾರೆ.

''ನಾವಿಂದು ಎರಡು ವಸ್ತುಗಳನ್ನು ಅನುಭವದಿಂದ ಕಾಣುತ್ತಿದ್ದೇವೆ. ಒಂದು ಚೇತನ ಮತ್ತೊಂದು ಅಚೇತನ. ಚೇತನ ಮತ್ತು ಅಚೇತನಗಳು ಬೆಳಕು ಕತ್ತಲೆಯಂತೆ ವಿರುದ್ಧ ಸ್ವಭಾವವುಳ್ಳವುಗಳು. ಇವೆರಡೂ ಎಂದೂ ಒಂದಾಗಲಾರವು. ಇವುಗಳ ಧರ್ಮಗಳ ಕಲಬೆರಕೆಯೂ ಪರಸ್ಪರ ಸಾಧ್ಯ ವಾಗಲಾರದು. ಇದು ವಾಸ್ತವವಾದರೂ ನಮ್ಮ ವ್ಯವಹಾರವನ್ನು ಗಮನಿಸಿ- 'ನಾನು ಕಪ್ಪು', 'ನನ್ನ ಮನೆ' ಇತ್ಯಾದಿ. 'ನಾನು ಕಪ್ಪು' ಎಂಬಲ್ಲಿ ದೇಹದ ಧರ್ಮ ವಾದ ಕಪ್ಪು ಬಣ್ಣವನ್ನು ಆತ್ಮನಲ್ಲಿ ಆರೋಪಿಸಿದ್ದೇವೆ. 'ನನ್ನ ಮನೆ' ಎಂಬಲ್ಲಿ ಸ್ವೀಯತ್ವ (ಆತ್ಮಧರ್ಮ)ವನ್ನು ಜಡವಾದ ಮನೆಯಲ್ಲಿ ಆರೋಪಿಸಿದ್ದೇವೆ. ಹೀಗೆ ಆತ್ಮಧರ್ಮವನ್ನು ಅನಾತ್ಮನಲ್ಲಿ ಮತ್ತು ಅನಾತ್ಮ ಧರ್ಮವನ್ನು ಆತ್ಮನಲ್ಲಿ ಅಧ್ಯಾಸಮಾಡುತ್ತ ಸತ್ಯ-ಸುಳ್ಳುಗಳನ್ನು ಕಲಬೆರಕೆಮಾಡಿ ನಮ್ಮ ವ್ಯವಹಾರ ಪ್ರಪಂಚ ಸಾಗಿದೆ. ಇವುಗಳ ನಿಜರೂಪ ನಮಗೆ ಮರೆತುಹೋಗಿದೆ. ಜಡವನ್ನು ಚೇತನದಲ್ಲಿ ಆರೋಪಿಸಿದಾಗ, ಜಡವು ಸ್ವರೂಪತಃ ಮತ್ತು ಆರೋಪಿತ ರೂಪದಿಂದಲೂ ಮಿಥ್ಯೆಯಾಗಿದೆ. ಆದರೆ ಆತ್ಮನನ್ನು ಜಡದಲ್ಲಿ ಆರೋಪಿಸಿ ದಾಗ ಆತ್ಮನು ಸತ್ಯನಾದುದರಿಂದ ಅವನ ತಾದಾತ್ಮ್ಯ ಮಾತ್ರವೇ ಅಸತ್ಯ ವೆನಿಸುವುದು. ಅಂತೂ ಪರಸ್ಪರ ಧರ್ಮಗಳ ಅಧ್ಯಾಸವೇ ನಮ್ಮ ವ್ಯವಹಾರದ ಮೂಲವಾಗಿದೆ. ಇದನ್ನು ವಿದ್ಯಾವಂತರು 'ಅವಿದ್ಯೆ' ಎನ್ನುವರು. ಇದನ್ನು ಗುರುತಿಸಿ ನಿಜವಾದ ಆತ್ಮಸ್ವರೂಪವನ್ನು ಅರಿತಾಗ (ವಿದ್ಯೆಯನ್ನೂ ಸಂಪಾದಿಸಿ ದಾಗ) ಅವಿದ್ಯೆಯ ಕಾರ್ಯ್ಯವಾದ ಈ ಬಂಧನವು ನಿವೃತ್ತವಾಗುವುದು.''-

**ಯುಷ್ಮದಸ್ಮತ್ಪ್ರತ್ಯಯಗೋಚರಯೋಃ ವಿಷಯವಿಷಯಿಣೋಃ ತಮಃ ಪ್ರಕಾಶವದ್ ವಿರುದ್ಧ ಸ್ವಭಾವಯೋಃ ಇತರೇತರಭಾವಾನುಪಪತ್ತೌ ಸಿದ್ಧಾಯಾಂ ಸುತರಾಂ ತದ್ಧರ್ಮಾಣಾಮಪಿ ಇತರೇತರಭಾವಾನುಪಪತ್ತಿ- ರಿತ್ಯತೋ ಅಸ್ಮತ್ಪ್ರತ್ಯಯಗೋಚರೇ ವಿಷಯಿಣಿ ಚಿದಾತ್ಮಕೇ ಯುಷ್ಮತ್-**

ಪ್ರತ್ಯಯಗೋಚರಸ್ಯ ವಿಷಯಸ್ಯ ತದ್ಧರ್ಮಾಣಾಂ ಚ ಅಧ್ಯಾಸಃ, ತದ್ವಿಪರ್ಯಯೇಣ ವಿಷಯಿಣಸ್ತದ್ಧರ್ಮಾಣಾಂ ಚ ವಿಷಯೇಽಧ್ಯಾಸಃ ಮಿಥ್ಯೇತಿ ಭವಿತುಂ ಯುಕ್ತಮ್ ।

...... ಸತ್ಯಾನೃತೇ ಮಿಥುನೀಕೃತ್ಯ ಅಹಮಿದಂ ಮಮೇದಮಿತಿ ನೈಸರ್ಗಿಕೋಽಯಂ ಲೋಕವ್ಯವಹಾರಃ । ...... ತಮೇತಮೇವಂ ಲಕ್ಷಣಮಧ್ಯಾಸಂ ಪಂಡಿತಾ ಅವಿದ್ಯೇತಿ ಮನ್ಯಂತೇ । ತದ್ವಿವೇಕೇನ ಚ ವಸ್ತು ಸ್ವರೂಪಾವಧಾರಣಂ ವಿದ್ಯಾಮಾಹುಃ । (ಬ್ರ.ಸೂ.ಭಾ. 1. 1. 1)

ಈ ಅವಿದ್ಯೆ ಆತ್ಮನ ಧರ್ಮವಲ್ಲ. ಅವನಲ್ಲಿ ಕಾಣುತ್ತಿದೆ. ಇದು ಸ್ವಾಭಾವಿಕವಾದರೆ, ಅಗ್ನಿಯ ಸ್ವಾಭಾವಿಕಧರ್ಮವಾದ ಉಷ್ಣತೆ ಹಾಗೂ ಪ್ರಕಾಶಗಳಂತೆ ಇದು ಎಂದೂ ನಿವೃತ್ತವಾಗಲಾರದು.

ತಸ್ಮಾನ್ನಾತ್ಮಧರ್ಮೋಽವಿದ್ಯಾ । ನ ಹಿ ಸ್ವಾಭಾವಿಕಸ್ಯೋಚ್ಛಿತ್ತಿಃ ಕದಾಚಿದಪ್ಯುಪಪದ್ಯತೇ । ಸವಿತುರಿವೌಷ್ಣ್ಯಪ್ರಕಾಶಯೋಃ । (ಬೃ.ಭಾ. 4. 3. 20)

ಈ ಅವಿದ್ಯೆಯ ಕಾರ್ಯ(ವಿಕಾರ) ಇಂದು ಎಲ್ಲೆಡೆ ಕಾಣುತ್ತಿದೆ. ಆದರೆ ಅವಿದ್ಯೆ ಕಾಣುವುದಿಲ್ಲ. ಎಲ್ಲ ವಸ್ತುಗಳನ್ನು ದೀಪದಿಂದ ನೋಡಬಹುದು. ಆದರೆ ಕತ್ತಲೆಯನ್ನು ನೋಡಲು ಸಾಧ್ಯವೆ? ಹಾಗೆಯೇ ಪ್ರಮಾಣಗಳ ಮೂಲಕ ಅವಿದ್ಯೆಯ ಸ್ವರೂಪವನ್ನು ಅರಿಯುವ ಯತ್ನವು ವಿಫಲವೇ ಸರಿ. ಅನಾತ್ಮ(ಜಡ) ವಸ್ತು ಯಾವುದೆಲ್ಲ ಕಾಣುತ್ತಿದೆಯೋ ಅದೆಲ್ಲ ಅವಿದ್ಯೆಯ ಕೊಡುಗೆಯೇ ಆಗಿದೆ. ಇದನ್ನು ಪ್ರತ್ಯೇಕಿಸಿ ಸರಿಯಾಗಿ ಅರಿಯುವುದೇ ವಿದ್ಯೆ-

ಪ್ರಮಾಣೋತ್ಪನ್ನಯಾ ದೃಷ್ಟ್ಯಾ ಯೋಽವಿದ್ಯಾಂ ದ್ರಷ್ಟುಮಿಚ್ಛತಿ ।
ದೀಪೇನಾಸೌ ಧ್ರುವಂ ಪಶ್ಯೇತ್ ಗುಹಾಕುಕ್ಷಿಗತಂ ತಮಃ ।
ಅನಾತ್ಮೇತೀಹ ಯದ್‌ಭಾತಿ ತದವಿದ್ಯಾವಿಜೃಂಭಿತಮ್ ।
ತಸ್ಮಾದವಿದ್ಯಾ ಸಾಪ್ಯುಕ್ತಾ ವಿದ್ಯಾ ತ್ವಾತ್ಮೈಕರೂಪಿಣೀ ॥

(ತೈ.ಭಾ.ವಾ. 2. 177, 178)

## 4. ವಿಶ್ವಮಿಥ್ಯಾತ್ವ

ಕಾಣುವ ಈ ವಿಶ್ವವು ಪರಮಸತ್ಯವಲ್ಲ (ಅಂತಿಮಸತ್ಯವಲ್ಲ). ಎಂಬುದು ಅದ್ವೈತದ ನಿಲುವು. ಇದನ್ನು ಅರ್ಥೈಸಿಕೊಳ್ಳಲಾಗದ ಹಲವು ಚಿಂತಕರು

ಗುರು-ಶಿಷ್ಯ-ಗ್ರಂಥ ಎಲ್ಲವೂ ಮಿಥ್ಯೆಯಲ್ಲವೆ? ಹಾಗಿದ್ದರೆ ಈ ಬೋಧನೆ ಯಾರಿಗೆ ಎಂಬುದಾಗಿ ಪ್ರಶ್ನಿಸುವರು. ಈ ಬಗ್ಗೆ ನಾವು ಶ್ರುತಿಯ ಸಂದೇಶವನ್ನು ಗಮನಿಸಬೇಕು-

1. **ಮಾಯಾಮಾತ್ರಮಿದಂ ದ್ವೈತಮದ್ವೈತಂ ಪರಮಾರ್ಥತಃ ।**
(ಮಾಂ. ಉ. 17)

2. **'ಇದಂ ಪ್ರಪಂಚಾಖ್ಯಂ ಮಾಯಾಮಾತ್ರಂ ದ್ವೈತಂ, ರಜ್ಜುವನ್ಮಾಯಾ-ವಿವಚ್ಚಾದ್ವೈತಂ ಪರಮಾರ್ಥತಃ ।'** (ಮಾಂ. ಶಾಂ. ಭಾ. 17)

ಇದೆಲ್ಲ ವಿಶ್ವವು ಅವಾಸ್ತವ. ಚೇತನವೊಂದೇ ಪರಮಸತ್ಯ. ಹಗ್ಗದಲ್ಲಿ ಕಂಡ ಹಾವಿನಂತೆ, ಮಾಯಾವಿಯು(ಇಂದ್ರಜಾಲಿಕನು) ತೋರಿಸಿದ ವಸ್ತುಗಳಂತೆ ಈ ವಿಶ್ವವು ಮಿಥ್ಯೆಯಾಗಿದೆ.

ವಿಶ್ವಮಿಥ್ಯಾತ್ವವನ್ನು ಮೂರು ನೆಲೆಯಲ್ಲಿ ಸಮರ್ಥಿಸಬಹುದಾಗಿದೆ-

**1.** ಸೂತ್ರಕಾರರಾದ ಭಗವಾನ್ ಬಾದರಾಯಣರು ಬ್ರಹ್ಮಜ್ಞಾನವನ್ನು ಅನರ್ಥ ನಿವೃತ್ತಿಸಾಧನವೆಂದು ಉಪವರ್ಣಿಸುವ ಮೂಲಕ ಜ್ಞಾನದಿಂದ ನಿವರ್ತ್ಯವಾದ ವಿಶ್ವವು ಮಿಥ್ಯೆಯೆಂದು ಸೂಚಿಸಿದ್ದಾರೆ. ಅವರ ಆಶಯವನ್ನು ಹೀಗೆ ವಿವರಿಸಬಹುದು-

'ಅಥ'- ನಿತ್ಯಾನಿತ್ಯವಸ್ತುವಿವೇಕ-ವಿಷಯವೈರಾಗ್ಯ- ಶಮದಮಾದಿಸಂಪತ್ತಿ ಮುಮುಕ್ಷಾರೂಪವಾದ ಸಾಧನಚತುಷ್ಟಯ ಸಂಪನ್ನನಾದ ಅಧಿಕಾರಿಯು 'ಅತಃ'- ಮುಕ್ತಿಸಾಧನವಾದ ಬ್ರಹ್ಮಜ್ಞಾನಕ್ಕೋಸ್ಕರ 'ಬ್ರಹ್ಮಜಿಜ್ಞಾಸಾ'- ವೇದಾಂತವಾಕ್ಯವಿಮರ್ಶೆಯನ್ನು (ಕರ್ತವ್ಯಾ)ಮಾಡಬೇಕು. ಇದಿಷ್ಟು ಶಾರೀರಕ ಮೊದಲಸೂತ್ರದ (ಅಥಾತೋ ಬ್ರಹ್ಮಜಿಜ್ಞಾಸಾ)ಅರ್ಥವಾಗಿದೆ.

ವಿಚಾರದಿಂದ ಜನಿಸುವ ಬ್ರಹ್ಮಜ್ಞಾನವು ಸಂಸಾರ ಮತ್ತು ಅವಿದ್ಯೆಯನ್ನು ನಿವೃತ್ತಿಗೊಳಿಸುವುದು. ಜ್ಞಾನದಿಂದ ನೇರವಾಗಿ ಅಜ್ಞಾನವು ನಿವೃತ್ತವಾಗುವುದು. ಅಜ್ಞಾನವು ನಿವೃತ್ತವಾದಾಗ ಅಜ್ಞಾನದ ಕಾರ್ಯವಾದ ಈ ಜೀವ-ಜಡಾತ್ಮಕ ವಿಶ್ವವು ತಾನೇ ನಿವೃತ್ತವಾಗುವುದು. ಇಂದು ಜೀವನಲ್ಲಿ ಕಾಣುವ ಕರ್ತೃತ್ವಭೋಕ್ತೃತ್ವಾದಿ ಧರ್ಮಗಳು ಸತ್ಯವೇ ಆಗಿರುವಲ್ಲಿ ಜ್ಞಾನದಿಂದ ನಿವೃತ್ತವಾಗಲಾರವು. ಏಕೆಂದರೆ ಜ್ಞಾನವು ಅಜ್ಞಾನ ಮತ್ತು ಅಜ್ಞಾನ ಕಾರ್ಯ

ವಾದುದನ್ನು ಮಾತ್ರವೇ ನಿವೃತ್ತಿಗೊಳಿಸುವುದು. ಬಂಧವು (ಜೀವ-ಜಡಾತ್ಮಕವಿಶ್ವವು) ಜ್ಞಾನದಿಂದ ನಿವೃತ್ತವಾಗುವುದೆಂದು ಸಾರುವ ಮೂಲಕ ಸೂತ್ರಕಾರರು ಈ ವಿಶ್ವಕ್ಕೆ ಮಿಥ್ಯಾತ್ವವನ್ನು ಸ್ಫುಟವಾಗಿ ಸಾರಿದ್ದಾರೆ-

**ಬ್ರಹ್ಮಜ್ಞಾನಂ ಹಿ ಸೂತ್ರಿತಂ ಅನರ್ಥಹೇತುನಿಬರ್ಹಣಮ್ । ಅನರ್ಥಶ್ಚ ಪ್ರಮಾತೃತಾಪ್ರಮುಖಂ ಕರ್ತೃತ್ವಭೋಕ್ತೃತ್ವಂ । ತದ್ಯದಿ ವಸ್ತುಕೃತಂ ಸ್ಯಾತ್, ನ ಜ್ಞಾನೇನ ನಿಬರ್ಹಣೀಯಮ್ । ಯತೋ ಜ್ಞಾನಮಜ್ಞಾನಸ್ಯೈವ ನಿವರ್ತಕಮ್ । ತದ್ಯದಿ ಕರ್ತೃತ್ವಭೋಕ್ತೃತ್ವಂ ಅಜ್ಞಾನಹೇತುಕಂ ಸ್ಯಾತ್ ತತೋ ಬ್ರಹ್ಮಜ್ಞಾನಂ ಅನರ್ಥಹೇತುನಿಬರ್ಹಣಂ ಉಚ್ಯಮಾನಮುಪಪದ್ಯೇತ । ತೇನ ಸೂತ್ರಕಾರೇಣೈವ ಬ್ರಹ್ಮಜ್ಞಾನಂ ಅನರ್ಥಹೇತುನಿಬರ್ಹಣಂ ಸೂಚಯತಾ ಅವಿದ್ಯಾಹೇತುಕಂ ಕರ್ತೃತ್ವಭೋಕ್ತೃತ್ವಂ ಪ್ರದರ್ಶಿತಂ ಭವತಿ ।**

(ಪಂ.ಪಾ., ಪುಟ. 10-11)

**2.** ವಿಷಯವನ್ನು ಸೂಚಿಸುವಾಗಲೂ ವಿಶ್ವಮಿಥ್ಯಾತ್ವವು ಸೂತ್ರಕಾರರಿಂದ ಸೂಚಿಸಲ್ಪಟ್ಟಿದೆ-

ವೇದಾಂತ ವಿಚಾರಕ್ಕೆ ವಿಷಯನಾದವನು ಬ್ರಹ್ಮ. 'ಅಯಮಾತ್ಮಾ ಬ್ರಹ್ಮ' ಎಂಬುದಾಗಿ ಶ್ರುತಿಯು ಜೀವನನ್ನೇ ಬ್ರಹ್ಮನೆಂದು ಸಾರುತ್ತಿದೆ. ಇಂದು ಜೀವನಲ್ಲಿ ಅನುಭವಗೋಚರವಾದ ಕರ್ತೃತ್ವ - ಭೋಕ್ತೃತ್ವಾದಿಧರ್ಮಗಳು ಪಾರಮಾರ್ಥಿಕಸತ್ಯವಾದರೆ, ಇವುಗಳ ಬಗ್ಗೆ ಸಂದೇಹ ಇಲ್ಲದಕಾರಣ, ಇಂತಹ ಆತ್ಮಸ್ವರೂಪವು ನಿಶ್ಚಿತವಾದುದರಿಂದ ಜಿಜ್ಞಾಸೆ ಉಚಿತವಾಗದು. ಇಂದು ಜೀವದಲ್ಲಿ ತೋರುತ್ತಿರುವ ಕರ್ತೃತ್ವಾದಿ ಧರ್ಮಗಳು ಅವಿದ್ಯೆಯ ಕೊಡುಗೆ, ವಾಸ್ತವವಲ್ಲ; ಆತ್ಮ(ಜೀವ) ಸ್ವರೂಪವು ನಿರ್ಗುಣ-ನಿರಾಕಾರವಾಗಿದೆ, ಎಂದು ಒಪ್ಪಿದಲ್ಲಿ ಮಾತ್ರವೇ ಇಂತಹ ಆತ್ಮಸ್ವರೂಪವು ಅನುಭವಗೋಚರವಲ್ಲದ ಕಾರಣ ವೇದಾಂತದಿಂದ ಜಿಜ್ಞಾಸ್ಯವಾಗಬಹುದು. ಹೀಗೆ ಸೂತ್ರಕಾರರು ನಿರ್ಗುಣನಾದ ಆತ್ಮನು ವಿಚಾರ ವಿಷಯನೆಂದು ಸಮರ್ಥಿಸುವ ಮೂಲಕ, ಜೀವನಲ್ಲಿ ಇಂದು ಕಾಣುವ ಧರ್ಮಗಳನ್ನು ಅವಾಸ್ತವವೆಂದು ಸಾರಿದ್ದಾರೆ. ಈ ಹಿನ್ನೆಲೆಯಲ್ಲಿ ಜೀವ ಮತ್ತು ಅವನಲ್ಲಿ ಕಾಣುವ ಧರ್ಮಗಳು ಅಸತ್ಯವೆಂದು ಸಮರ್ಥಿಸುವುದು ಸೂತ್ರಕಾರರಿಗೆ ಸಮ್ಮತವಾಗಿದೆ-

**ವಿಚಾರವಿಷಯತಯಾ ಚ ಬ್ರಹ್ಮ ಸೂತ್ರಿತಮ್ । ಆತ್ಮಾ ಚ ಬ್ರಹ್ಮ । ತಸ್ಯ ಚ (ಆತ್ಮನಃ) ಅಹಂ ಕರ್ತಾ ಭೋಕ್ತೇತಿ ಪ್ರತೀಯಮಾನಂ ರೂಪಂ ಯದಿ**

ಪಾರಮಾರ್ಥಿಕಂ ಸ್ಯಾತ್, ತದಾ ಅಸಂದಿಗ್ಧತಯಾ ವಿಚಾರವಿಷಯತಾ ನ ಸ್ಯಾತ್। ತದ್ಯದಿ ಕರ್ತೃತ್ವಾದಿರೂಪಂ ಅವಿದ್ಯಾರೋಪಿತಂ, ಪಾರಮಾರ್ಥಿಕಂ ತು ನಿಷ್ಕ್ರಿಯಂ ನಿಷ್ಕಲಂ ಬ್ರಹ್ಮರೂಪಂ ಸ್ಯಾತ್, ತತಃ ಅಸ್ಯ ಸಂದಿಗ್ಧತಯಾ ವಿಷಯತಾ ಉಚ್ಯಮಾನಾ ಉಪಪದ್ಯತೇ । ತೇನ (ಕರ್ತೃತ್ವಾದೇಃ ಅವಿದ್ಯಾರೋಪಿತತ್ವೇ ಏವ ಆತ್ಮನಃ ಸಂದಿಗ್ಧತಯಾ ವಿಷಯತಾಯಾಃ ಉಪ-ಪದ್ಯಮಾನತ್ವೇನ) ಆತ್ಮಸ್ವರೂಪಂ ವಿಚಾರವಿಷಯಂ ಸೂತ್ರಯತಾ ಸೂತ್ರ-ಕೃತೈವ ಕರ್ತೃತ್ವಾದ್ಯತದಾಕಾರಸ್ಯ ಮಿಥ್ಯಾತ್ವಂ ಸೂತ್ರಿತಂ ಭವತಿ । ಕರ್ತೃತ್ವಾದೇಃ ಬಂಧಸ್ಯ ಮಿಥ್ಯಾತ್ವಂ ಚ ಯಾವತಾ ವಿನಾ ನೋಪಪದ್ಯತೇ, ತದಪಿ ಸೂತ್ರಿತ-ಮೇವ । (ನ್ಯಾ.ಸು. ಉ.)

3. ಬಂಧಮಿಥ್ಯಾತ್ವವು ಸಕಲಶಾಸ್ತ್ರಗಳ ಸಾರವಾಗಿದೆ ಎಂಬುದನ್ನು ನಾವು ಮರೆಯಬಾರದು.

ಇಂದು ಜೀವನಾಗಿ ತೋರುವವನ ನಿಜರೂಪ ಆನಂದಮಯವೂ ನಿರ್ವಿಕಾರವೂ ಆಗಿದೆ. ಅದರೆ ಪ್ರತ್ಯಕ್ಷವು, ಆತ್ಮನಲ್ಲಿ ಕರ್ತೃತ್ವಭೋಕ್ತೃತ್ವಾದಿ ಧರ್ಮಗಳನ್ನು ದಾಖಲಿಸುತ್ತಿದೆ. ವೇದಾಂತವು ವರ್ಣಿಸುವ ನಿರ್ವಿಕಾರವಾದ ಆತ್ಮಸ್ವರೂಪವನ್ನು ಪ್ರತಿಪಾದಿಸುತ್ತಿದೆ. ಕರ್ತೃತ್ವಾದಿಧರ್ಮಗಳನ್ನು ದಾಖಲಿಸುವ ಪ್ರತ್ಯಕ್ಷವು ವೇದಾಂತವಿರೋಧಿಯಾದ ಅಂಶವನ್ನು ತಿಳಿಸುತ್ತಿದೆ. ಈ ಎರಡು ಪ್ರಮಾಣಗಳಲ್ಲಿ ಅಪೌರುಷೇಯವಾದ ವೇದಾಂತವು ಪರಮ ಪ್ರಮಾಣವೆನಿಸಿದೆ. ಅಪೌರುಷೇಯವೇದವು ವರ್ಣಿಸುವ ಸಿದ್ಧಾಂತಕ್ಕೆ ವಿರುದ್ಧವಾದ ಪ್ರಮೇಯವನ್ನು ವರ್ಣಿಸುವ ಪ್ರತ್ಯಕ್ಷವು ದುರ್ಬಲವಾಗಿದೆ. ಈ ಹಿನ್ನೆಲೆಯಲ್ಲ ಪ್ರತ್ಯಕ್ಷಾನುಭವದಿಂದ ಆತ್ಮನಲ್ಲಿ ಕಾಣುವ ಗುಣಗಳು ಅವಿದ್ಯೆಯ ಕೊಡುಗೆ ಎಂದು ಸಮರ್ಥಿಸುವುದು ಅನಿವಾರ್ಯವಾಗಿದೆ. ಇಲ್ಲವಾದರೆ ಅಪೌರುಷೇಯವಾದ ವೇದಾಂತವು ಅರ್ಥಹೀನವಾಗುವುದು. ಈ ಹಿನ್ನೆಲೆಯಲ್ಲಿ ಪ್ರತ್ಯಕ್ಷ ಗೋಚರವಾದ ಸಂಗತಿ ಸತ್ಯವಲ್ಲವೆಂದು ಅಧ್ಯಾಸ ಭಾಷ್ಯವು ಸಮರ್ಥಿಸಿ ವಿಶ್ವಮಿಥ್ಯಾತ್ವವನ್ನು ಉಪಪಾದಿಸಿದೆ-

ಅಸ್ಯ ಶಾಸ್ತ್ರಸ್ಯ ಐದಂಪರ್ಯಂ 'ಸುಖೈಕತಾನಸದಾತ್ಮಕಕೂಟಸ್ಥಚೈತನ್ಯೈಕ-ರಸತಾ ಸಂಸಾರಿತ್ವಾಭಿಮತಸ್ಯ ಆತ್ಮನಃ ಪಾರಮಾರ್ಥಿಕಂ ಸ್ವರೂಪಂ ಇತಿ ವೇದಾಂತಾಃ ಪರ್ಯವಸ್ಯಂತಿ' ಇತಿ । ತಚ್ಚ ಅಹಂ ಕರ್ತಾ ಸುಖೀ ದುಃಖೀತಿ

**ಪ್ರತ್ಯಕ್ಷಾಭಿಮತೇನ ಅಬಾಧಿತಕಲ್ಪೇನ ಅವಭಾಸೇನ ವಿರುಧ್ಯತೇ । ಅತಃ ತದ್ವಿರೋಧಪರಿಹಾರಾರ್ಥಂ (ಪ್ರತ್ಯಕ್ಷವಿರೋಧಪರಿಹಾರಾರ್ಥಂ) ಬ್ರಹ್ಮ-ಸ್ವರೂಪವಿಪರೀತರೂಪಂ ಅವಿದ್ಯಾನಿರ್ಮಿತಂ ಆತ್ಮನಃ ಇತಿ ಯಾವನ್ನ ಪ್ರತಿಪಾದ್ಯತೇ, ತಾವತ್ ಜರದ್ಗವಾದಿವಾಕ್ಯವತ್ ಅನರ್ಥಕಂ ಪ್ರತಿಭಾತಿ । ಅತಃ ತನ್ನಿವೃತ್ತ್ಯರ್ಥಮ್ ಅವಿದ್ಯಾವಿಲಸಿತಂ ಅಬ್ರಹ್ಮಸ್ವರೂಪತ್ವಂ ಆತ್ಮನಃ ಇತಿ ಪ್ರತಿಪಾದಯಿತವ್ಯಮ್ ।** (ಪಂ.ಪಾ., ಪುಟ 12)

ಈ ಹಿನ್ನೆಲೆಯಲ್ಲಿ ವಿಶ್ವಮಿಥ್ಯಾತ್ವವು ಪ್ರಾಮಾಣಿಕವಾಗಿದೆ.

## 5. ಅದ್ವೈತವಾದ-ಬೌದ್ಧದರ್ಶನವೆ ?

ಬೌದ್ಧದರ್ಶನವೇ ಅದ್ವೈತಸಿದ್ಧಾಂತವಾಗಿ ರೂಪ ತಳೆದಿದೆ ಎಂಬುದು ಕೆಲವರ ಚಿಂತನೆ. ಆದರೆ ಎರಡೂ ದರ್ಶನಗಳ ಚಿಂತನೆಯಲ್ಲಿ ಭಿನ್ನತೆ ಇದೆ. ಮೊದಲು ನಾವು ನಾಲ್ಕು ಕವಲಾಗಿರುವ ಬೌದ್ಧದರ್ಶನದ ಅಭಿಪ್ರಾಯ ತಿಳಿಯೋಣ-

ಈ ಮತಗಳ ಅಭಿಪ್ರಾಯಗಳು ಒಂದು ಗ್ರಂಥದಲ್ಲಿ ಸುಂದರವಾಗಿ ನಿರೂಪಿಸಲ್ಪಟ್ಟಿವೆ-

ಬೌದ್ಧರಲ್ಲಿ ಮುಖ್ಯನಾದ ಮಾಧ್ಯಮಿಕನು ವಿಶ್ವವೆಲ್ಲವೂ ಶೂನ್ಯದಲ್ಲಿ ಆರೋಪಿತವೆಂದು ತಿಳಿದನು. ಯೋಗಾಚಾರ ಮತದಲ್ಲಿ ಬುದ್ಧಿಯೇ (ವಿಜ್ಞಾನವೇ) ಯಥಾರ್ಥವಾಗಿದ್ದು ವಿಶ್ವವೆಲ್ಲ ಅದರಲ್ಲಿ ಆರೋಪಿತವಾಗಿದೆ. ಪದಾರ್ಥಗಳು ಇದ್ದರೂ, ಅವೆಲ್ಲವೂ ಕ್ಷಣ ಕ್ಷಣಕ್ಕೂ ವಿನಾಶಹೊಂದುತ್ತಿದ್ದು ಜ್ಞಾನರೂಪಲಿಂಗದಿಂದ ಅನುಮಾನದ ಮೂಲಕ ತಿಳಿಯಲ್ಪಡುತ್ತವೆ, ಎಂದು ಸೌತ್ರಾಂತಿಕರು ಹೇಳುವರು. ವಿಶ್ವವೆಲ್ಲವೂ ಕ್ಷಣಿಕವಾದರೂ ಪ್ರತ್ಯಕ್ಷದಿಂದ ತಿಳಿಯಲ್ಪಡುತ್ತದೆ ಎಂದು ವೈಭಾಷಿಕರು ಅಭಿಪ್ರಾಯ ಪಡುವರು-

**ಮುಖ್ಯೋ ಮಾಧ್ಯಮಿಕೋ ವಿವರ್ತಮಖಿಲಂ ಶೂನ್ಯಸ್ಯ ಮೇನೆ ಜಗತ್ ।**
**ಯೋಗಾಚಾರ ಮತೇ ತು ಸಂತಿ ಮತಯಸ್ತಾಸಾಂ ವಿವರ್ತೋಽಖಿಲಃ ।**
**ಅರ್ಥೋಽಸ್ತಿ ಕ್ಷಣಿಕಸ್ತ್ವಸಾವನುಮಿತೋ ಬುಧ್ಯೇತಿ ಸೌತ್ರಾಂತಿಕಃ ।**
**ಪ್ರತ್ಯಕ್ಷಂ ಕ್ಷಣಭಂಗುರಂ ಚ ಸಕಲಂ ವೈಭಾಷಿಕೋ ಭಾಷತೇ ॥**

ಸಮಗ್ರ ಬೌದ್ಧದರ್ಶನದ ಮೂಲ ತತ್ತ್ವಗಳನ್ನು ಈ ರೀತಿ ಸಂಗ್ರಹಿಸ ಬಹುದಾಗಿದೆ-

1. ಶೂನ್ಯವು ಪರಮ ಸತ್ಯವಾಗಿದೆ. ಅದು ಜ್ಞಾನ, ಆನಂದ, ಸತ್ತ್ವ, ಅಸತ್ತ್ವ ಮೊದಲಾದ ಯಾವುದೇ ಗುಣಧರ್ಮಗಳನ್ನು ಹೊಂದಿರುವುದಿಲ್ಲ. ನಿರ್ವಿಶೇಷವಾಗಿದೆ-

ನಿರ್ವಿಶೇಷಂ ಸ್ವಯಂಭಾತಂ ನಿರ್ಲೇಪಮಜರಾಮರಮ್ ।
ಶೂನ್ಯಂ ತತ್ತ್ವಮವಿಜ್ಞೇಯಂ ಮನೋವಾಚಾಮಗೋಚರಮ್ ॥
(ತ.ಉ.)

'ನ ಸನ್ನಚಾಸನ್ನ ತಥಾ ನ ಚಾನ್ಯಥಾ
ನ ಜಾಯತೇ ವ್ಯೆತ್ತಿ ತಥಾವಹೀಯತೇ।
ನ ವರ್ಧತೇ ನಾಪಿ ವಿಶುಧ್ಯತೇ ಪುನಃ
ವಿಶುಧ್ಯತೇ ತತ್ಪರಮಾರ್ಥಲಕ್ಷಣಮ್ ॥' (ಮ.ಸೂ.6/2 ಪುಟ-22)

'ನ ಸನ್ನಾಸನ್ನ ಸದಸನ್ನ ಚಾಪ್ಯನುಭಯಾತ್ಮಕಮ್ ।
ಚತುಷ್ಕೋಟಿವಿನಿರ್ಮುಕ್ತಂ ತತ್ತ್ವಂ ಮಾಧ್ಯಮಿಕಾ ವಿದುಃ ॥'
(ಮಾ.ಕಾ. 1/7 + ಬೋ.ಪಂ.358)

'ಪ್ರಜ್ಞಾಪಾರಾಮಿತಾಜ್ಞಾನಮದ್ವಯಂ ಸಾ ತಥಾಗತಃ'
(ಅ.ಸ. ಪುಟ-153)

'ಅನಿರೋಧಮನುತ್ಪಾದಮನುಚ್ಛೇದಮಶಾಶ್ವತಮ್ ।
ನಿರ್ವಿಕಲ್ಪಮನಾನಾರ್ಥಮೇತತ್ತತ್ತ್ವಸ್ಯ ಲಕ್ಷಣಮ್ ॥' (ಮಾ. ಕಾ. 18-9)

2. ಸತ್ಯವಾದ ಶೂನ್ಯದಲ್ಲಿಯೇ ಸಕಲ ಪ್ರಪಂಚವು ಆರೋಪಿತ ವಾಗಿರುತ್ತದೆ. ವಾಸ್ತವದಲ್ಲಿ ಈ ವಿಶ್ವವು, ಗಂಧರ್ವನಗರ, ವಂಧ್ಯಾಪುತ್ರ, ಮೃಗತೃಷ್ಣಿಕೆಯಂತೆ ಸಾಂವೃತ (ಅತ್ಯಂತಾಸತ್) ಆಗಿರುತ್ತದೆ-

'ವಿಶ್ವಾಕಾರಂ ಚ ಸಂವೃತ್ಯಾ' (ತ.ಉದಾ.)

'ಆಕಾಶಂ ಶಶಶೃಂಗಂ ಚ ವಂಧ್ಯಾಯಾಃ ಪುತ್ರ ಏವ ಚ ।
ಅಸಂತಶ್ಚಾಭಿಲಪ್ಯಂತೇ ತಥಾ ಭಾವೇಷು ಕಲ್ಪನಾ ॥'
(ಲಂ.ಅ., ಶ್ಲೋ.105)

'ಸ್ವಪ್ನಂ ಕೇಶೋಂಡ್ರುಕಂ ಮಾಯಾ ಗಂಧರ್ವಮೃಗತೃಷ್ಣಿಕಾ ।
ಅಹೇತುಕಾಽಪಿ ದೃಶ್ಯಂತೇ ತಥಾ ಲೋಕವಿಚಿತ್ರತಾ ॥'
(ಲಂ.ಅ., ಶ್ಲೋ. 200)

'ಬಹಿರ್ಧಾ ನಾಸ್ತಿ ವೈ ದೃಶ್ಯಂ ಅತೋ ವೈ ಚಿತ್ತಮಾತ್ರಕಮ್ ।'

(ಲಂ.ಅ., ಶ್ಲೋ. 101)

'ಯಥಾ ಮಾಯಾ ಯಥಾ ಸ್ವಪ್ನೋ ಗಂಧರ್ವನಗರಂ ಯಥಾ ।
ತಥೋತ್ಪಾದಸ್ತಥಾ ಸ್ಥಾನಂ ತಥಾ ಭಂಗ ಉದಾಹೃತಮ್ ॥'

(ಮ.ಕಾ. 7/34 ವ.ಪೃ.57)

'ಕ್ಲೇಶಾಃ ಕರ್ಮಾಣಿ ದೇಹಾಶ್ಚ ಕರ್ತಾರಶ್ಚ ಫಲಾನಿ ಚ ।
ಗಂಧರ್ವನಗರಾಕಾರಾ ಮರೀಚಿಸ್ವಪ್ನಸನ್ನಿಭಾಃ ॥ (ಮಾ.ಕಾ. 17/33)

**3.** ಹಿಂದೆ ತಿಳಿಸಿದ ಶೂನ್ಯತತ್ತ್ವವನ್ನು ಉಪಾಸಿಸುವ ಸಾಧಕನು ಶೂನ್ಯಭಾವವನ್ನು ಹೊಂದುವನು.

'ಜಾಡ್ಯ ಸಂವೃತಿದುಃಖಾಂತಪೂರ್ವದೋಷವಿರೋಧಿ ಯತ್ ।
ನಿತ್ಯಭಾವನಯಾ ಭಾತಂ ತದ್ಭಾವಂ ಯೋಗಿನಂ ನಯೇತ್ ॥'

(ತ.ಉದಾ.)

## ಅದ್ವೈತದರ್ಶನದ ಮೂಲತತ್ವಗಳು

**1.** ಕೇವಲ ಅರ್ಧಶ್ಲೋಕದಿಂದಲೇ ಸಮಗ್ರವಾಙ್ಮಯದ ಅಭಿಪ್ರಾಯವನ್ನು ಈ ರೀತಿ ಮಂಡಿಸಬಹುದಾಗಿದೆ- ಬ್ರಹ್ಮ ಒಂದೇ ಸತ್ಯ, ಅದಕ್ಕಿಂತ ಬೇರೆಯಾದ ಪ್ರಪಂಚವೆಲ್ಲ ಮಿಥ್ಯೆಯಾಗಿದೆ-

ಶ್ಲೋಕಾರ್ಧೇನ ಪ್ರವಕ್ಷ್ಯಾಮಿ ಯದುಕ್ತಂ ಗ್ರಂಥಕೋಟಿಷು ।
ಬ್ರಹ್ಮ ಸತ್ಯಂ ಜಗನ್ಮಿಥ್ಯಾ ಜೀವೋ ಬ್ರಹ್ಮೈವ ನಾಪರಃ ॥

(ಬ್ರ.ಜ್ಞಾ.ಮಾ., ಪುಟ 224)

ಜೀವನು ಬ್ರಹ್ಮನೇ ಆಗಿರುವನು. ಪ್ರಪಂಚವಲ್ಲದ ಈ ಬ್ರಹ್ಮವು ಸತ್ಯ ಜ್ಞಾನಾನಂದ ರೂಪವು ನಿರ್ವಿಶೇಷವೂ ಸರ್ವಶಬ್ದಗಳಿಂದ ಅವಾಚ್ಯವೂ ಆಗಿದೆ-

'ನಿತ್ಯ ಶುದ್ಧ ವಿಮುಕ್ತೈಕಮಖಂಡಾನಂದಮದ್ವಯಮ್ ।
ಸತ್ಯಂ ಜ್ಞಾನಮನಂತಂ ಯತ್ಪರಂ ಬ್ರಹ್ಮಾಹಮೇವ ತತ್॥'

(ಆ.ಬೋ.ಶ್ಲೋ 36)

2. ಶೂನ್ಯದಲ್ಲಿ ಕಾಣುವ ವೇತಾಳದಂತೆ, ಗಂಧರ್ವನಗರದಂತೆ, ಅಂಗುಲೀಯಿಂದ ಕಣ್ಣನ್ನು ಒತ್ತುವುದರಿಂದ ಆಕಾಶದಲ್ಲಿ ಇಬ್ಬರು ಚಂದ್ರರು ತೋರುವಂತೆ ಸತ್ಯವಾದ ಪರಮಾತ್ಮನಲ್ಲಿ ವಿಶ್ವವು ಕಾಣುವುದು-

**'ಯಥೈವ ಶೂನ್ಯೇ ವೇತಾಲೋ ಗಂಧರ್ವಾಣಾಂ ಪುರಂ ಯಥಾ ।**
**ಯಥಾಕಾಶೇ ದ್ವಿಚಂದ್ರತ್ವಂ ತದ್ವತ್ಸತ್ಯೇ ಜಗಸ್ಸ್ಥಿತಿಃ॥'**
(ಅ.ಅ.ಶ್ಲೋ-62)

**'ಸ್ವಪ್ನಮಾಯೇ ಯಥಾದೃಷ್ಟೇ ಗಂಧರ್ವಾಣಾಂ ಪುರಂ ಯಥಾ ।**
**ತಥಾ ವಿಶ್ವಮಿದಂ ದೃಷ್ಟಂ ವೇದಾಂತೇಷು ವಿಚಕ್ಷಣೈಃ ॥'** (ಗೌ.ಕಾ.2-31)

**'ಗಂಧರ್ವನಗರಂ ದೃಶ್ಯಮಾನಮೇವ ಸತ್ ಅಕಸ್ಮಾದಭಾವತಾಂ ಗತಂ ದೃಷ್ಟಂ, ಯಥಾ ಚ ಸ್ವಪ್ನಮಾಯೇ ದೃಷ್ಟೇ ಅಸದ್ರೂಪೇ, ತಥಾ ವಿಶ್ವಮಿದಂ ದ್ವೈತಂ, ಸಮಸ್ತಮಸತ್ ದೃಷ್ಟಮ್.........ದ್ವೈತಸ್ಯಾಸತ್ಯತ್ವಾತ್ ।'**
(ಗೌ.ಕಾ.ಭಾ., 2.31)

3) ಅವಿದ್ಯೆಯ ವಶನಾಗಿ ತಾನೇ ಬ್ರಹ್ಮನೆಂಬುದನ್ನು ಮರೆತ ಜೀವನು, 'ಅಹಂ ಬ್ರಹ್ಮಾಸ್ಮಿ' ಎಂದು ನಿರಂತರೋಪಾಸನೆ ಮಾಡಿದಲ್ಲಿ, ಬ್ರಹ್ಮಭಾವ ವನ್ನು ಹೊಂದುವನು-

**'ಅಹಮೇವ ಪರಂ ಬ್ರಹ್ಮ ನ ಚಾಹಂ ಬ್ರಹ್ಮಣಃ ಪೃಥಕ್ ।**
**ಇತ್ಯೇವಂ ಸಮುಪಾಸೀತ ಬ್ರಾಹ್ಮಣೋ ಬ್ರಹ್ಮಣಿ ಸ್ಥಿತಃ ॥'**
(ಬ್ರ.ಅ., ಶ್ಲೋ. 3)

ಈ ಮೂಲ ತತ್ತ್ವಗಳ ಅಧ್ಯಯನ ನಡೆಸುವಾಗ ಬೌದ್ಧ ಹಾಗೂ ಅದ್ವೈತ ದರ್ಶನದಲ್ಲಿ, ಮೇಲ್ನೋಟಕ್ಕೆ ಭೇದವು ಕಾಣುವುದಿಲ್ಲ.

### ಬೌದ್ಧರು ಪ್ರಚ್ಛನ್ನವೈದಿಕರು

ಬೌದ್ಧರ ವಿಚಾರಧಾರೆಯಿಂದ ಅದ್ವೈತವಾದವು ಪ್ರಭಾವಿತವಾಗಿದೆ ಎಂಬ ಅಂಶವನ್ನು ಶಂಕರಾಚಾರ್ಯರು, ವಾಚಸ್ಪತಿಮಿಶ್ರರು, ಸರ್ವಜ್ಞಾತ್ಮಮುನಿ ಶ್ರೀಹರ್ಷ, ಆನಂದಬೋಧರೇ ಮೊದಲಾದ ಅದ್ವೈತದಾರ್ಶನಿಕರು ತೀವ್ರವಾಗಿ ಅಲ್ಲಗಳೆದಿದ್ದು, ಎರಡೂ ದರ್ಶನಗಳಲ್ಲಿರುವ ವೈಚಾರಿಕ ವಿಭಿನ್ನತೆ ಯನ್ನು ಸ್ಪಷ್ಟಪಡಿಸಿದ್ದಾರೆ-

ಶ್ರೀ ಶಂಕರಾಚಾರ್ಯರು ಬ್ರಹ್ಮಸೂತ್ರಭಾಷ್ಯದಲ್ಲಿ ಹೀಗೆ ನುಡಿದಿದ್ದಾರೆ-

'ಆದ್ದರಿಂದ ಬ್ರಹ್ಮನಲ್ಲಿ ಎಲ್ಲ ವಿಕಾರಜಾತವನ್ನು (ವಿಶ್ವವನ್ನು) ಶ್ರುತಿಯು ನಿಷೇಧಿಸುತ್ತದೆ. ಬ್ರಹ್ಮವು ಅಂತಿಮ ಸತ್ಯವಾಗಿ ಉಳಿಯುತ್ತದೆ. ಈ ಕಾರಣದಿಂದ ನಿಷೇಧವು ಬ್ರಹ್ಮನೇ ಆಧಾರವಾಗಿಯುಳ್ಳದ್ದು. ಅಭಾವ (ಶೂನ್ಯ)ವನ್ನಲ್ಲ.'-

**'ತಸ್ಮಾತ್ಪ್ರಪಂಚಮೇವ ಬ್ರಹ್ಮಣಿ ಕಲ್ಪಿತಂ ಪ್ರತಿಷೇಧತಿ, ಪರಿಶಿನಷ್ಟಿ, ಬ್ರಹ್ಮೇತ್ಯೇವಾವಗಂತವ್ಯಮ್ । ...... ತಸ್ಮಾದ್ಬ್ರಹ್ಮಾವಸಾನೋಽಯಂ ಪ್ರತಿಷೇಧಃ ನಾಭಾವಾವಸಾನ ಇತ್ಯಧ್ಯವಸ್ಯಾಮಃ'**

(ಸೂ.ಭಾ. 3/2/22 ಪುಟ.366)

ವಾಚಸ್ಪತಿಗಳು ಎರಡೂ ವಾದಗಳ ವೈಲಕ್ಷಣ್ಯವನ್ನು ಈ ರೀತಿ ಉಪಪಾದಿಸಿದ್ದಾರೆ- 'ಬ್ರಹ್ಮವಾದಿಗಳು ನೀಲಾದ್ಯಾಕಾರವಾದ ಜ್ಞಾನವನ್ನು ಅಂಗೀಕರಿಸುವುದಿಲ್ಲ, ನೀಲಾದ್ಯಾಕಾರವನ್ನು ಅನಿರ್ವಚನೀಯವೆನ್ನುವರು.'-

**'ನ ಹಿ ಬ್ರಹ್ಮವಾದಿನೋ ನೀಲಾದ್ಯಾಕಾರಾಂ ವಿತ್ತಿಮಭ್ಯುಪಗಚ್ಛಂತಿ ಕಿಂತು ಅನಿರ್ವಚನೀಯಂ ನೀಲಾದೀತಿ'** (ಸೂ.ಭಾ.ಭಾ. 2/2/28 ಪುಟ 277)

ಸರ್ವಜ್ಞಾತ್ಮ ಮುನಿಗಳು ಈ ರೀತಿ ನುಡಿದಿದ್ದಾರೆ- 'ಬೌದ್ಧದರ್ಶನದಲ್ಲಿ ಅಂಗೀಕರಿಸಿದ ವಿಜ್ಞಾನ ತತ್ತ್ವವು, ನಿತ್ಯವಾಗಿರದೇ ಕ್ಷಣಿಕವಾಗಿದ್ದು ಅನೇಕವಾಗಿರುತ್ತದೆ. ಅದ್ವೈತ ದರ್ಶನದಲ್ಲಿ ವಿಜ್ಞಾನವು (ಬ್ರಹ್ಮವು) ಸತ್ಯವು ನಿತ್ಯವು ಏಕವೂ ಆಗಿರುತ್ತದೆ. ಆದ್ದರಿಂದ ವಿಜ್ಞಾನವಾದ ಅದ್ವೈತವಾದಗಳಿಗೆ ವೈಚಾರಿಕ ಸಮತೆ ಇರುವುದಿಲ್ಲ'-

**'ಪರಮಾರ್ಥ ಸಂಶ್ರಯತಯಾ ಜನಿತಂ**
**ಪ್ರವಿಭಕ್ತಮೇವ ತು ಪರಸ್ಪರತಃ ।**
**ಸ್ಥಿರತ್ವ ಮಭ್ಯುಪೇತಮಿಹ ನಃ ಸಮಯೇ**
**ನನು ಮಾತೃಮಾನವಿಷಯಪ್ರಭೃತಿ ॥'** (ಸಂ.ಶಾ.2/28)

**'ವಿಜ್ಞಾನವಾದೀ ಕ್ಷಣಿಕತ್ವಮೇಷಾಂ**
**ಅಂಗೀಚಕಾರಾಽಪಿ ಬಹುತ್ವ ಮೇಷಃ ।**
**ವೇದಾಂತವಾದೀ ಸ್ಥಿರಸಂವಿದೇಕೇ-**
**ತ್ಯಂಗೀಚಕಾರೇತಿ ಮಹಾನ್ವಿಶೇಷಃ ॥'** (ಮಾ.ಶಂ.ದಿ.)

ಖಂಡನಖಂಡಖಾದ್ಯ ರಚಿಸಿದ ಶ್ರೀಹರ್ಷನು ಈ ವಿಷಯದ ಬಗ್ಗೆ ತನ್ನ ಬೆಳಕು ಚೆಲ್ಲಿದ್ದಾನೆ-

''ಹೀಗಿರುವಲ್ಲಿ ಸೌಗತರಿಗೂ ಬ್ರಹ್ಮವಾದಿಗಳಿಗೂ ವಿಶೇಷವೇನೆಂದರೆ? ಸೌಗತರು ಎಲ್ಲವನ್ನೂ ಅನಿರ್ವಚನೀಯವೆನ್ನುವರು. ಲಂಕಾವತಾರದಲ್ಲಿ ಈ ರೀತಿ ಭಗವಾನರ ನುಡಿ ಇದೆ - ಬುದ್ಧಿಯಿಂದ ವಿಮರ್ಶಿಸಹೊರಟಾಗ ಪದಾರ್ಥಗಳ ಸ್ವಭಾವವನ್ನು ಗುರುತಿಸಲಾಗದು. ಆದ್ದರಿಂದ ಪದಾರ್ಥಗಳೆಲ್ಲವೂ ಅಭಿಲಾಪಶೂನ್ಯಗಳೂ ಸ್ವಭಾವ ರಹಿತವೂ ಆಗಿರುತ್ತವೆ. ''ಬ್ರಹ್ಮವಾದಿಗಳು ಬ್ರಹ್ಮನಿಗಿಂತ ಬೇರೆಯಾದ ಸಮಸ್ತ ಪ್ರಪಂಚವನ್ನು ಸತ್ ಅಥವಾ ಅಸತ್, ಸದಸತ್ ಮೊದಲಾದ ಯಾವುದೇ ಪ್ರಕಾರಗಳಿಂದ ನಿರ್ವಚನ ಮಾಡಲಸಾಧ್ಯವಾದುದರಿಂದ ಅನಿರ್ವಚನೀಯವೆನ್ನುವರು'' ಹೀಗೆ ಶ್ರೀಹರ್ಷನು ಈ ಎರಡೂ ವಾದಗಳಲ್ಲಿ ವೈಲಕ್ಷಣ್ಯವನ್ನು ಉಪಪಾದಿಸಿದ್ದಾನೆ.'-

**'ಏವಂ ಚ ಸತಿ ಸೌಗತಬ್ರಹ್ಮವಾದಿನೋಃ ಕೋ ವಿಶೇಷ ಇತಿ ಚೇತ್, ಅಯಂ ವಿಶೇಷಃ, ಯದಾದಿಮಃ ಸರ್ವಮೇವಾನಿರ್ವಚನೀಯಂ ವರ್ಣಯತಿ, ತದುಕ್ತಂ ಭಗವತಾ ಲಂಕಾವತಾರೇ-**

**''ಬುಧ್ಯಾ ವಿವಿಚ್ಯಮಾನಾನಾಂ ಸ್ವಭಾವೋ ನಾವಧಾರ್ಯತೇ ।**
**ಅತೋ ನಿರಭಿಲಪ್ಯಾಸ್ತೇ ನಿಃಸ್ವಭಾವಾಶ್ಚ ದೇಶಿತಾಃ'' ॥**

**ಇತಿ ವಿಜ್ಞಾನವ್ಯತಿರಿಕ್ತಂ ಪುನರಿದಂ ವಿಶ್ವಂ ಸದಸದ್ಭ್ಯಾಂ ವಿಲಕ್ಷಣಂ ಬ್ರಹ್ಮವಾದಿನಃ ಸಂಗಿರಂತೇ'** (ಖಂ,ಖಂ.ಖಾ.ಪುಟ.36)

ಇದೇ ರೀತಿ ಪಂಚಪಾದಿಕಾ ಮತ್ತು ವಿವರಣಗ್ರಂಥಗಳಲ್ಲಿ ಸೌಗತ ಸಾಂಕರ್ಯ ನಿರಾಸಪ್ರಯತ್ನವನ್ನು ಕಾಣಬಹುದಾಗಿದೆ. ಹಿಂದೆ ಉದಾಹರಿಸಿದ ಮತ್ತು ಇನ್ನಿತರ ಸೌಗತ ಸಾಂಕರ್ಯ ನಿರಾಸಕ ವ್ಯಾಕಗಳ ತಾತ್ಪರ್ಯವನ್ನು ಒಟ್ಟು ಈ ರೀತಿ ವರ್ಣಿಸಬಹುದಾಗಿದೆ-

**1.** ಬ್ರಹ್ಮವೆಂದು ಹೇಳಿದಾಗ ವಿಧಿಯು ಕಾಣುತ್ತದೆ. ಶೂನ್ಯವೆಂದು ಹೇಳಿದಾಗ ನಿಷೇಧವು ತೋರುತ್ತದೆ. ಬ್ರಹ್ಮವು ಸತ್ಯ(ಭಾವ)ವಾಗಿದೆ. ಶೂನ್ಯವು ಅಭಾವರೂಪವಾಗಿದೆ. ಆದ್ದರಿಂದ ಪರತತ್ತ್ವದಲ್ಲಿ ಶೂನ್ಯವಾದಿಗಳಿಗೂ ಅದ್ವೈತವಾದಿಗಳಿಗೂ ವೈಲಕ್ಷಣ್ಯವಿದೆ.

**2.** ಬೌದ್ಧರು ವೇದಪ್ರಮಾಣ್ಯವನ್ನು ಅಂಗೀಕರಿಸುವುದಿಲ್ಲ. ಅದ್ವೈತ ದರ್ಶನದಲ್ಲಿ ವೇದಪ್ರಮಾಣ್ಯವು ಅಂಗೀಕರಿಸಲ್ಪಟ್ಟಿದೆ. ಅದ್ವೈತದರ್ಶನದ ಪ್ರಕ್ರಿಯೆಯಂತೆ, ವಿಶ್ವವು ಶುಕ್ತಿಯಲ್ಲಿ ಕಾಣುವ ರಜತದಂತೆ, ಬ್ರಹ್ಮನಲ್ಲಿ ಆರೋಪಿತವಾಗಿದ್ದು ಮಿಥ್ಯೆಯಾದರೂ ವ್ಯಾವಹಾರಿಕವಾಗಿ ಸತ್ಯವಾಗಿರುತ್ತದೆ. ಆದ್ದರಿಂದಲೇ ಚಾತುರ್ವರ್ಣ್ಯವ್ಯವಸ್ಥೆ, ಉಪಾಸನೆ, ಗುರುಶಿಷ್ಯಭಾವ, ಸ್ವಾಧ್ಯಾಯಪ್ರವಚನಗಳು, ಉಪಪನ್ನವಾಗುವವು. ಸರ್ವವೂ ಶೂನ್ಯ ಮತ್ತು ಕ್ಷಣಿಕವೆಂದು ವಾದಿಸುವ ಬೌದ್ಧರಲ್ಲಿ ಉಪಾಸನೆ, ವ್ಯವಹಾರ, ಪ್ರವೃತ್ತಿಗಳೆಲ್ಲ ಅರ್ಥಹೀನವಾಗುತ್ತವೆ.

**3.** ಬೌದ್ಧದರ್ಶನದಲ್ಲಿ ಜ್ಞಾನವೊಂದೇ ಸತ್ಯವಾಗಿರುತ್ತದೆ. ಅಲ್ಲಿಯೇ ಸಮಸ್ತ ಪ್ರಪಂಚವು ಆರೋಪಿತವಾಗಿದೆ. ಈ ಅಂಶದಲ್ಲಿ ಅದ್ವೈತಿಗಳಿಗೂ ಬೌದ್ಧದರ್ಶನಕ್ಕೂ ಸಾಮ್ಯವಿದ್ದರೂ, ಬೌದ್ಧರು ವಿಜ್ಞಾನತತ್ತ್ವವು ಕ್ಷಣಿಕ ವೆಂದೂ ಪ್ರವಾಹರೂಪವಾಗಿದ್ದು ಅನೇಕವೆಂದೂ ಅಂಗೀಕರಿಸಿದ್ದಾರೆ. ಆದರೆ ಅದ್ವೈತದರ್ಶನದ ಜ್ಞಾನವು (ಜ್ಞಾನ- ರೂಪವಾದ ಬ್ರಹ್ಮವು) ನಿತ್ಯವು ಏಕವೂ ಎಂಬುದಾಗಿ ಪ್ರತಿಪಾದಿಸಲ್ಪಟ್ಟಿದೆ. ಆದ್ದರಿಂದಲೂ ಈ ಎರಡೂ ದರ್ಶನಗಳಲ್ಲಿ ಆತ್ಯಂತಿಕವಾದ ವೈಚಾರಿಕ ಭೇದವಿರುತ್ತದೆ.

**4.** ಅದ್ವೈತದರ್ಶನದ ಬ್ರಹ್ಮನು, ನಿರ್ವಿಶೇಷನು, ಸತ್ಯಜ್ಞಾನಾದಿರೂಪನು ಸಕಲ ಶಬ್ದಾವಾಚ್ಯನು. ಕೇವಲ ವೇದಗಳಿಂದ ಲಕ್ಷಣಾವೃತ್ತಿಯಿಂದ ತಿಳಿಯಲು ಸಾಧ್ಯನಾಗಿರುವನು. ಶೂನ್ಯವಾದಿಗಳ ಶೂನ್ಯವು ಸತ್ಯವಲ್ಲ. ಜ್ಞಾನಾದಿ ರೂಪವಲ್ಲ. ಆದ್ದರಿಂದಲೂ ಈ ಎರಡೂ ದರ್ಶನಗಳಲ್ಲಿ ಭೇದವಿದೆ. ಈ ಹಿನ್ನೆಲೆಯಲ್ಲಿ ಎರಡೂ ದರ್ಶನಗಳ ಚಿಂತನೆಗಳಲ್ಲಿರುವ ಭೇದವನ್ನು ಗಮನಿಸಬೇಕು. ಆದ್ದರಿಂದ ವೇದದಲ್ಲಿರುವ ನಿರ್ವಿಶೇಷ ಚೈತನ್ಯದ ಪರಿಕಲ್ಪನೆಯನ್ನು ರೂಪಾಂತರದಿಂದ ಒಪ್ಪಿದ ಬೌದ್ಧರು 'ಪ್ರಚ್ಛನ್ನವೈದಿಕ'ರು.

## VII ಮುಕ್ತಿಸಾಧನಗಳು

### ವೈರಾಗ್ಯ

ಅಧ್ಯಾತ್ಮದ ಪಯಣಿಗನಿಗೆ ವೇದ-ಪುರಾಣಗಳು ವರ್ಣಿಸಿದ ಸತ್ಕರ್ಮಗಳ ಅನುಷ್ಠಾನ ಅತ್ಯಾವಶ್ಯಕವಾಗಿದೆ. ವೇದೋಕ್ತ ಕರ್ಮಗಳನ್ನು ಲೌಕಿಕ

ಫಲಕಾಮನೆಯಿಂದ ಮಾಡುವುದಕ್ಕಿಂತ ಕಾಮನೆ ತೊರೆದು ಮಾಡುವುದು ಶ್ರೇಯಸ್ಕರ. ಇದರಿಂದ ಸತ್ಯದರ್ಶನವಾಗುತ್ತದೆ-

**'ಶ್ರೌತಸ್ಮಾರ್ತೇಷು ನಿತ್ಯೇಷು ಕರ್ಮಸು ಯುಕ್ತಸ್ಯ ನಿಷ್ಕಾಮಸ್ಯ ಪರಬ್ರಹ್ಮ-ವಿವಿದಿಷೋಃ ಆರ್ಷಾಣಿ ದರ್ಶನಾನಿ ಪ್ರಾದುರ್ಭವಂತಿ ಆತ್ಮಾದಿವಿಷಯಾಣಿ'** (ತೈತ್ತಿರೀಯ ಭಾ.ಶಿ.ವ.)

ಫಲಕಾಮನೆ, ವಿರಕ್ತಿಹೀನತೆಯ ಸಂಕೇತ. ಎಲ್ಲಿಯವರೆಗೆ ಸಾಧಕನು ಇಂದ್ರಿಯಗಳನ್ನು ತನ್ನ ಹತೋಟಿಯಲ್ಲಿ ಇಟ್ಟುಕೊಳ್ಳಲಾರನೋ ಅಲ್ಲಿಯ ವರೆಗೆ ಯಾವ ಸಿದ್ಧಿಯೂ ದೊರಕದು. ವೈರಾಗ್ಯ ಹುಟ್ಟಲು, ಕಾಣುವ ಮತ್ತು ಕಾಣದ ಭೋಗಪದಾರ್ಥಗಳಲ್ಲಿ ಇರುವ ದೋಷಗಳನ್ನು (ಮತ್ತೆ ಮತ್ತೆ) ಮನನಗೈದು ಅವುಗಳ ಮೇಲಿನ ಪ್ರೀತಿಯನ್ನು ತೊರೆಯುವುದು ಪ್ರಧಾನ ಕಾರಣವಾಗಿದೆ-

**'ವೈರಾಗ್ಯಂ ನಾಮ ದೃಷ್ಟಾದೃಷ್ಟಭೋಗೇಷು ದೋಷದರ್ಶನಾಭ್ಯಾಸಾತ್ ವೈತೃಷ್ಣ್ಯಮ್'** (ಗೀ.ಭಾ.6.37)

ಎಲ್ಲಿಯ ತನಕ ಭೋಗವಸ್ತುಗಳಲ್ಲಿನ ಆಕರ್ಷಣೆ ತಣಿಯುವುದಿಲ್ಲವೋ ಅಲ್ಲಿಯ ತನಕ ಆತ್ಮ ತತ್ತ್ವದ ಅರಿವು ಜನಿಸಲಾರದು-

**'ಸ್ತ್ರ್ಯಾದಿಬಾಹ್ಯವಿಷಯತೃಷ್ಣಾಪಹೃತಚಿತ್ತಾನಾಂ**
**ಪ್ರತ್ಯಗಾತ್ಮವಿಜ್ಞಾನಾನುಪಪತ್ತೇಃ'** (ಛಾಂ.ಭಾ., 8.5.4)

ಅದಕ್ಕಾಗಿ ನಿಷ್ಕಾಮಕರ್ಮಾನುಷ್ಠಾನ ಮತ್ತು ಜ್ಞಾನ-ವಿಜ್ಞಾನಗಳ ಸಂಪಾದನೆ ಅನಿವಾರ್ಯ. ಮೂರುಲೋಕದ ಒಡೆತನಕ್ಕಿಂತ ವಿದ್ಯೆ ಪ್ರಧಾನ (ಶ್ರೇಷ್ಠ)ವಾದುದು.

**ವಿದ್ಯೆ ಪ್ರಧಾನ**

ವಿದ್ಯೆ ಎಂದರೆ, ಒಬ್ಬನೇ ಆತ್ಮ ಸತ್ಯನೆಂಬ ಎಚ್ಚರ. ಯಾರು ಅನೇಕ ಜೀವರಿರುವರೆಂದು ತಿಳಿಯುವರೋ ಅವರು ಸಂಸಾರಬಂಧನದಲ್ಲಿ ತೊಳಲಾಡುವರು -

**'ಯಸ್ತು ಪೂರ್ಣಾನಂದ ಬ್ರಹ್ಮರೂಪೇಣಾತ್ಮಾನಂ ನ ಜಾನಾತಿ ಸ ಬಧ್ಯತ ಏವ।'** (ಶ್ವೇ.ಭಾ.1.6.)

ಜ್ಞಾನಸಂಪಾದನೆಗೆ ಕರ್ಮ ಆವಶ್ಯಕ. ಅದರೆ ಕೇವಲ ಕರ್ಮ ಮುಕ್ತಿ

ದೊರಕಿಸದು. ಜ್ಞಾನವೂ ಅತ್ಯಾವಶ್ಯಕ. ಹಾಗೆಂದರೆ, ಇವುಗಳಿಗೆ ಸಮ ಪ್ರಾಧಾನ್ಯವಿದೆಯೆಂದು ತಿಳಿಯಬಾರದು. ಕರ್ಮವು ಅಪ್ರಧಾನ (ಜ್ಞಾನ-ಜನನೋಪಾಯ) ಜ್ಞಾನವು ಪ್ರಧಾನ. ನಿರ್ಮಲ ಹಾಗೂ ದೃಢವಾದ ಜ್ಞಾನ ಹುಟ್ಟಲು ಕರ್ಮದ ಅಗತ್ಯವಿದೆಯಾದರೂ ಜ್ಞಾನ ಜನಿಸಿದ ನಂತರ ಮುಕ್ತಿ ದೊರಕಲು ಕರ್ಮದ ಆವಶ್ಯಕತೆ ಇಲ್ಲ. ಅವಿದ್ಯೆಯ ಸ್ಥಿತಿಯಲ್ಲಿ ಆಚರಿಸುವುದು ಕರ್ಮ. ಅವಿದ್ಯೆಯನ್ನು ಹೊಡೆದೋಡಿಸುವುದು ಜ್ಞಾನ. ಇವೆರಡರ ಸ್ವಭಾವ-ಫಲಗಳು ತೀರ ವಿಭಿನ್ನ-

1. **'ತಸ್ಮಾನ್ನ ಕರ್ಮಣೋಽಸ್ತಿ ನಿಃಶ್ರೇಯಸಸಾಧನತ್ವಮ್ । ನ ಚ ಜ್ಞಾನ ಕರ್ಮಣೋಃ ಸಮುಚ್ಚಿತಯೋಃ । ನಾಪಿ ಜ್ಞಾನಸ್ಯ ಕೈವಲ್ಯಫಲಸ್ಯ ಕರ್ಮ ಸಹಾಯಾಪೇಕ್ಷಾ । ಅವಿದ್ಯಾನಿವರ್ತಕತ್ವೇನ ವಿರೋಧಾತ್ । ನ ಹಿ ತಮಸ್ತಮಸೋ ನಿವರ್ತಕಮ್ । ಅತ ಕೇವಲಮೇವ ಜ್ಞಾನಂ ನಿಃಶ್ರೇಯಸ-ಸಾಧನಮಿತಿ'** (ಗೀ. ಭಾ. 18.66.)
2. **'ಅಜ್ಞಾನಾಮೇವ ಹಿ ಕರ್ಮಯೋಗೋ ನ ಜ್ಞಾನಿನಾಮ್ । ಜ್ಞಾನಿನಾಂ ಗುಣೈರಚಾಲ್ಯಮಾನಾನಾಂ ಸ್ವತಃ ಚಲನಾಭಾವಾತ್ ಕರ್ಮಯೋಗೋ ನೋಪಪದ್ಯತೇ'** (ಗೀ. ಭಾ. 3.5)

ನಿರ್ಗುಣಾತ್ಮನಲ್ಲಿ ಏಕಾಗ್ರತೆ (ಧ್ಯಾನ) ಮೊದಲು ಸಾಧ್ಯವಾಗದಿರಬಹುದು. ಅದಕ್ಕಾಗಿ ಉಪಾಸನೆಯನ್ನು ಹೇಳಲಾಗಿದೆ. ಜ್ಞಾನದ ವಿಷಯ ಸತ್ಯ. ಉಪಾಸನೆಯ ವಸ್ತು ಸತ್ಯವೇ ಆಗಿರಬೇಕೆಂಬ ನಿರ್ಬಂಧವಿಲ್ಲ. ಮಾಯೆಯೆಂಬ ಉಪಾಧಿಯ ಮೂಲಕ ಮೈದಳೆದ ನಾನಾಫಲಗಳನ್ನು ಕರುಣಿಸುವ ಇಷ್ಟದೇವತೆಗಳಲ್ಲಿ ಮನ ನಿರಂತರ ತೊಡಗಿಸುವುದೇ ಉಪಾಸನೆ ಅಥವಾ ಧ್ಯಾನ. ಉಪಾಸನೆಯಲ್ಲಿ ಕಾಣುವ ಸಗುಣವಸ್ತು ಅಂತಿಮಸತ್ಯವಲ್ಲ. ಪರಮಚೇತನವು ಜ್ಞೇಯವೇ ಹೊರತು ಉಪಾಸ್ಯವಲ್ಲ. ಜ್ಞೇಯವಾದ ಪರಚೇತನವು ನಿರ್ವಿಶೇಷ ಜ್ಞಾನಾನಂದಸ್ವರೂಪ ಎಂದು ಈಗಲೇ ತಿಳಿದಿದ್ದೇವೆ. ಅದು ಪ್ರಮಾಣಗಳಿಂದ ವೇದ್ಯವಲ್ಲ. ಪ್ರಮಾಣಗಳು ಅದರ ಬಗ್ಗೆ ಇರುವ ತಪ್ಪು ತಿಳುವಳಿಕೆಗಳನ್ನು ದೂರ ಸರಿಸುತ್ತವೆ ಮಾತ್ರ-

1. **'ಏವಮೇಕಮಪಿ ಬ್ರಹ್ಮ, ಅಪೇಕ್ಷಿತೋಪಾಧಿಸಂಬಂಧಂ, ನಿರಸ್ತೋಪಾಧಿ ಸಂಬಂಧಂ ಚ ಉಪಾಸ್ಯತ್ವೇನ ಜ್ಞೇಯತ್ವೇನ ಚ ವೇದಾಂತೇಷೂಪದಿಶ್ಯತೇ'** (ಬ್ರ. ಸೂ. ಭಾ. 1. 1.4)

2. **'ಶಾಸ್ತ್ರಂ ತು ಅಂತ್ಯಂ ಪ್ರಮಾಣಮ್, ಅತದ್ಧರ್ಮಾಧ್ಯಾರೋಪಣಮಾತ್ರ-ನಿವರ್ತಕತ್ವೇನ ಪ್ರಾಮಾಣ್ಯಮಾತ್ಮನಿ ಪ್ರತಿಪದ್ಯತೇ । ನ ತ್ವಜ್ಞಾತಾರ್ಥ-ಜ್ಞಾಪಕತ್ವೇನ'** (ಗೀ. ಭಾ. 2. 18)

ಹೀಗೆ ನಿಷ್ಕಾಮ ಕರ್ಮ-ಭಕ್ತಿ-ವಿರಕ್ತಿ ಮೊದಲಾದ ಸಾಧನಗಳಿಂದ ಅವಿದ್ಯೆಯನ್ನು ಕಳೆದುಕೊಳ್ಳುವುದೇ ಮಾನವ ಜನ್ಮದ ಸಾಫಲ್ಯಕಾರಣವಾಗಿದೆ.

ಹೀಗೆ ಆತ್ಮಜ್ಞಾನವೇ ಪ್ರಧಾನ ಮುಕ್ತಿ ಸಾಧನವಾಗಿದೆ-

**'ನಿರಾಕೃತ ಸರ್ವನಾಮರೂಪಕರ್ಮಪರಮಾರ್ಥಾತ್ಮವಸ್ತುವಿಷಯಂ ಆತ್ಮಜ್ಞಾನಮಮೃತತ್ವ ಸಾಧನಮ್'** (ಐತರೇಯ ಶಾಂ. ಭಾ. ಪೀಠಿಕಾ)

## VIII ಮುಕ್ತಿ

'ಮುಚ್ಲ್ ಮೋಕ್ಷಣೇ' ಎಂಬ ಧಾತುವಿನಿಂದ ನಿಷ್ಪನ್ನವಾದ ಮುಕ್ತಿ ಶಬ್ದವು ಬಿಡುಗಡೆ ಎಂಬ ಅರ್ಥ ನೀಡುವುದು. ಬುದ್ಧಿ ಮೊದಲಾದ ವಸ್ತುಗಳ ಸಂಬಂಧದಿಂದ ಆತ್ಮನಲ್ಲಿ ತೋರುವ ಕರ್ತೃತ್ವಭೋಕ್ತೃತ್ವಗಳೇ ಬಂಧವೆಂದು ನಾವು ತಿಳಿದಿದ್ದೇವೆ. ಈ ಹಿನ್ನಲೆಯಲ್ಲಿ ಅವಿದ್ಯೆ ದೂರವಾದರೆ ಉಳಿಯುವುದು ಅದ್ವಿತೀಯಾತ್ಮವೇ. ಇದೇ ಮುಕ್ತಿ. ಅಜ್ಞಾನ ಮತ್ತು ಅದರ ಕೊಡುಗೆ ಕೊನೆಗಾಣುವುದು ಆತ್ಮತತ್ತ್ವದ ಎಚ್ಚರ ಮೂಡಿದಾಗಲೇ. ಇಲ್ಲಿ ಹೊಸದನ್ನು ಪಡೆಯುವುದೇನಿಲ್ಲ. ಕಲ್ಪಿಸಿಕೊಂಡದ್ದನ್ನು ಅರಿತು ಕಳಚಿಕೊಳ್ಳುವುದು ಮಾತ್ರವೇ ಅಗತ್ಯ. 'ಬ್ರಹ್ಮವಿತ್ ಬ್ರಹ್ಮೈವ ಭವತಿ' 'ಅಹಂ ಬ್ರಹ್ಮಾಸ್ಮಿ' ಇತ್ಯಾದಿ ಶ್ರುತಿಗಳು ಬ್ರಹ್ಮಭಾವವನ್ನು ಮುಕ್ತಿ ಎಂದು ಸಾರುತ್ತಿರುವುದು ಗಮನಾರ್ಹ.

### ಅವಿದ್ಯಾನಿವೃತ್ತಿಯೇ ಮುಕ್ತಿ

ಕೆಲವು ದಾರ್ಶನಿಕರು ದುಃಖ ನಿವೃತ್ತಿಯನ್ನೋ ಆನಂದದ ಪ್ರಾಪ್ತಿಯನ್ನೋ ಮುಕ್ತಿ ಎನ್ನುವರು. ಆದರೆ ಇದು ವೈದಿಕ ಚಿಂತನೆಯಲ್ಲ. ಆತ್ಮನಲ್ಲಿ ಆನಂದ ದುಃಖಗಳೆರಡೂ ಅವಿದ್ಯೆಯಿಂದ ಕಲ್ಪಿತವಾಗಿವೆ. ಆದ್ದರಿಂದ ಸರಿಯಾಗಿ ಆತ್ಮಸ್ವರೂಪವನ್ನು ತಿಳಿಯುವುದೇ ಬ್ರಹ್ಮಪ್ರಾಪ್ತಿ ಅಥವಾ ಬ್ರಹ್ಮಭಾವ. ಆವರಕವಾದ ಅವಿದ್ಯೆಯನ್ನು ಕಳಚಿಕೊಳ್ಳುವುದಕ್ಕಿಂತ ಇದು ಬೇರೆ ಇಲ್ಲ-

1. **'ನ ಚ ಪರಪ್ರಾಪ್ತೇರವಗಮಾರ್ಥಸ್ಯ ಚ ಭೇದೋಽಸ್ತಿ । ಅವಿದ್ಯಾಯಾ ಅಪಾಯ ಏವ ಹಿ ಪರಪ್ರಾಪ್ತಿರ್ನಾರ್ಥಾಂತರಮ್'** (ಮುಂಡಕ. ಭಾ., I. 5.)

2. 'ನ ಚ ಅಜ್ಞಾನವ್ಯತಿರೇಕೇಣ ಮೋಕ್ಷಸ್ಯ ವ್ಯವಧಾನಾಂತರಂ ಕಲ್ಪಯಿತುಂ ಶಕ್ಯಮ್।' (ಬೃಹ. ಭಾ., 3.3.1)

3. 'ಫಲತ್ವಪ್ರಸಿದ್ಧಿರಪಿ ಮೋಕ್ಷಸ್ಯ ಬಂಧನಿವೃತ್ತಿಮಾತ್ರಾಪೇಕ್ಷಾ ನಾಪೂರ್ವೋಪಜನನಾಪೇಕ್ಷಾ' (ಸೂ. ಭಾ. 4.4.2)

4. 'ತಸ್ಮಾತ್ ಅಪಕೃಷ್ಯಮಾಣಾಯಾಮವಿದ್ಯಾಯಾಂ, ವಿದ್ಯಾಯಾಂ ಚ ಕಾಷ್ಠಾಂ ಗತಾಯಾಂ ಸರ್ವಾತ್ಮಭಾವೋ ಮೋಕ್ಷಃ।' (ಬೃ. ಹ. ಭಾ., 4.3.20.)

5. 'ತಸ್ಮಾತ್ ಅವಿದ್ಯಾದಿಕರ್ಮೋಪಾದಾನಹೇತುನಿವೃತ್ತೌ ಸ್ವಾತ್ಮನ್ಯವಸ್ಥಾನಂ ಮೋಕ್ಷಃ' (ತೈತ್ತಿ. ಶಾಂ. ಭಾ, ಶಿ. ವ.)

6. 'ಶರೀರೇಂದ್ರಿಯಮನೋಬುದ್ಧಿವಿಷಯವೇದನಾಸಂತಾನಸ್ಯ ಅಹಂಕಾರಸಂಬಂಧಾಜ್ಞಾನಬೀಜಸ್ಯ ನಿತ್ಯವಿಜ್ಞಾನಾನ್ಯನಿಮಿತ್ತಸ್ಯ ಆತ್ಮತತ್ತ್ವಯಾಥಾತ್ಮ್ಯವಿಜ್ಞಾನಾದ್ವಿನಿವೃತ್ತಾವಜ್ಞಾನಬೀಜಸ್ಯ ವಿಚ್ಛೇದ ಆತ್ಮನೋ ಮೋಕ್ಷಸಂಜ್ಞಾ। ವಿಪರ್ಯಯೇ ಚ ಬಂಧಸಂಜ್ಞಾ।' (ಕೇನ. ಭಾ. 3.1.)

ಆತ್ಮನಲ್ಲಿ ಕಾಣುವ ಕರ್ತೃತ್ವ ಭೋಕ್ತೃತ್ವಗಳು ಸ್ವಾಭಾವಿಕಧರ್ಮಗಳಾದರೆ ಎಂದೂ ನಿವೃತ್ತವಾಗಲಾರವು. ಉಪಾಧಿಯ ಸಂಪರ್ಕದಿಂದ ಉಪಾಧಿಯ ಧರ್ಮಗಳೇ (ಅಂತಃಕರಣ ಧರ್ಮಗಳೇ) ಆತ್ಮನಲ್ಲಿ ಕಾಣುತ್ತಿವೆ. ಅವಿದ್ಯೆ ಇರುವ ತನಕ ದುಃಖಾದಿಗಳು ಅನುಭವಗೋಚರವಾಗಿ ಅದರೊಡನೆ ನಿವೃತ್ತವಾಗುತ್ತವೆ-

'ನ ಸ್ವಾಭಾವಿಕಂ ಕರ್ತೃತ್ವಂ ಸಂಭವತ್ಯಾತ್ಮನಃ। ಅನಿರ್ಮೋಕ್ಷ ಪ್ರಸಂಗಾತ್ ... ಕರ್ತೃತ್ವಸ್ಯ ದುಃಖರೂಪತ್ವಾತ್।... ತಸ್ಮಾತ್ ಉಪಾಧಿಧರ್ಮಾಧ್ಯಾಸೇನೈವ ಆತ್ಮನಃ ಕರ್ತೃತ್ವಂ ನ ಸ್ವಾಭಾವಿಕಮ್। ಅವಿದ್ಯಾಪ್ರತ್ಯುಪಸ್ಥಾಪಿತತ್ವಾತ್ ಕರ್ತೃತ್ವಭೋಕ್ತೃತ್ವಯೋಃ। (ಬ್ರ. ಸೂ. ಭಾ. 2.3.40.)

**ಜೀವನ್ಮುಕ್ತಿ**

ಅವಿದ್ಯಾನಿವೃತ್ತಿಯೇ ಮುಕ್ತಿ ಎಂಬ ವಾದವನ್ನು ನಾವು ಈಗಾಗಲೇ ತಿಳಿದ್ದೇವೆ. ಆದರೆ ಆತ್ಮಜ್ಞಾನದಿಂದ ಅವಿದ್ಯೆ ನಿವೃತ್ತವಾದರೂ ಪೂರ್ಣವಾಗಿ ನಿವೃತ್ತವಾಗುವುದಿಲ್ಲ. ಅಲ್ಪಭಾಗವು ಉಳಿದಿರುತ್ತದೆ. ಇದನ್ನೇ ಪ್ರಾರಬ್ಧ ಕರ್ಮೋಪಭೋಗಕಾಲ ಅಥವಾ ಜೀವನ್ಮುಕ್ತ್ಯವಸ್ಥಾ ಎಂದು ವರ್ಣಿಸಲಾಗಿದೆ.

ವಿಮುಕ್ತಾತ್ಮರು ಅವಿದ್ಯಾಲೇಶಾನುವೃತ್ತಿ ಪಕ್ಷವನ್ನು ಸಮರ್ಥಿಸಿದ್ದಾರೆ. ಈ ವಾದವನ್ನು ಒಪ್ಪಿದರೆ, ಜ್ಞಾನಿಗಳ ಗ್ರಂಥರಚನೆ, ಭಿಕ್ಷಾಟನೆ, ಶಿಷ್ಯಸಂಗ್ರಹಾದಿ ವ್ಯವಸ್ಥೆಗಳನ್ನು ಸಮರ್ಥಿಸಲು ಸಾಧ್ಯವಾಗುವುದು. ಇಲ್ಲವಾದರೆ ಉಪದೇಶಿಸುವವರು ಅಪಕ್ವರು. ತತ್ತ್ವಸಾಕ್ಷಾತ್ಕಾರವುಳ್ಳಪಕ್ವರು ಕೂಡಲೇ ಸಂಸಾರದಿಂದ ನಿವೃತ್ತರಾಗುವುರು. ಅಪಕ್ವರ ಉಪದೇಶದ ಬಗ್ಗೆ ಶ್ರದ್ಧೆ ತಳೆಯುವುದು ಹೇಗೆ ? ಇತ್ಯಾದಿ ಪ್ರಶ್ನೆಗಳು ಉದ್ಭವಿಸುತ್ತವೆ. ಆದ್ದರಿಂದ ಜೀವನ್ಮುಕ್ತರನ್ನು ಒಪ್ಪಿ ಪರಂಪರೆಯನ್ನು ನಿರೂಪಿಸುವುದು ಉಚಿತ-

1. **'ಅಜ್ಞಾನಲೇಶೋಽಸ್ತ್ಯೇವ ವಿದುಷೋಽಪಿ ಕಂಚಿತ್‌ಕಾಲಂ ಶರೀರಸ್ಥಿತೇ-ರಿಷ್ಟತ್ವಾತ್। ತಸ್ಯಾಶ್ಚ ಅಜ್ಞಾನಮೂಲ ಭೇದದರ್ಶನಾದಿಸಾಪೇಕ್ಷಾಶನಪಾ-ನಾದ್ಯಪೇಕ್ಷತ್ವಾತ್ ।'** (ಇ.ಸಿ. ಪುಟ. 74)
2. **'ದೃಷ್ಟತತ್ತ್ವಸ್ಯ ಚೇತ್ ತದೈವ ಶರೀರಂ ಪತೇತ್, ತದಾ ಆಚಾರ್ಯಾ-ಭಾವಾತ್ ವಿದ್ಯಾಽಲಾಭಾನ್ಮೋಕ್ಷಾಭಾವಃ'** (ಇ.ಸಿ.ಪುಟ.75)
3. **'... ತಸ್ಮಾತ್ ವಿದುಷೋಽಪಿ ಕಂಚಿತ್‌ಕಾಲಂ ಶರೀರಸ್ಥಿತೇರಭ್ಯುಪೇಯ-ತ್ವಾತ್ ತಾವನ್ಮಾತ್ರಹೇತುರವಿದ್ಯಾಶೇಷಗಂಧೋಽಭ್ಯುಪೇಯಃ'** (ಇ.ಸಿ.ಪುಟ-76)

ಈ ವಾದವನ್ನು ಶ್ರೀಶಂಕರಾಚಾರ್ಯರು ಸರ್ವಜ್ಞಾತ್ಮರು ಅನುಮೋದಿಸಿದ್ದಾರೆ. ಅವರ ಆಶಯ ಹೀಗಿದೆ-

'ಸರಿಯಾದ ಜ್ಞಾನ ಉದಿಸಿದ ನಂತರವೂ 'ತಪ್ಪು ತಿಳುವಳಿಕೆ ಸಂಸ್ಕಾರ ಬಲದಿಂದ ಸ್ವಲ್ಪಕಾಲ ಮುಂದುವರೆಯುತ್ತದೆ. ಜ್ಞಾನಿಯು ಅದ್ವೈತ ತತ್ತ್ವಸಾಕ್ಷಾತ್ಕಾರಾನಂತರ ದೇಹ ಧರಿಸುವನೇ ಅಥವಾ ಇಲ್ಲವೆ? ಎಂಬ ಚರ್ಚೆ ಸಲ್ಲದು. ಅರಿವು ದೇಹಧಾರಣ ಇವೆರಡೂ ಜ್ಞಾನಿಯಲ್ಲಿ ಕಾಣಬರುವಾಗ ಅದನ್ನು ಯಾರು ತಾನೆ ಅಲ್ಲಗಳೆಯಲು ಸಾಧ್ಯವಿದೆ?'

1. **'ಬಾಧಿತಮಪಿ ತು ಮಿಥ್ಯಾಜ್ಞಾನಂ ದ್ವಿಚಂದ್ರಜ್ಞಾನವತ್ ಸಂಸ್ಕಾರವಶಾತ್ ಕಂಚಿತ್ಕಾಲಮನುವರ್ತತ ಏವ। ಅಪಿ ಚ ನೈವಾತ್ರ ವಿವದಿತವ್ಯಮ್ ಬ್ರಹ್ಮವಿದಾ ಕಂಚಿತ್ಕಾಲಂ ಶರೀರಂ ಧ್ರಿಯತೇ ನವಾ ಧ್ರಿಯತ ಇತಿ । ಕಥಂ ಹ್ಯೇಕಸ್ಯ ಸ್ವಹೃದಯಪ್ರತ್ಯಯಂ ಬ್ರಹ್ಮವೇದನಂ ದೇಹಧಾರಣಂ ಚ ಅಪರೇಣ ಪ್ರತಿಕ್ಷೇಪ್ತುಂ ಶಕ್ಯೇತ ?** (ಬ್ರ.ಸೂ.ಭಾ.4. 1. 15)

2. 'ಜೀವನ್ಮುಕ್ತಿಸ್ತಾವದಸ್ತಿ ಪ್ರತೀತೇಃ ದ್ವೈತಚ್ಛಾಯಾ ತತ್ರ ಚಾಸ್ತಿ ಪ್ರತೀತೇಃ।' ದ್ವೈತಚ್ಛಾಯಾರಕ್ಷಣಾಯಾಸ್ತಿ ಲೇಶಸ್ತಸ್ಮಿನ್ನರ್ಥೇ ಸ್ವಾನುಭೂತಿಃ ಪ್ರಮಾಣಮ್ ॥ (ಸಂ.ಶಾ.4.43.)

ಹೀಗೆ ಅದ್ವೈತವೇದಾಂತವು ಅವಿದ್ಯಾನಿವೃತ್ತಿಯೊಂದಿಗೆ ಅಭಿವ್ಯಕ್ತಗೊಳ್ಳುವ ಬ್ರಹ್ಮಭಾವವನ್ನು ಮುಕ್ತಿ ಎಂದು ವಿಶ್ಲೇಷಿಸಿದೆ-

1. '...ನ ಚಾನ್ಯೋ ಬದ್ಧೋऽಸ್ತಿ ಯಸ್ಯ ನಿಗಡನಿವೃತ್ತಿವತ್ ಬಂಧನನಿವೃತ್ತಿರ್ಮೋಕ್ಷಃ ಸ್ಯಾತ್। ಪರಮಾತ್ಮವ್ಯತಿರೇಕೇಣಾನ್ಯಸ್ಯಾಭಾವಂ ವಿಸ್ತರೇಣಾವಾದಿಷ್ಮ। ತಸ್ಮಾದವಿದ್ಯಾನಿವೃತ್ತಿಮಾತ್ರೇ ಮೋಕ್ಷವ್ಯವಹಾರ ಇತಿ ಚಾವೋಚಾಮ। ಯಥಾ ರಜ್ಜ್ವಾದೌ ಸರ್ಪಾದ್ಯಜ್ಞಾನ ನಿವೃತ್ತೌ ಸರ್ಪಾದಿನಿವೃತ್ತಿಃ।' (ಬೃ.ಭಾ.4.4.6.)

## IX ಉಪಸಂಹಾರ

ಹೀಗೆ, ಸನಾತನ ವೇದಗಳಿಗೆ ಉಪನಿಷತ್ತುಗಳಿಗೆ ಪ್ರಾಚೀನರಾದ ಗೌಡಪಾದಾಚಾರ್ಯರೇ ಮೊದಲಾದ ಚಿಂತನಶೀಲರು ನೀಡಿದ ವ್ಯಾಖ್ಯಾನಗಳನ್ನು ಮತ್ತಷ್ಟು ಸ್ಫುಟವಾಗಿ ವಿವರಿಸಿದ ಶ್ರೀಶಂಕರಾಚಾರ್ಯರು ತಮ್ಮ 'ಬ್ರಹ್ಮಾದ್ವೈತವಾದ'ವನ್ನು ಮಂಡಿಸಿದ್ದಾರೆ. ವಿಶ್ವಪ್ರಸಿದ್ಧವೂ ಅಪಾರಸಂಖ್ಯೆಯ ಅನುಯಾಯಿಗಳನ್ನು ಹೊಂದಿದ ಶಾಂಕರದರ್ಶನ ಪರಂಪರೆಯು ದೇಶ-ವಿದೇಶಗಳಲ್ಲಿ ವ್ಯಾಪ್ತವಾಗಿದೆ. ಈ ಸಂಪ್ರದಾಯ-ಪರಂಪರೆಗಳು ವಿಶ್ವವಿಖ್ಯಾತ ವಿದ್ವಾಂಸರನ್ನು ಮತ್ತು ತಪಸ್ವಿಗಳಾದ ಸಮಾಜದ ಡೊಂಕತಿದ್ದಿ ಮೆರೆದ ಶ್ರೀವಿದ್ಯಾರಣ್ಯರಂತಹ ಅನೇಕ ಸಂತರನ್ನು ನೀಡಿದೆ. ಸತ್ಯಶೋಧನೆಯ ದೃಷ್ಟಿಯಿಂದ ಅದ್ವೈತ ಕೊಡುಗೆ ಅವಿಸ್ಮರಣೀಯವಾದುದು. ಬೌದ್ಧ-ಜೈನ ಮೊದಲಾದ ಅವೈದಿಕದರ್ಶನಗಳ ಮತ್ತು ವೈದಿಕವೆನಿಸಿದ ಸಾಂಖ್ಯ-ಯೋಗ-ನ್ಯಾಯ-ವೈಶೇಷಿಕದರ್ಶನಗಳ ಅಸಾರತೆಯನ್ನು ಮನಗಾಣಿಸುವುದರ ಜೊತೆಗೆ ಉಪನಿಷತ್ತಿನ ಸಂದೇಶಗಳನ್ನು ತಮ್ಮ ಸುಂದರ -ಸರಳ ಭಾಷೆಯ ಮೂಲಕ ಶ್ರೀಶಂಕರಾಚಾರ್ಯರು ಅಭಿವ್ಯಕ್ತಿಗೊಳಿಸಿದರು. ಬುದ್ಧಿಜೀವಿಗಳು, ಇತರದಾರ್ಶನಿಕರು ಅದ್ವೈತ ದರ್ಶನದ ಬಗ್ಗೆ ಭಿನ್ನ ನಿಲುವು ತಾಳಿರಬಹುದಾದರೂ ಶ್ರೀಶಂಕರಾಚಾರ್ಯರ

ಸಾಧನೆ-ಸತ್ಯಶೋಧನ ಪ್ರಯತ್ನಗಳನ್ನು ಗೌರವಿಸದಿರಲಾಗದು. ಈ ಹಿನ್ನೆಲೆಯಲ್ಲಿ ಪ್ರತಿಯೊಂದು ದರ್ಶನವು ತನ್ನದೇ ಆದ ವೈಚಾರಿಕತೆಯನ್ನು ಹೊಂದಿ ಗೌರವಾರ್ಹವೆನಿಸುವುದು. ಒಟ್ಟಾರೆ ಅದ್ವೈತದರ್ಶನವು, ವೇದ ಉಪನಿಷತ್ತುಗಳಲ್ಲಿರುವ, ಆದರೆ ಸಾಂಖ್ಯರು-ಮೀಮಾಂಸಕರು ಮರೆತ ಬ್ರಹ್ಮಸ್ವರೂಪದ ಬಗ್ಗೆ ವಿನೂತನವಾದ ವಿಶ್ಲೇಷಣೆ ನೀಡಿರುವುದು ದರ್ಶನ ಕ್ಷೇತ್ರದಲ್ಲಿ ಸದಾ ಗೌರವಾರ್ಹ ಸಂಗತಿಯಾಗಿದೆ.

0-0-0

# ವಿಶಿಷ್ಟಾದ್ವೈತದರ್ಶನ

## I. ದರ್ಶನಸಾರ

### ಪರಂಪರೆ

ವೇದ-ಉಪನಿಷತ್ತುಗಳು, ಪಾಂಚರಾತ್ರಾಗಮಗಳು, ಪುರಾಣಗಳನ್ನು ಬಳಸಿಕೊಂಡು ಹಿಮಾಲಯದಂತೆ ಬೆಳೆದು ನಿಂತ ವಿಶಿಷ್ಟಾದ್ವೈತಸಿದ್ಧಾಂತವು ವಿಷ್ಣುಭಕ್ತಿಯನ್ನು ಎಲ್ಲೆಡೆ ಬಿತ್ತರಿಸಿದ ಶ್ರೇಷ್ಠ ಸಿದ್ಧಾಂತವಾಗಿದೆ. ಹಲವು ಸಾವಿರ ವರ್ಷಗಳ ಸಂಸ್ಕೃತ ವಾಙ್ಮಯಕೃತಿಗಳು ಹಾಗೂ ಪ್ರಾಕೃತಪ್ರಬಂಧಗಳ ಹಿನ್ನೆಲೆಯುಳ್ಳ ಈ ಸಿದ್ಧಾಂತವು ಪಂಡಿತರು ಹಾಗೂ ಜನಸಾಮಾನ್ಯರಿಗೆ ಆಕರ್ಷಣೆಯನ್ನು ಮೂಡಿಸುತ್ತದೆ. ಈ ಸಿದ್ಧಾಂತವನ್ನು ಜಗತ್ತಿಗೆ ವಿಶಿಷ್ಟ ರೀತಿಯಿಂದ ಮಂಡಿಸಿದ ಭಗವದ್ರಾಮಾನುಜರ ತಾಳ್ಮೆ-ಪ್ರತಿಭೆ-ಹೃದಯ ವೈಶಾಲ್ಯಗಳು ವರ್ಣನಾತೀತವಾಗಿವೆ. ಉಚ್ಚವರ್ಗದಿಂದ ಆರಂಭಗೊಂಡು ಕೆಳಸ್ತರದವರೆಗಿನ ಎಲ್ಲ ಸಾಧಕರನ್ನು ವಿಷ್ಣುಭಕ್ತಿಯ ಅಡಿಯಲ್ಲಿ ಒಗ್ಗೂಡಿಸುವ ಮಹತ್ವಪೂರ್ಣಕಾರ್ಯವನ್ನು ಅವರು ನೆರವೇರಿಸಿದರು. ಭಗವದ್ರಾಮಾನುಜಾಚಾರ್ಯರು ತಮ್ಮ ಕೃತಿಗಳಿಗೆ ಸ್ಫೂರ್ತಿ ನೀಡಿದ ಪ್ರಾಚೀನ ವೃತ್ತಿಕಾರರು ಹಾಗೂ ವ್ಯಾಖ್ಯಾನಕಾರರನ್ನು ಪರಮಾದರದಿಂದ ಸ್ಮರಿಸಿದ್ದಾರೆ- 'ಬೋಧಾಯನರು-ಟಂಕ-ದ್ರಮಿಡ-ಗುಹದೇವ- ಕಪರ್ದಿ-ಭಾರುಚಿ ಮೊದಲಾದ ಅನೇಕ ಪರಿಶುದ್ಧಚಿಂತಕರ ವ್ಯಾಖ್ಯಾನಗಳಲ್ಲಿ ಸ್ಫುಟವಾದ ವಿಷಯಗಳನ್ನು ನಿಮ್ಮ ಮುಂದೆ ಮಂಡಿಸಿದ್ದೇನೆ'-

**'ಭಗವದ್ಬೋಧಾಯನ-ಟಂಕ-ದ್ರಮಿಡ-ಗುಹದೇವ-ಕಪರ್ದಿ-ಭಾರುಚಿ-ಪ್ರಭೃತ್ಯವಿಗೀತಶಿಷ್ಟಪರಿಗೃಹೀತಪುರಾತನವೇದವೇದಾಂತವ್ಯಾಖ್ಯಾನ-ಸುವ್ಯಕ್ತಾರ್ಥಶ್ರುತಿನಿಕರನಿದರ್ಶಿತೋಽಯಂ ಪಂಥಾಃ ।'**

(ವೇ.ಸಂ.ಪು. 100)

ತಮ್ಮ ಶ್ರೀಭಾಷ್ಯದಲ್ಲಿ ಭಗವದ್ರಾಮಾನುಜರು ಹೀಗೆ ಸಂದೇಶಿಸಿದ್ದಾರೆ- 'ಪೂಜ್ಯರಾದ ಬೋಧಾಯನರು ರಚಿಸಿದ ಬ್ರಹ್ಮಸೂತ್ರವೃತ್ತಿಗ್ರಂಥವನ್ನು ಬಹಳ ಜನ ವಿದ್ವಾಂಸರು ಬಳಸಿಕೊಳ್ಳಲಿಲ್ಲ. ಬಾದರಾಯಣರ ಸೂತ್ರಾರ್ಥ

ವನ್ನು ಅರಿಯುವಲ್ಲಿ ಅದು ತುಂಬ ಉಪಕಾರಿಯಾಗಿದೆ. ಅದನ್ನು ಬಳಸಿಕೊಂಡು ನಾವು ಸೂತ್ರವ್ಯಾಖ್ಯಾನವನ್ನು ಮಾಡುತ್ತೇವೆ'-

**'ಭಗವದ್ಬೋಧಾಯನಕೃತಾಂ ಬ್ರಹ್ಮಸೂತ್ರವೃತ್ತಿಂ ಪೂರ್ವಾಚಾರ್ಯಾಃ ಸಂಚಿಕ್ಷಿಪುಃ । ಅತಃ ತನ್ಮತಾನುಸಾರೇಣ ಸೂತ್ರಾಕ್ಷರಾಣಿ ವ್ಯಾಖ್ಯಾಸ್ಯಂತೇ ।'**

(ಶ್ರೀಭಾಷ್ಯ 1-1-1)

ಭಗವದ್ರಾಮಾನುಜರ ಚಿಂತನೆಯನ್ನು ಸಂಕ್ಷೇಪವಾಗಿ ಹೀಗೆ ವಿವರಿಸಬಹುದಾಗಿದೆ-

**ಯಾವ ಶ್ರುತಿಯೂ ಗೌಣವಲ್ಲ**

ವೇದಗಳು ವರ್ಣಿಸುವ ಎಲ್ಲ ಸಂಗತಿಗಳೂ ಸಾರ್ವಕಾಲಿಕ ಸತ್ಯವಾಗಿದ್ದಾವೆ. ಒಂದು ಶ್ರುತಿಯನ್ನು ಪ್ರಧಾನವೆಂದು ಪರಿಗಣಿಸಿ ಮತ್ತೊಂದು ಶ್ರುತಿಯನ್ನು ಗೌಣವೆಂದು ವ್ಯಾಖ್ಯಾನ ಮಾಡುವ ಆವಶ್ಯಕತೆ ಇರುವುದಿಲ್ಲ. ಎಲ್ಲ ಶ್ರುತಿಗಳಲ್ಲಿಯೂ ಏಕವಾಕ್ಯತೆಯನ್ನು ಗ್ರಹಿಸುವ ಚಿಂತನಪದ್ಧತಿಯನ್ನು ನಾವಿಲ್ಲಿ ಅಳವಡಿಸಬಹುದಾಗಿದೆ- **'ಅವಿಕಾರಃ ಅಕ್ಷರಶ್ಶುದ್ಧಃ'** ಮೊದಲಾದ ಶ್ರುತಿಗಳು ಪರಬ್ರಹ್ಮನ ಮೂಲಸ್ವರೂಪದಲ್ಲಿ ಪರಿಣಾಮವಿಲ್ಲವೆಂದು ನಿರೂಪಿಸುತ್ತಿವೆ. **'ನಿರ್ಗುಣಃ ಕೇವಲಶ್ಚ'** ಇತ್ಯಾದಿ ಶ್ರುತಿಗಳು ಪರಮಾತ್ಮನಲ್ಲಿ ವಿಕಾರದ ಸಂಪರ್ಕವುಳ್ಳ ಗುಣಗಳಿಲ್ಲವೆಂದು ಬಣ್ಣಿಸುತ್ತಿವೆ. **'ಏಕಮೇವ ಅದ್ವಿತೀಯಂ'** ಇತ್ಯಾದಿ ಶ್ರುತಿಗಳು ಇದೆಲ್ಲ ಚೇತನಾಚೇತನಾತ್ಮಕ ವಿಶ್ವವು ಪರಮಾತ್ಮನ ಶರೀರವಾಗಿದೆ ಎಂದು ನಿರೂಪಿಸುತ್ತಿವೆ. ಚೇತನ ಹಾಗೂ ಅಚೇತನರು ಭಗವಂತನ ಶರೀರಸ್ಥಾನದಲ್ಲಿದ್ದು 'ಪ್ರಕಾರ' ಎನಿಸಿದರೆ ಆತ್ಮಸ್ಥಾನೀಯನಾದ ಪರಮಾತ್ಮನು 'ಪ್ರಕಾರಿ' ಎನಿಸುವನು. **'ಸರ್ವಸ್ಯೇಶಾನಃ ಸತ್ಯಕಾಮಃ ಸತ್ಯಸಂಕಲ್ಪಃ'** ಇತ್ಯಾದಿವಾಕ್ಯಗಳು ವರ್ಣಿಸುವಂತೆ ಪರಮಾತ್ಮನಲ್ಲಿ ಅಪಾರ ಗುಣಗಳಿರುವ ಹಿನ್ನೆಲೆಯಲ್ಲಿ ಇಂತಹ ಶ್ರುತಿತತಿಗಳೂ ಪ್ರಾಮಾಣಿಕವಾಗಿವೆ. **'ವಿಜ್ಞಾನಮಾನಂದಂ ಬ್ರಹ್ಮ'** ಇತ್ಯಾದಿ ಶ್ರುತಿಯು ಬ್ರಹ್ಮನೇ ವಿಜ್ಞಾನವೆಂದು ಸಾರುತ್ತಿದೆ. **'ತತ್ತ್ವಮಸಿ'** ಮೊದಲಾದ ಅಭೇದವನ್ನು ತಿಳಿಸುವ ವಾಕ್ಯಗಳು ಶರೀರ-ಶರೀರಿಭಾವದ ಮೂಲಕ ವಿಶ್ವಕ್ಕೂ ಪರಮಾತ್ಮನಿಗೂ ಇರುವ ನಿಕಟ ಸಂಬಂಧವನ್ನು ಬೋಧಿಸುತ್ತಿವೆ. ಈ ಹಿನ್ನೆಲೆಯಲ್ಲಿ ಇಲ್ಲಿನ ಸಾಮಾನಾಧಿಕರಣ್ಯವ್ಯಪದೇಶವು (ಸಮಾನವಿಭಕ್ತಿಕವಾದ ಪದಗಳ ಪ್ರಯೋಗವು) ಮುಖ್ಯಾರ್ಥವನ್ನೇ ಸಂರಕ್ಷಿಸಿಕೊಂಡಿದೆ.

'ಅವಿಕಾರಶ್ರುತಯಃ ಸ್ವರೂಪಪರಿಣಾಮಪರಿಹಾರಾದೇವ ಮುಖ್ಯಾರ್ಥಾಃ। ನಿರ್ಗುಣವಾದಾಶ್ಚ ಪ್ರಾಕೃತಹೇಯಗುಣನಿಷೇಧವಿಷಯತಯಾ ವ್ಯವಸ್ಥಿತಾಃ । ನಾನಾತ್ವನಿಷೇಧವಾದಾಶ್ಚ ಏಕಸ್ಯೈವ ಬ್ರಹ್ಮಣಃ ಶರೀರತಯಾ ಪ್ರಕಾರಭೂತಂ ಸರ್ವಂ ಚೇತನಾಚೇತನಂ ವಸ್ತ್ವಿತಿ ಸರ್ವಸ್ಯಾತ್ಮತಯಾ ಸರ್ವಪ್ರಕಾರಂ ಬ್ರಹ್ಮೈವ ಅವಸ್ಥಿತಂ ಇತಿ ಸುರಕ್ಷಿತಾಃ । ಸರ್ವವಿಲಕ್ಷಣತ್ವಪತಿತ್ವೇಶ್ವರತ್ವಕಲ್ಯಾಣ-ಗುಣಾಕಾರತ್ವ-ಸತ್ಯಕಾಮತ್ವ-ಸತ್ಯಸಂಕಲ್ಪಾದಿವಾಕ್ಯಂ ತದಭ್ಯುಪಗಮಾದೇವ ಸುರಕ್ಷಿತಂ ।

ಜ್ಞಾನಾನಂದಮಾತ್ರವಾದಿ ಚ .... ಪರಸ್ಯ ಬ್ರಹ್ಮಣಃ ಸ್ವರೂಪನಿರೂಪಕ-ಧರ್ಮಃ ಮಲಪ್ರತ್ಯನೀಕಾನಂದರೂಪಜ್ಞಾನಮೇವೇತಿ, ಸ್ವಪ್ರಕಾಶತಯಾ ಸ್ವರೂಪಮಪಿ ಜ್ಞಾನಮೇವೇತಿ ಚ ಪ್ರತಿಪಾದನಾತ್ ಅನುಪಾಲಿತಂ । ಐಕ್ಯ-ವಾದಾಶ್ಚ ಶರೀರಾತ್ಮಭಾವೇನ ಸಾಮಾನಾಧಿಕರಣ್ಯಮುಖ್ಯಾರ್ಥತೋಪ-ಪಾದನಾದೇವ ಸುರಕ್ಷಿತಾಃ । (ವೇ.ಸಂ.ಪು. 89)

ಪರಮಾತ್ಮನು ಈ ವಿಶ್ವಕ್ಕೆ ನಿಮಿತ್ತಕಾರಣನೆಂದು 'ತದೈಕ್ಷತ', 'ಸೋಽ-ಕಾಮಯತ' ಇತ್ಯಾದಿಶುತ್ರಿಗಳು ವರ್ಣಿಸುತ್ತಿವೆ. ಇದರಂತೆ 'ಸರ್ವಂ ಖಲ್ವಿದಂ ಬ್ರಹ್ಮ', 'ಯಥಾ ಹ್ಯೇಕೇನ ಮೃತ್ಪಿಂಡೇನ' ಇತ್ಯಾದಿವಾಕ್ಯಗಳು ಪರಮಾತ್ಮನು ವಿಶ್ವಕ್ಕೆ ಉಪಾದಾನ ಕಾರಣನೆಂದೂ ವರ್ಣಿಸುತ್ತಿವೆ. ಇದರಲ್ಲಿ ಒಂದನ್ನು ಮಾತ್ರವೇ ಸಮಂಜಸವೆನ್ನುವುದು ಸೂಕ್ತವಾಗಲಾರದು. ಎರಡು ಶ್ರುತಿ ಗಳನ್ನೂ ಸಮನ್ವಯದೃಷ್ಟಿಯಿಂದ ಕಾಣಬೇಕು- 'ಪರಮಾತ್ಮನು ಚೇತನ ಹಾಗೂ ಅಚೇತನಗಳನ್ನು ಒಳಗೊಂಡ ಈ ವಿಶ್ವದ ಆತ್ಮಸ್ಥಾನೀಯನಾಗಿದ್ದಾನೆ. ಚೇತನ ಹಾಗೂ ಅಚೇತನಗಳು ಅವನಿಗೆ ಶರೀರದಂತಿವೆ. ಪರಮಾತ್ಮನು ಕೆಲವೊಮ್ಮೆ ನಾಮರೂಪಾತ್ಮಕ ವಿಶ್ವವನ್ನು ಕಾಣದಂತೆ ತನ್ನೊಳಗೆ ಇರಿಸಿ ಕೊಳ್ಳುವನೋ ಆಗ ಅವನು ಅದ್ವಿತೀಯನಾಗಿ ನಿಮಿತ್ತಕಾರಣನೆನಿಸುವನು. ತಾನು ಸೃಷ್ಟಿ ಮಾಡಿದ ವಸ್ತುಗಳೊಡನೆ ಸೇರಿಕೊಂಡಾಗ ಅವನೇ ಕಾರ್ಯನೂ ಆಗುವನು.

'ಸರ್ವಚಿದಚಿದ್ವಸ್ತುಶರೀರತಯಾ ಸರ್ವದಾ ಸರ್ವಾತ್ಮಭೂತಂ ಪರಂ ಬ್ರಹ್ಮ ಕದಾಚಿತ್ ವಿಭಕ್ತನಾಮರೂಪಂ ಕದಾಚಿಚ್ಚ ಅವಿಭಕ್ತನಾಮರೂಪಮ್ ; ಯದಾ ವಿಭಕ್ತನಾಮರೂಪಂ ತದಾ ತದೇವ ಬಹುತ್ವೇನ ಕಾರ್ಯತ್ವೇನ ಚೋಚ್ಯತೇ ;

**ಯದಾ ಚ ಅವಿಭಕ್ತನಾಮರೂಪಂ ತದೈಕಮದ್ವಿತೀಯಂ ಕಾರಣಮಿತಿ ಚ ।**

(ಶ್ರೀ.ಭಾ. 1-4-23)

**ವರದರಾಜನ ಸಂದೇಶ**

ಭಗವದ್ರಾಮಾನುಜರು ಶುದ್ಧತತ್ತ್ವಜ್ಞಾನಕ್ಕಾಗಿ ಅನೇಕ ಗುರುಗಳನ್ನು ಆಶ್ರಯಿಸಿದರು. ಅವರ ಜ್ಞಾನದ ಮೇಲಣ ಪ್ರೀತಿ- ಆದರಗಳು ಅವರ್ಣನೀಯ. ಅಂತಿಮವಾಗಿ ಕಾಂಚೀಪೂರ್ಣರ ಮೂಲಕ ವರದರಾಜನ ಬಳಿ ತತ್ತ್ವರಹಸ್ಯಗಳ ಅರಿವಿಗಾಗಿ ಪ್ರಾರ್ಥನೆ ಮುಂದಿಟ್ಟರು. ವರದರಾಜ ಕಾಂಚೀಪೂರ್ಣರ ಮೂಲಕವೇ ಭಗವದ್ರಾಮಾನುಜರಿಗೆ ತತ್ತ್ವರಹಸ್ಯಗಳನ್ನು ಅರುಹಿದ. ಅವು ಹೀಗಿವೆ-

1. ನಾರಾಯಣನೇ ಸರ್ವೋತ್ತಮ ದೇವತೆ.
2. ಜೀವ ಮತ್ತು ಪರಮಾತ್ಮರಲ್ಲಿರುವ ಭೇದವು ಪಾರಮಾರ್ಥಿಕವಾಗಿದೆ.
3. ಮುಕ್ತಿಯನ್ನು ಬಯಸುವ ಸಾಧಕರಿಗೆ ಪ್ರಪತ್ತಿಯು ಸರಳವೂ, ಪ್ರಧಾನವೂ ಆದ ಉಪಾಯವಾಗಿದೆ.
4. ಭಕ್ತರಿಗೆ ಅಂತ್ಯಕಾಲದಲ್ಲಿ ಹರಿಸ್ಮೃತಿ ಇರಲೇಬೇಕೆಂಬ ನಿರ್ಬಂಧವಿಲ್ಲ.
5. ಪ್ರಪತ್ತಿಮಾರ್ಗವನ್ನು ಅವಲಂಬಿಸಿದವರಿಗೆ ಈ ದೇಹವನ್ನು ತೊರೆದ ಕೂಡಲೆಯೇ ಮುಕ್ತಿಯನ್ನು ಕರುಣಿಸುತ್ತೇನೆ.
6. ಮಹಾತ್ಮರಾದ ಕಾಂಚೀಪೂರ್ಣರನ್ನು ಗುರುವಾಗಿ ಆರಾಧಿಸಿ.

**'ಅಹಮೇವ ಪರಂ ತತ್ತ್ವಂ ಜಗತ್ಕಾರಣಕಾರಣಮ್ ।**
**ಕ್ಷೇತ್ರಜ್ಞೇಶ್ವರಯೋರ್ಭೇದಃ ಸಿದ್ಧ ಏವ ಮಹಾಮತೇ ॥**
**ಮೋಕ್ಷೋಪಾಯೋ ನ್ಯಾಸ ಏವ ಜನಾನಾಂ ಮುಕ್ತಿಮಿಚ್ಛತಾಮ್ ।**
**ಮದ್ಭಕ್ತಾನಾಂ ಜನಾನಾಂ ಚ ನಾಂತಿಮಸ್ಮೃತಿರಿಷ್ಯತೇ ॥**
**ದೇಹಾವಸಾನೇ ಭಕ್ತಾನಾಂ ದದಾಮಿ ಪರಮಂ ಪದಮ್ ।**
**ಪೂರ್ಣಾಚಾರ್ಯಮಹಾತ್ಮಾನಂ ಸಮಾಶ್ರಯ ಗುಣಾಶ್ರಯಮ್ ॥'**

ವಿಶಿಷ್ಟಾದ್ವೈತ ಸಿದ್ಧಾಂತದ ಪ್ರಕಾರ ಮಂಗಲಗುಣಗಳ ತಾಣನಾದ ಪರಮಾತ್ಮನ ಅಂಶರೇ ಜೀವರೆನಿಸಿದ್ದಾರೆ. ಪರಮಾತ್ಮನ ಸೇವೆಗಾಗಿ ಮೈದಳೆದ ಈ ಜೀವರನ್ನು ಶೇಷರೆಂದು ಕೈಂಕರ್ಯವನ್ನು ಸ್ವೀಕರಿಸುವ ಪರಮಾತ್ಮನನ್ನು ಶೇಷಿ ಎಂದು ವರ್ಣಿಸಲಾಗಿದೆ. ಜೀವರಲ್ಲಿ ಕಾಣುವ ಭೇದವು ಕರ್ಮನಿಮಿತ್ತ ವಾಗಿದೆ. ದೇವತೆಗಳು, ಋಷಿಗಳು, ಮಾನವರು, ದಾನವರು ಇತ್ಯಾದಿ

ಭೇದಗಳು ಅವರವರ ಕರ್ಮದ ಹಿನ್ನೆಲೆಯಲ್ಲಿ ಕಾಣಬರುತ್ತವೆ. ವಾಸ್ತವದಲ್ಲಿ ಎಲ್ಲ ಜೀವರು ಅಣುಸ್ವರೂಪರು ಹಾಗೂ ಸಮಾನವಾದ ಆನಂದವನ್ನು ಮುಕ್ತಿಯಲ್ಲಿ ಅನುಭವಿಸುತ್ತಾರೆ. ಎಲ್ಲ ಜೀವರಲ್ಲೂ ಸಮಾನವಾದ ಆನಂದವನ್ನು ಒಪ್ಪಿದ ಹೆಗ್ಗಳಿಕೆ ಈ ಸಿದ್ಧಾಂತಕ್ಕಿದೆ. ಅನಾದಿ ಬಂಧನದಲ್ಲಿ ಸಿಲುಕಿದ ಜೀವರಾಶಿಗಳು ಭಕ್ತಿ ಹಾಗೂ ಪ್ರಪತ್ತಿ ಎಂಬ ಎರಡು ಸ್ವತಂತ್ರ ಮಾರ್ಗಗಳಲ್ಲಿ ಒಂದನ್ನು ಆಯ್ಕೆ ಮಾಡಿ ಪರಮಾತ್ಮನನ್ನು ಪಡೆಯಬಹುದಾಗಿದೆ. ಭಕ್ತಿಮಾರ್ಗವು ತ್ರೈವರ್ಣಿಕರಿಗೆ ಸೀಮಿತವಾದರೆ, ಪ್ರಪತ್ತಿಮಾರ್ಗವು ಎಲ್ಲರನ್ನೂ ಆಕರ್ಷಿಸುವ ಸರಳ ಸಾಧನವಾಗಿದೆ. ಭಗವಂತನ ಮಹಿಮೆಯನ್ನು ಅರಿತು ಅವನಿಗೆ ಅನನ್ಯ ಪ್ರೀತಿಯಿಂದ ಶರಣಾಗತನಾಗುವುದೇ ಭಕ್ತನ ಕರ್ತವ್ಯವಾಗಿದೆ. ಇಂತಹ ಶರಣಾಗತಿಯನ್ನೇ ಶಾಸ್ತ್ರಗಳು ಪ್ರಪತ್ತಿ ಎಂದು ಕರೆದಿದ್ದಾವೆ. ಇದು ಉತ್ತಮರಿಗೆ ಭಕ್ತಿಮಾರ್ಗಕ್ಕೆ ಸೋಪಾನವಾದರೆ, ಸಾಮಾನ್ಯ ಮಾನವರಿಗೆ ಭಗವಂತನನ್ನು ತಲುಪಲು ಅನನ್ಯವಾದ ಸರಳೋಪಾಯವಾಗಿದೆ. ಒಮ್ಮೆ ಈ ಪ್ರಪತ್ತಿಮಾರ್ಗವನ್ನು ಅವಲಂಬಿಸಿದ ಭಕ್ತನು ಪ್ರಾರಬ್ಧಕರ್ಮದ ಬಂಧನಕ್ಕೆ ಸಿಲುಕುವುದಿಲ್ಲ. ಪ್ರಪನ್ನನಾದ ಭಕ್ತನನ್ನು ಪರಮಾತ್ಮನು ಪ್ರಾರಬ್ಧಕರ್ಮದ ಉಪಭೋಗವಿಲ್ಲದಂತೆ ಅನುಗ್ರಹಿಸಿ ಬ್ರಹ್ಮಾನಂದದ ಅನುಭವವನ್ನು ಕರುಣಿಸುವನು. ಸಂಸಾರಾವಸ್ಥೆಯಲ್ಲಿ ಸುಪ್ತವಾದ ಜೀವರ ಸ್ವಾಭಾವಿಕ ಗುಣಗಳು ಭಕ್ತಿಯೋಗ ಅಥವಾ ಪ್ರಪತ್ತಿಯೋಗಗಳಿಂದ ಜಾಗೃತಗೊಂಡು ಬ್ರಹ್ಮಾನಂದದ ಅನುಭವದಲ್ಲಿ ಪರ್ಯವಸಾನಗೊಳ್ಳುತ್ತವೆ. ಕರ್ಮ- ಯೋಗವು ಮನಸ್ಸಿನ ಕೊಳೆಯನ್ನು ಕಳೆದು ನಿರ್ಮಲ ಜ್ಞಾನದ ಅಭಿವೃದ್ಧಿಗೆ ಕಾರಣವಾಗಿದೆ. ಇದಿಷ್ಟು ರಾಮಾನುಜದರ್ಶನದ ಮುಖ್ಯಾಂಶಗಳ ಕಿರಿದಾದ ಪರಿಚಯ.

## II. ಪ್ರಮುಖ ಕೃತಿಕಾರರು

### ಆಳ್ವಾರರು

ವಿಶಿಷ್ಟಾದ್ವೈತಸಿದ್ಧಾಂತದ ತತ್ವನಿರೂಪಣೆಗೆ ವೇದ-ಪಂಚರಾತ್ರಗಳು ಮೂಲವಾಗಿರುವಂತೆ, ಭಗವಂತನನ್ನು ಕಂಡ ಸಂತ ಮಹಾಂತರ (ಆಳ್ವಾರರುಗಳ) ಪಾಶುರಗಳೂ (ದ್ರಾವಿಡಪ್ರಬಂಧಗಳು) ಮೂಲಾಧಾರವಾಗಿದ್ದಾವೆ. ವಿಶಿಷ್ಟಾದ್ವೈತ ಸಂಪ್ರದಾಯವು ಪ್ರಮುಖವಾಗಿ ಹನ್ನೆರಡು ಜನ ಸಂತರನ್ನು ದಾಖಲಿಸುತ್ತದೆ. ಇವರ ವಿಚಾರಧಾರೆಗಳನ್ನು ದ್ರಾವಿಡವೇದವೆಂದೇ ಗೌರವಿಸಲಾಗಿದೆ. ಈ ಪರಂಪರೆ 3000 ವರ್ಷಗಳ ಭವ್ಯ ಹಿನ್ನೆಲೆಯನ್ನು

ಪಡೆದಿದೆ. ವೇದ-ಪಂಚರಾತ್ರಗಳೊಡನೆ ಈ ದ್ರಾವಿಡಪ್ರಬಂಧಗಳನ್ನೂ ಗಮನದಲ್ಲಿರಿಸಿಕೊಂಡು ವಿಶಿಷ್ಟಾದ್ವೈತಸಿದ್ಧಾಂತವನ್ನು 8ನೆಯ ಶತಕದಿಂದ ಹೆಮ್ಮರವಾಗಿ ಬೆಳೆಸಲಾಯಿತು. ಆಳ್ವಾರರುಗಳ ಕಿರು ಪರಿಚಯ ಹೀಗಿದೆ-

**1. ಪೊಯ್ ಹೈ ಆಳ್ವಾರರು**

ಪುಣ್ಯಕ್ಷೇತ್ರ ಕಾಂಚಿಯಲ್ಲಿ ಅವತರಿಸಿದ ಇವರು ಪಾಂಚಜನ್ಯಾಂಶಸಂಭೂತರೆಂದು ಪ್ರಸಿದ್ಧಿ ಇದೆ. ಇವರು ಮಹಾ ತಪಸ್ವಿಗಳು.

**2. ಪೊದತ್ತಾಳ್ವಾರ್**

ಮಹಾಬಲಿಪುರದಲ್ಲಿ ಅವತರಿಸಿದ ಇವರು ಭಗವಂತನ ಕೌಮೋದಕೀ ಎಂಬ ಗದಾಂಶಸಂಭೂತರು.

**3. ಪೇಯಾಳ್ವಾರ್**

ತಿರುವಲ್ಲಿಕೇಣಿ ದಕ್ಷಿಣಭಾಗದಲ್ಲಿನ ಮಯಿಲೈ ಮಾನನಗರಿಯ ಜಲಾಶಯದಲ್ಲಿ ಅವತರಿಸಿದ ಇವರು ಪರಮಾತ್ಮನ ನಂದಕ ಆಯುಧದ ಅಂಶಸಂಭೂತರು. ಅಪ್ರತಿಮ ಭಕ್ತರು. ಈ ಮೂವರು ಆಳ್ವಾರರುಗಳು ಸತ್ವ-ರಜಸ್-ತಮೋಗುಣಗಳ ವಿಕಾರವನ್ನು ಮೆಟ್ಟಿದವರು.

**4. ತಿರುಮಳಿಶೈಪಿರಾನ್ ಆಳ್ವಾರ್**

ಮಹೀಸಾರಕ್ಷೇತ್ರದಲ್ಲಿ ತಪಗೈಯುತ್ತಿದ್ದ ಭಾರ್ಗವಋಷಿಗಳ ಕುಮಾರರೆನಿಸಿದ ಈ ಅಳ್ವಾರರು ಸುದರ್ಶನಾಂಶಸಂಭೂತರು. ಬಾಲ ಸೂರ್ಯನಂತೆ ಮಹಾತೇಜಸ್ವಿಗಳು.

**5. ನಮ್ಮಾಳ್ವಾರ್**

ಆಳ್ವಾರರುಗಳ ಪರಂಪರೆಯಲ್ಲಿ ವಿಶಿಷ್ಟ ವೈಭವವನ್ನು ಪಡೆದ ಇವರು ತಾಮ್ರಪರ್ಣೀ ನದೀತೀರದಲ್ಲಿ ಅವತರಿಸಿದರು. ಇವರಿಗೆ ಜನ್ಮ ನೀಡಿದ ಪಟ್ಟಣದ ಹೆಸರು ತಿರುನಗರಿ. ಇವರು ಪರಮಾತ್ಮನ ಕೌಸ್ತುಭ ಹಾಗೂ ವಿಷ್ವಕ್ಸೇನರ ಅಂಶರೆಂದು ಪ್ರಸಿದ್ಧರಾಗಿದ್ದಾರೆ. ಹುಟ್ಟಿದಾಗ ಅಳು-ಹಸಿವುಗಳ ವಿಕಾರ ತೋರದ ಇವರ ವ್ಯಕ್ತಿತ್ವ ಅಗಾಧವಾದುದು. ಹುಟ್ಟಿದ ಮಗುವಿಗೆ ಅಂಟಬಹುದಾದ ವಿಕಾರಗಳನ್ನು ಹೊಡೆದೋಡಿಸಿದ ಕಾರಣದಿಂದ ಇವರು 'ಶಠಕೋಪ'ರೆನಿಸಿದರು. ಕಲಿಯುಗ ಹುಟ್ಟಿದ 43ನೆಯ ದಿನ ಇವರು ಅವತರಿಸಿದರು.

**6. ಕುಲಶೇಖರ ಆಳ್ವಾರರು**

ರಾಜಕುಮಾರನಾಗಿ ಜನಿಸಿದ ಇವರು ಪರದೈವ ವಿಷ್ಣುವಿನ ಆರಾಧನೆಯಲ್ಲಿ ನಿರಂತರ ಕಾಲವನ್ನು ಕಳೆದವರು. ಭಕ್ತಿ-ವಿರಕ್ತಿಗಳು ಇವರ ಹೃದಯದಲ್ಲಿ ಭದ್ರವಾಗಿ ತಳವೂರಿದ್ದವು. ಇವರು ರಚಿಸಿದ ಮುಕುಂದಮಾಲಾ ಸ್ತೋತ್ರವು ಭಕ್ತಿಯ ಕೈಗನ್ನಡಿಯಂತಿದೆ.

**7. ಪೆರಿಯಾಳ್ವಾರ್**

ವಿಲ್ಲಿಪುತ್ತೂರಿನಲ್ಲಿ ಜನನ. ಪುಷ್ಪಮಾಲಿಕೆ ಕಟ್ಟಿ ಹರಿಕೈಂಕರ್ಯ. ಪಾಂಡ್ಯ ರಾಜನ ಸಭೆಯಲ್ಲಿ ಹರಿಪಾರಮ್ಯ ಸಮರ್ಥನೆ. ಕೂಡಲೇ ಗರುಡಾರೂಢ ಸಿರಿಯರಸನ ಸಾಕ್ಷಾತ್ಕಾರ. ತಿರುಮೋಳಿ 450 ಪಾಶುರಗಳ ರಚನೆ.

**8. ತೊಂಡರಡಿಪ್ಪೊಡಿಯಾಳ್ವಾರ್**

ಚೋಳಮಂಡಲದ ಮಂಡಂಗುಡಿಯಲ್ಲಿ ಜನನ. ಹೆಸರು ವಿಪ್ರನಾರಾಯಣ. ಶ್ರೀರಂಗಕ್ಷೇತ್ರದಲ್ಲಿ ರಂಗನಾಥನ ಕೈಂಕರ್ಯಕ್ಕಾಗಿ ನಂದನವನ ನಿರ್ಮಾಣ. ಪುಷ್ಪಮಾಲಿಕೆ ಸಮರ್ಪಿಸಿ ಹರಿಕೈಂಕರ್ಯ. ದೇವದೇವಿ ಎಂಬ ನರ್ತಕಿಯ ಸಂಬಂಧ. ಕೈಂಕರ್ಯದ ಮರೆವು. ವಿಪ್ರನಾರಾಯಣರೂಪದಿಂದ (ಇವರಂತೆ ವೇಷ ಧರಿಸಿದ) ನಾರಾಯಣನಿಂದ ದೇಗುಲದ ಸ್ವರ್ಣಪಾತ್ರೆಯ ಸ್ವೀಕಾರ ಹಾಗೂ ನರ್ತಕಿಗೆ ಪ್ರದಾನ. ವಿಪ್ರನಾರಾಯಣನಿಗೆ ಕಾರಾಗೃಹ ಬಂಧನ. ಭಕ್ತರ ಮೇಲಿನ ಅಪಾರ ವಾತ್ಸಲ್ಯದಿಂದ ಸ್ವಪ್ನದಲ್ಲಿ ರಾಜನಿಗೆ ಬಂಧಿತನಾದವ ತನ್ನ ಭಕ್ತನೆಂಬ ಸೂಚನೆ. ಕಾರಾಗೃಹದಿಂದ ಮುಕ್ತಿ. ಮತ್ತೆ ಭಗವಂತನಲ್ಲಿ ಎಡಬಿಡದಂತೆ ಅನುರಕ್ತಿ. ಇದು ಇವರ ಶಕ್ತಿ.

**9. ತಿರುಪ್ಪಾಣಾಳ್ವಾರ್**

ಉರೈಯೂರಲ್ಲಿ ಅಂತ್ಯಜಾತಿಯಲ್ಲಿ ಜನ್ಮ. ಹರಿಗುಣಗಾನ. ಅಭಿಷೇಕಕ್ಕೆ ಹೊರಟ 'ಲೋಕಸಾರಂಗ'ಮುನಿಗಳಿಂದ ತಿರುಪ್ಪಾಣಾಳ್ವರರಿಗೆ ಕಲ್ಲಿನ ಹೊಡೆತ. ಲೋಕಸಾರಂಗ ಮುನಿಗಳಿಗೆ ಈ ಭಕ್ತನನ್ನು ಹೊತ್ತು ತರಲು ಕನಸಿನಲ್ಲಿ ರಂಗನಾಥನ ಆದೇಶ. ಲೋಕಸಾರಂಗಮುನಿಗಳು ಇವರ ಭಕ್ತಿಯನ್ನು ಗೌರವಿಸಿ ದೇಗುಲಕ್ಕೆ ಹೊತ್ತು ನಡೆದ ಹಿನ್ನೆಲೆಯಲ್ಲಿ 'ಮುನಿವಾಹನ' ಎಂಬ ಖ್ಯಾತಿ.

**10. ತಿರುಮಂಗೈಯಾಳ್ವಾರ್**

ಚೋಳಮಂಡಲದ ತಿರುನಗರಿಯಲ್ಲಿ ಚತುರ್ಥವರ್ಣದಲ್ಲಿ ಜನ್ಮ. ಸೇನಾಧಿಪತಿಯಾಗಿ ಸೇವೆ. ಕುಮುವಲ್ಲಿ ಎಂಬ ಮುಗುದೆಯಲ್ಲಿ ಪ್ರೇಮ. ವೈಷ್ಣವದೀಕ್ಷೆ. ರಾಜದ್ರವ್ಯದಿಂದ ವೈಷ್ಣವಸಂತರ್ಪಣೆ. ರಾಜನಿಗ್ರಹ. ಶ್ರೀಹರಿ ತೋರಿದ ಗುಪ್ತನಿಧಿಯಿಂದ ಸಂತರ್ಪಣೆ ಮುಂದುವರಿಕೆ. ಹಣವಿಲ್ಲದಾಗ ಬಲಿಷ್ಠರ ದರೋಡೆ. ದಾರಿಯಲ್ಲಿ ಛದ್ಮವೇಷದ ಶ್ರೀದೇವಿ-ನಾರಾಯಣರ ಅಭರಣಗಳ ದರೋಡೆ. ಕಾಲ್ಗಡಗ ಕೀಳಲಾಗದೆ ಹಲ್ಲಿನಿಂದ ಕೀಳುವ ಯತ್ನ. ನಾರಾಯಣನ ಕೃಪೆಯಿಂದ ದಿವ್ಯದೃಷ್ಟಿ. ಶ್ರೀರಂಗನಾಥನ ಮಂದಿರಕ್ಕೆ ವಿಮಾನಗೋಪುರ ನಿರ್ಮಾಣ. ಮಂಟಪ-ಪ್ರಾಕಾರ ಇತ್ಯಾದಿಗಳ ಸೇವೆ ಇವರ ಸಾಧನೆಗಳು.

**11. ಮಧುರಕವಿಯಾಳ್ವಾರರು**

ತಿರುನಗರಿಯ ಸಮೀಪದ ತಿರುಕ್ಕೊಳೂರಿನಲ್ಲಿ ಬ್ರಾಹ್ಮಣಕುಟುಂಬದಲ್ಲಿ ಜನ್ಮ. ವೇದ-ಶಾಸ್ತ್ರ-ಸಂಗೀತಸಿದ್ಧಿ. ನಮ್ಮಾಳ್ವಾರರ ವಿಶೇಷ ಅನುಗ್ರಹಪ್ರಾಪ್ತಿ. ಅನೇಕ ಪ್ರಬಂಧಗಳ ರಚನೆ.

**12. ಅಂಡಾಳ್**

ಶ್ರೀದೇವಿ-ಭೂದೇವಿಯರ ಅಂಶಸಂಭೂತಳಾದ ಇವಳು ವಿಲ್ಲಿಪುತ್ತೂರಿನ ಪೆರಿಯಾಳ್ವಾರರಿಗೆ ನಂದನವನದಲ್ಲಿ ಲಭಿಸಿದಳು. ಭಗಂತನಿಗೆ ನಿರಂತರ ಮಾಲೆಯನ್ನು ಸಮರ್ಪಿಸಿ ಆರಾಧಿಸುತ್ತಿದ್ದಳು. ಅರ್ಪಿಸುವ ಮಾಲೆಯನ್ನು ಸರಿ ಇದೆಯೇ ಎಂದು ಪರೀಕ್ಷಿಸಲು ಮೊದಲು ಧರಿಸಿ ಪರೀಕ್ಷಿಸುತ್ತಿದ್ದಳು. ಇದನ್ನು ಕಂಡು ಅರ್ಚಕರು ಕೋಪದಿಂದ ಅವಳು ನೀಡಿದ ಮಾಲೆಯನ್ನು ಸಮರ್ಪಿಸದಿರುವಾಗ ಅಂಡಾಳ್ ಮುಡಿದ ಮಾಲೆಯೇ ನನಗೆ ಪ್ರಿಯವೆಂದು ಭಗವಂತನ ಸ್ವಪ್ನದ ಆದೇಶವಾಯಿತು. ಅಂಡಾಳ್ ಭಕ್ತಿ ಎಲ್ಲರಿಗೊಂದು ಮಾದರಿ.

ಹೀಗೆ ಈ ಆಳ್ವಾರರ ಪರಂಪರೆಯು ಭಕ್ತಿಯ ರಸವನ್ನು ಸುಜನರಿಗೆಲ್ಲ ಕರುಣಿಸಿ ಉದ್ಧರಿಸಿತು. ಈ ಪರಂಪರೆಗೆ ನಂತರ ಪೋಷಣೆ ಮತ್ತು ಸಂಸ್ಕಾರ ವನ್ನು ನೀಡಿದವರು ಆಚಾರ್ಯಪುರುಷರು. ಇವರಲ್ಲಿ ನಾಥಮುನಿಗಳು ಅಗ್ರಮಾನ್ಯರು.

**ನಾಥೋಪಜ್ಞಂ ಪ್ರವೃತ್ತಂ ಬಹುಭಿರುಪಚಿತಂ**
**ಯಾಮುನೈಯ್ಯೈಃ ಪ್ರಬಂಧೈಃ**
**ತ್ರಾತಂ ಸಮ್ಯಗ್ ಯತೀಂದ್ರೈಃ ।**

ಎಂಬುದಾಗಿ ನಿಗಮಾಂತಮಹಾದೇಶಿಕರಿಂದ ಕೊಂಡಾಡಲ್ಪಟ್ಟ ಈ ಮಹಾನುಭಾವರ ಸಾರಸ್ವತ ಕ್ಷೇತ್ರದ ಕೊಡುಗೆ ಅವಿಸ್ಮರಣೀಯವಾದುದು. ಇವರು ಎಂಟನೆ ಶತಮಾನದಲ್ಲಿ ಈ ದೇಶವನ್ನು ಬೆಳಗಿದ ಸಂತ ಮಹಾಂತರು. ಇವರ ಯೋಗಸಿದ್ಧಿಯನ್ನು ಪಡೆದ 8 ಜನ ಶಿಷ್ಯರು ಸದಾ ಮಾನ್ಯರಾಗಿದ್ದಾರೆ.

**ಯಾಮುನಾಚಾರ್ಯರು (10ನೇ ಶತಕದ ಉತ್ತರಾರ್ಧ)**

ಇವರು ನಾಥಮುನಿಗಳ ಮೊಮ್ಮಗ. ಆಗಮಪ್ರಾಮಾಣ್ಯ, ಮಹಾಪುರುಷನಿರ್ಣಯ, ಆತ್ಮಸಿದ್ಧಿ, ಈಶ್ವರಸಿದ್ಧಿ, ಸಂವಿತ್‌ಸಿದ್ಧಿ ಹಾಗೂ ಗೀತಾರ್ಥಸಂಗ್ರಹ ಇವರ ಕೃತಿಗಳು. ಪೆರಿಯನಂಬಿ (ಮಹಾಪೂರ್ಣರು), ತಿರುಕ್ಕೊಟಿಯಾರ್‌ನಂಬಿ (ಗೋಷ್ಠಿಪೂರ್ಣರು) ಇವರ ಅಂತರಂಗಶಿಷ್ಯರು.

**ರಾಮಾನುಜಾಚಾರ್ಯರು (1017-1137)**

ಶ್ರೀಭಾಷ್ಯಕಾರ, ಲಕ್ಷ್ಮಣಾಚಾರ್ಯ, ಯತಿರಾಜ, ದೇಶಿಕೇಂದ್ರ ಇತ್ಯಾದಿ ಸಾರ್ಥಕ ನಾಮಧಾರಿಗಳಾದ ಭಗವದ್ರಾಮಾನುಜರ ಜನ್ಮ ಕ್ರಿ.ಶ. 1017 ಪಿಂಗಳಸಂವತ್ಸರ, ಚೈತ್ರ ಶುದ್ಧ ಪಂಚಮಿ. ಇವರ ಸಾರ್ಥಕ ಬದುಕಿನ ಕಾಲ 124 ವರ್ಷ, 10 ತಿಂಗಳು, 5 ದಿವಸಗಳು. ಬೋಧಾಯನ, ಟಂಕ, ಗುಹದೇವ ಮೊದಲಾದ ಪ್ರಾಚೀನ ವ್ಯಾಖ್ಯಾನಕಾರರ ಪರಂಪರೆಯನ್ನು ಉಜ್ಜೀವಿಸುವಂತಹ ಶ್ರೇಷ್ಠವಾದ ವ್ಯಾಖ್ಯಾನವನ್ನು ಬ್ರಹ್ಮಸೂತ್ರಗಳಿಗೆ ಇವರು ರಚಿಸಿದ್ದಾರೆ. ಶ್ರೀಭಾಷ್ಯವೆಂಬುದಾಗಿಯೇ ಇದು ವಿಖ್ಯಾತವಾಗಿದೆ. 545 ಸೂತ್ರಗಳನ್ನು ಒಳಗೊಂಡ ಬ್ರಹ್ಮಸೂತ್ರಗಳಲ್ಲಿ ವಿಷ್ಣುಪಾರಮ್ಯವನ್ನು ಸಮರ್ಥಿಸಿದ್ದಾರೆ. ಜಿಜ್ಞಾಸಾಧಿಕರಣದಲ್ಲಿ ಲಘುಪೂರ್ವಪಕ್ಷ-ಲಘುಸಿದ್ಧಾಂತ ಮತ್ತು ಮಹಾಪೂರ್ವಪಕ್ಷ-ಮಹಾಸಿದ್ಧಾಂತ ಎಂಬುದಾಗಿ ಎರಡು ಭಾಗಗಳನ್ನು ಮಾಡಿಕೊಂಡು ಕರ್ಮಮೀಮಾಂಸೆ ಹಾಗೂ ಬ್ರಹ್ಮ ಮೀಮಾಂಸೆಯ ಏಕವಾಕ್ಯತೆಯನ್ನು ಸಾರಿದ್ದಾರೆ. ಕರ್ಮಭಾಗ ಹಾಗೂ ವೇದಾಂತಭಾಗಗಳ ಪೂರಕ ಸಂಬಂಧವನ್ನು ವಿಶ್ಲೇಷಿಸಿದ್ದಾರೆ. ಯಾವುದೇ ಉಪನಿಷತ್ತಿನ ವಾಕ್ಯಗಳಲ್ಲಿ ವಿರೋಧವಿಲ್ಲವೆಂದು ಸಮರ್ಥಿಸಿ ಎಲ್ಲ

ವಾದಗಳಲ್ಲಿ ಸಮನ್ವಯವನ್ನು ಸಾರಿದ್ದಾರೆ. ಸೂತ್ರಪ್ರಸ್ಥಾನದ ಮೇಲೆ ಪೂರ್ವಪಕ್ಷ- ಸಿದ್ಧಾಂತಗಳನ್ನು ವಿವರಿಸುವ ಇವರ ಎರಡು ಪುಟ್ಟ ಕೃತಿಗಳು ವೇದಾಂತದೀಪ ಹಾಗೂ ವೇದಾಂತಸಾರವೆಂದು ಪ್ರಸಿದ್ಧವಾಗಿವೆ. ಇವರ ಭಗವದ್ಗೀತಾಭಾಷ್ಯವು ವಿಸ್ತಾರವಾದ ಪ್ರಬಂಧವಾಗಿದ್ದು ಗೀತೆಯ ಆಂತರ್ಯವನ್ನು ಸಮರ್ಥವಾಗಿ ನಿರೂಪಿಸಿದೆ.

ವೇದ- ಉಪನಿತ್ತುಗಳಲ್ಲಿ ಬರುವ ಪ್ರಧಾನವಾಕ್ಯಗಳನ್ನು ವ್ಯಾಖ್ಯಾನಿಸಿ ವಿಭಿನ್ನ ದರ್ಶನಗಳ ಗಂಭೀರ ವಿಮರ್ಶೆಯನ್ನು ಒಳಗೊಂಡ ಇವರ ವೇದಾರ್ಥ ಸಂಗ್ರಹವು ವಿದ್ವಾಂಸರಿಗೆ ಅಮಂದವಾದ ಆನಂದವನ್ನು ನೀಡುತ್ತದೆ. ಶರಣಾಗತಿಗದ್ಯ, ಶ್ರೀರಂಗಗದ್ಯ ಮತ್ತು ವೈಕುಂಠಗದ್ಯಗಳು ಕ್ರಮವಾಗಿ ಪ್ರಪತ್ತಿಯ ಮಹತ್ವ, ಹರಿಯ ಹಿರಿಮೆ ಮತ್ತು ಕೈಂಕರ್ಯದ ಮಹಾಫಲಗಳನ್ನು ನಿರೂಪಿಸುತ್ತವೆ.

ಶ್ರೀವತ್ಸಾಂಕಮಿಶ್ರರು ಭಗವದ್ರಾಮಾನುಜರ ಪ್ರಿಯಶಿಷ್ಯರು. ಕೂರೇಶ ಎಂಬುದಾಗಿಯೂ ಇವರನ್ನು ಕರೆಯುತ್ತಿದ್ದರು. ಶ್ರೀಭಾಷ್ಯವನ್ನು ಲಿಪಿಬದ್ಧಗೊಳಿಸಿದ ಹಿರಿಮೆ ಇವರದು. ಇವರ ಶ್ರೀಸ್ತವ, ವೈಕುಂಠಸ್ತವ, ಅತಿಮಾನುಷಸ್ತವ, ಸುಂದರಬಾಹುಸ್ತವ, ವರದರಾಜಸ್ತವ ಎಂಬ ಐದು ಸ್ತೋತ್ರಗಳು ಸ್ತೋತ್ರಸಾಹಿತ್ಯದಲ್ಲಿ ತುಂಬ ಸುಪ್ರಸಿದ್ಧವಾಗಿವೆ.

**ವಾತ್ಸ್ಯ ವರದಾಚಾರ್ಯರು (13ನೇ ಶತಕ)**

ಭಗವದ್ರಾಮಾನುಜರ ಸೋದರಳಿಯನಾದ ವಾತ್ಸ್ಯ ವರದ ವಿಷ್ಣ್ವಾಚಾರ್ಯರ ಪೌತ್ರರಿವರು. ದೇವರಾಜಗುರು ಇವರ ತಂದೆ. ಇವರು ಕಂಚಿಕ್ಷೇತ್ರದಲ್ಲಿ ವೇದಾಂತಶಾಸ್ತ್ರವನ್ನು ಬೋಧಿಸುತ್ತ ಕಾಲಕ್ಷೇಪ ಮಾಡಿದ ಮಹಾನುಭಾವರು. ಸುದರ್ಶನ ಭಟ್ಟಾರಕರು ಹಾಗೂ ಆತ್ರೇಯ ರಾಮಾನುಜರು ಇವರ ಪ್ರಸಿದ್ಧ ಶಿಷ್ಯರು. ಪ್ರಪನ್ನಪಾರಿಜಾತ, ಪ್ರಮೇಯ ಮಾಲಾ, ಪ್ರಮೇಯಸಾರ, ಜ್ಞಾನಸಾರ, ಪರತತ್ತ್ವನಿರ್ಣಯ, ಶ್ರೀಭಾಷ್ಯ ಸಂಗ್ರಹ, ತತ್ತ್ವಸಾರ ಮೊದಲಾದವುಗಳು ಇವರ ಶ್ರೇಷ್ಠ ಕೃತಿಗಳು.

**ಸುದರ್ಶನ ಭಟ್ಟಾರಕರು (1350)**

13ನೆಯ ಶತಕದ ಉತ್ತರಾರ್ಧದಲ್ಲಿ ಜನಿಸಿದ ಈ ಮಹಾನುಭಾವರು ವಾತ್ಸ್ಯ ವರದಾಚಾರ್ಯರ ಶಿಷ್ಯರು. ಶ್ರೀಭಾಷ್ಯಕ್ಕೆ ವಿಸ್ತೃತವೂ

ಅಪೂರ್ವಪ್ರಮೇಯಗಳಿಂದ ಸಮಲಂಕೃತವೂ ಆದ 'ಶ್ರುತಪ್ರಕಾಶಿಕಾ' ಎಂಬ ವ್ಯಾಖ್ಯಾನವನ್ನು ರಚಿಸಿದವರು. ಪ್ರಬುದ್ಧವಾದ ಈ ಕೃತಿ ಹಾಗೂ ಇವರ ಇಬ್ಬರು ಮಕ್ಕಳನ್ನು ವೇದಾಂತದೇಶಿಕರು ಅಪಾಯ ಪ್ರಸಂಗವೊದಗಿದಾಗ ಸಂರಕ್ಷಿಸಿದರು. ಸುದರ್ಶನ ಸೂರಿಗಳ ಶ್ರುತಪ್ರಕಾಶಿಕಾ ವಿದ್ವಾಂಸರಿಗೆ ಪರಮಾನಂದವನ್ನು ನೀಡುವ ಗ್ರಂಥವಾಗಿದೆ. ತಾತ್ಪರ್ಯದೀಪಿಕಾ, ಶ್ರುತ ದೀಪಿಕಾ, ಶುಕಪಕ್ಷೀಯ, ಶರಣಾಗತಿಗದ್ಯವ್ಯಾಖ್ಯಾನ ಮೊದಲಾದವುಗಳು ಇವರ ಇತರ ಪ್ರಸಿದ್ಧ ಕೃತಿಗಳು.

**ವೇಂಕಟನಾಥರು (1268-1369)**

ನಿಗಮಾಂತಗುರು, ಕವಿತಾರ್ಕಿಕಸಿಂಹ, ಸರ್ವತಂತ್ರಸ್ವತಂತ್ರ ಇತ್ಯಾದಿ ಬಿರುದುಗಳಿಂದ ಭೂಷಿತರಾದ ವೇದಾಂತದೇಶಿಕರು ದರ್ಶನಕ್ಷೇತ್ರದಲ್ಲಿಯೇ ಅದ್ವಿತೀಯ ಪ್ರತಿಭಾವಂತರು. ನೂರಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ ಈ ಮಹಾನುಭಾವರು ಷಡ್ದರ್ಶನಾಚಾರ್ಯರಾಗಿ ವಿದ್ವಾಂಸರಿಂದ ಆರಾಧ್ಯರಾದವರು. ಇವರ ಯಾದವಾಭ್ಯುದಯ, ಹಂಸಸಂದೇಶ, ಪಾದುಕಾ ಸಹಸ್ರ, ಸಂಕಲ್ಪಸೂರ್ಯೋದಯ ಮೊದಲಾದ ಕಾವ್ಯ-ನಾಟಕ ಕೃತಿಗಳು ವಿದ್ವಾಂಸರ ಹೃದಯಸಿಂಹಾಸನವನ್ನು ಅಲಂಕರಿಸಿವೆ. ಇವರು ರಚಿಸಿದ ವ್ಯಾಖ್ಯಾನಗಳು ಹಾಗೂ ಸ್ವತಂತ್ರ ಕೃತಿಗಳು ಅಪಾರ ಸಂಖ್ಯೆಯಲ್ಲಿವೆ. ತತ್ತ್ವಮುಕ್ತಾಕಲಾಪದ ವ್ಯಾಖ್ಯಾನವಾದ ಸರ್ವಾರ್ಥಸಿದ್ಧಿ, ಶ್ರೀರಾಮಾನುಜರ ಗೀತಾಭಾಷ್ಯವ್ಯಾಖ್ಯಾನವಾದ ತಾತ್ಪರ್ಯಚಂದ್ರಿಕೆ, ಶ್ರೀಭಾಷ್ಯವ್ಯಾಖ್ಯಾನವಾದ ತತ್ತ್ವಟೀಕೆ ವ್ಯಾಖ್ಯಾನಪ್ರಪಂಚದಲ್ಲಿಯೇ ಅದ್ವಿತೀಯವಾದವುಗಳು. ಇವರ ನ್ಯಾಯಸಿದ್ಧಾಂಜನ, ನ್ಯಾಯಪರಿಶುದ್ಧಿ, ಸೇಶ್ವರಮೀಮಾಂಸಾ, ತತ್ತ್ವ ಮುಕ್ತಾಕಲಾಪ, ಅಧಿಕರಣಸಾರಾವಲೀ, ಶತದೂಷಣೀ ಮೊದಲಾದ ಸ್ವತಂತ್ರ ಪ್ರಬಂಧಗಳು ವಿದ್ವಾಂಸರಿಗೆ ಪ್ರಬಂಧನಿರ್ಮಾಣದ ಮಾರ್ಗದರ್ಶಿಯಾಗಿವೆ. ತಮಿಳು ಭಾಷೆಯಲ್ಲಿ ರಚಿಸಿದ ಪ್ರಬಂಧಗಳು ಅಸಂಖ್ಯವಾಗಿವೆ.

**ಮಹಾಚಾರ್ಯರು (16ನೆಯ ಶತಮಾನ)**

ವೇದಾಂತದೇಶಿಕರ ಶತದೂಷಣೀ ಗ್ರಂಥಕ್ಕೆ ಚಂಡಮಾರುತವನ್ನು ರಚಿಸಿದ ಮಹಾಚಾರ್ಯರು ವಿಶಿಷ್ಟಾದ್ವೈತಸಿದ್ಧಾಂತದಲ್ಲಿ ಶ್ರೇಷ್ಠ ದಾರ್ಶನಿಕರು. ಇವರ ವಿಜಯಪಂಚಕವೆಂದು ವಿಖ್ಯಾತವಾದ ಅವಿದ್ಯಾ ವಿಜಯ, ಪರಿಕರವಿಜಯ, ಪಾರಾಶರ್ಯವಿಜಯ, ಬ್ರಹ್ಮವಿದ್ಯಾವಿಜಯ

ಮತ್ತು ಸದ್ವಿದ್ಯಾವಿಜಯಗಳು ಸ್ವ-ಪರ ಸಿದ್ಧಾಂತಗಳ ವಿವೇಚನಾತ್ಮಕವಾದ ಶ್ರೇಷ್ಠ ಕೃತಿಗಳಾಗಿದ್ದಾವೆ. ಪಾರಾಶರ್ಯವಿಜಯವು ಶ್ರೀಮಧ್ವರ ಬ್ರಹ್ಮಸೂತ್ರ ಭಾಷ್ಯ ತತ್ವಪ್ರಕಾಶಿಕೆಯ ವಿಮರ್ಶಾತ್ಮಕ ಕೃತಿಯಾಗಿದೆ. ಇವರ ಉಪನಿಷತ್ ಮಂಗಳದೀಪಿಕಾ, ತಾತ್ಪರ್ಯಪ್ರಕಾಶಿಕಾ, ಬ್ರಹ್ಮಸೂತ್ರಭಾಷ್ಯೋಪನ್ಯಾಸ ಇತ್ಯಾದಿ ಕೃತಿಗಳು ವಾದಶೈಲಿಯಿಂದ ಕೂಡಿದ್ದು, ವಿದ್ವಾಂಸರಿಗೆ ಮುದ ನೀಡುತ್ತವೆ.

**ರಂಗರಾಮಾನುಜ ಮುನಿಗಳು (16ನೆಯ ಶತಕದ ಉತ್ತರಾರ್ಧ)**

ಶ್ರೀರಾಮಾನುಜಾಚಾರ್ಯರ ಸಿದ್ಧಾಂತಕ್ಕೆ ಅನುಗುಣವಾಗಿ ಕೇನ-ಕಠ-ಪ್ರಶ್ನ-ಮುಂಡಕ-ಮಾಂಡೂಕ್ಯ-ತೈತ್ತಿರೀಯ- ಛಾಂದೋಗ್ಯ-ಬೃಹದಾರಣ್ಯಕ-ಅಥರ್ವಶಿಖಾ-ಕೌಶೀತಕೀ-ಶ್ವೇತಾಶ್ವತರ ಮೊದಲಾದ ಉಪನಿಷತ್ತುಗಳಿಗೆ ಉತ್ಕೃಷ್ಟವಾದ ಭಾಷ್ಯವನ್ನು ರಚಿಸಿದ್ದಾರೆ. ಭಗವದ್ ರಾಮಾನುಜಾಚಾರ್ಯರು ಶ್ರೀಭಾಷ್ಯದಲ್ಲಿ ವಿಷಯವಾಕ್ಯಗಳ ವಿಮರ್ಶೆಯ ಪ್ರಸಂಗದಲ್ಲಿ ಸಿದ್ಧಾಂತರಹಸ್ಯಗಳನ್ನು ಆವಿಷ್ಕರಿಸಿರುವುದನ್ನು ಗಮನದಲ್ಲಿರಿಸಿ ಕೊಂಡು ತಮ್ಮ ವ್ಯಾಖ್ಯಾನಗಳಲ್ಲಿ ಅದನ್ನು ವಿಸ್ತಾರಗೊಳಿಸಿರುವುದು ರಂಗ ರಾಮಾನುಜಭಾಷ್ಯದ ಹೆಗ್ಗಳಿಕೆಯಾಗಿದೆ.

**ವಾಧೂಲ ಶ್ರೀನಿವಾಸಾಚಾರ್ಯರು (17ನೆಯ ಶತಮಾನ)**

ಮಹಾಚಾರ್ಯರ ಶಿಷ್ಯರಾದ ಶ್ರೀನಿವಾಸಾಚಾರ್ಯರು 'ಯತೀಂದ್ರಮತ ದೀಪಿಕಾ' ಎಂಬ ವಿಶಿಷ್ಟಾದ್ವೈತಸಿದ್ಧಾಂತದ ಪ್ರಕರಣಗ್ರಂಥದ ಲೇಖಕ ರಾಗಿದ್ದಾರೆ. ಅದ್ವೈತಸಿದ್ಧಾಂತ ಪ್ರಮಾಣ ಹಾಗೂ ಪ್ರಮೇಯಗಳ ಸ್ವರೂಪವನ್ನು ಸಂಕ್ಷೇಪವಾಗಿ ವಿವರಿಸುವ ಧರ್ಮರಾಜಾಧ್ವರಿಯ ಅದ್ವೈತವೇದಾಂತ ಪರಿಭಾಷಾ ಕೃತಿಯಂತೆ ಈ ಕೃತಿಯೂ ವಿಶಿಷ್ಟಾದ್ವೈತ ಸಿದ್ಧಾಂತದ ಪ್ರಮಾಣ ಹಾಗೂ ಪ್ರಮೇಯ ಸ್ವರೂಪಗಳ ಬಗ್ಗೆ ಬೆಳಕು ಚೆಲ್ಲುತ್ತದೆ. ಹತ್ತು ಪ್ರಕರಣಗಳನ್ನೊಳಗೊಂಡ ಈ ಕೃತಿಯಲ್ಲಿ ಪ್ರತ್ಯಕ್ಷ, ಅನುಮಾನ, ಶಬ್ದ, ಪ್ರಕೃತಿ, ಕಾಲ, ನಿತ್ಯವಿಭೂತಿ, ಧರ್ಮಭೂತಜ್ಞಾನ, ಜೀವ, ಈಶ್ವರ ಮತ್ತು ಅದ್ರವ್ಯಗಳ ಸ್ವರೂಪವಿಮರ್ಶೆಯನ್ನು ಹೃದಯಂಗಮವಾಗಿ ಮಾಡಲಾಗಿದೆ.

ಅಭಿನವವೇದಾಂತ ದೇಶಿಕರೆಂದೇ ವಿಖ್ಯಾತರಾದ ಶ್ರೀನಿವಾಸಾಚಾರ್ಯರ

ತತ್ತ್ವಮಾರ್ತಾಂಡವು ವಿಶಿಷ್ಟಾದ್ವೈತಸಿದ್ಧಾಂತದಲ್ಲಿ ಗಮನಾರ್ಹವಾದ ಕೃತಿಯಾಗಿದೆ. ಮಾಧ್ವ ಪರಂಪರೆಯ ಶ್ರೀವ್ಯಾಸತೀರ್ಥರ ತಾತ್ಪರ್ಯ ಚಂದ್ರಿಕೆಯ ವಿಮರ್ಶೆಗಾಗಿ ಮೈದಳೆದ ಈ ಕೃತಿ ವಿಶಿಷ್ಟಾದ್ವೈತದ ಸೂತ್ರ ವ್ಯಾಖ್ಯಾನದ ಸಾಮಂಜಸ್ಯವನ್ನು ಹಾಗೂ ಇತರ ಪರಂಪರೆಯ ವ್ಯಾಖ್ಯಾನಗಳ ಅಕೌಶಲವನ್ನು ಪ್ರತಿಪಾದಿಸುತ್ತದೆ. ಇಂತಹ ವ್ಯಾಖ್ಯಾನಪರಂಪರೆ ಕಪಿಸ್ಥಲಂ ದೇಶಿಕಾಚಾರ್ಯ, ಉತ್ತಮೂರು ವೀರರಾಘವಾಚಾರ್ಯ ಮೊದಲಾದ ಅನೇಕ ಶಾಸ್ತ್ರ ಪಂಡಿತರ ವರೆಗೆ ಹರಿದುಕೊಂಡು ಬಂದಿದೆ. ಇಂದಿಗೂ ಆರೋಗ್ಯಕರ ರೀತಿಯಲ್ಲಿ ಮತತ್ರಯಗಳಲ್ಲಿ ಚರ್ಚೆ-ಪ್ರತಿಚರ್ಚೆಗಳು ನಡೆಯುತ್ತಲೇ ಇವೆ.

## III. ಪ್ರಮಾಣಗಳು

### ಪ್ರಮಾಣಮೀಮಾಂಸೆ

ಪ್ರತಿಯೊಂದು ಸಿದ್ಧಾಂತವೂ ಪ್ರಮಾಣ-ಪ್ರಮೇಯವೆಂಬ ಎರಡು ಚಕ್ರಗಳನ್ನು ಒಳಗೊಂಡ ರಥದಂತಿರುವುದು. ಎಲ್ಲ ಸಿದ್ಧಾಂತಗಳು ಕಟ್ಟಿರುವ ಪ್ರಮೇಯವೆಂಬ ಬಹುಮಹಡಿಯ ಕಟ್ಟಡಕ್ಕೆ ಮೂಲವಾದ ಅಡಿಪಾಯ (Foundation) ಪ್ರಮಾಣಮೀಮಾಂಸೆ. ಇದನ್ನು ನವೀನರೀತಿಯಿಂದ ಪರಿಷ್ಕರಿಸಿ ಪ್ರಮೇಯ ವ್ಯವಸ್ಥೆಯನ್ನು ಸ್ಫುಟಪಡಿಸಲಾಗುವುದು. 'ಮಾನಾಧೀನಾ ಮೇಯಸಿದ್ಧಿಃ' ಅಲ್ಲವೆ?

### ಪ್ರಮಾಣಸಾಮಾನ್ಯಲಕ್ಷಣ

**'ಪ್ರಮಾಕರಣಂ ಪ್ರಮಾಣಮ್'** ಎಂಬುದು ಪ್ರಮಾಣಸಾಮಾನ್ಯ ಲಕ್ಷಣ. ಯಾವುದರಿಂದ ಯಥಾರ್ಥಜ್ಞಾನವು ಜನಿಸುವುದೋ (ಪ್ರಮಾ+ ಕರಣ) ಅದು 'ಪ್ರಮಾಣ'ವೆಂದು ಅಭಿಪ್ರಾಯ-

**ಪ್ರಮಾಕರಣಂ ಪ್ರಮಾಣಮ್ । ಪ್ರಮಾಣಂ ಲಕ್ಷ್ಯಮ್। ಪ್ರಮಾಣಕರಣತ್ವಂ ಲಕ್ಷಣಮ್। ಯಥಾವಸ್ಥಿತವ್ಯವಹಾರಾನು ಗುಣಜ್ಞಾನತ್ವಂ ಲಕ್ಷಣಮ್ ।**

*(ಯ.ದೀ. ಪು.3)*

ಯಥಾವಸ್ಥಿತವ್ಯವಹಾರಾನುಗುಣಜ್ಞಾನಂ ಪ್ರಮಾ' ಎಂಬುದಾಗಿ 'ಪ್ರಮಾ' (ಯಥಾರ್ಥಜ್ಞಾನ) ಲಕ್ಷಣವಾಗಿದೆ. ವಸ್ತು ಹೇಗೆ ಇದೆಯೋ ಅದಕ್ಕೆ ಅನುಗುಣವಾದ ವ್ಯವಹಾರಕ್ಕೆ ಕಾರಣವಾದ ಅನುಭವವು ಯಥಾವಸ್ಥಿತ ವ್ಯವಹಾರಾನುಗುಣ ಜ್ಞಾನವೆನಿಸಿದೆ.

ಇಲ್ಲಿ 'ಜ್ಞಾನವು' ಪ್ರಮಾಣವೆಂದು ಇಷ್ಟು ಮಾತ್ರವೇ ಲಕ್ಷಣವನ್ನು ಹೇಳಿದರೆ, ಚಿಪ್ಪನ್ನು ನೋಡಿ ಇದು ಬೆಳ್ಳಿ (ಇದಂ ರಜತಮ್) ಎಂಬ ಜ್ಞಾನ ಬಂದಾಗ ಇಂತಹ ಅನ್ಯಥಾಜ್ಞಾನದಲ್ಲೂ ಜ್ಞಾನತ್ವವಿದೆಯಾದ್ದರಿಂದ ಅತಿವ್ಯಾಪ್ತಿ ಬರುತ್ತದೆ. ಅದಕ್ಕಾಗಿ 'ವ್ಯವಹಾರಾನುಗುಣಮ್' ಎಂದು ವಿಶೇಷಣವನ್ನು ನೀಡಲಾಗಿದೆ. ಆದರೂ ಭ್ರಾಂತಿದಶೆಯಲ್ಲಿ ಇದು ರಜತವೆಂದು ವ್ಯವಹರಿಸುವ ಕಾರಣ, 'ಯಥಾವಸ್ಥಿತ' ಎಂಬ ವಿಶೇಷಣವನ್ನು ಕೊಡಬೇಕು. 'ಯಥಾವಸ್ಥಿತ' ಎಂಬ ಪದದಿಂದ (ಯಥಾ+ಅವಸ್ಥಿತ) ವಸ್ತುಸ್ವರೂಪಕ್ಕೆ ಅನುಗುಣವಾದ ಎಂಬ ಅರ್ಥವು ವಿವಕ್ಷಿತವಾಗಿದೆ. ಅಥವಾ ಯಥಾವಸ್ಥಿತ ಎಂಬುದನ್ನು ಜ್ಞಾನಕ್ಕೆ ವಿಶೇಷಣವೆಂದು ತಿಳಿಯಬಹುದಾಗಿದೆ. ಪ್ರಕೃತ ವಸ್ತು ಸ್ವರೂಪಕ್ಕೆ ಅನುಗುಣವಲ್ಲದ ಸಂಶಯಜ್ಞಾನ-ಅನ್ಯಥಾ ಜ್ಞಾನ-ವಿಪರೀತ ಜ್ಞಾನಗಳಲ್ಲಿ ಯಥಾವಸ್ಥಿತವ್ಯವಹಾರಾನುಗುಣ ಜ್ಞಾನತ್ವವು ಇರುವುದಿಲ್ಲ. ಭ್ರಾಂತಿಕಾಲದಲ್ಲಿ ಶುಕ್ತಿಯನ್ನು ನೋಡಿ 'ಇದು ರಜತ' ವೆಂದು ವ್ಯವಹರಿಸಿದರೂ ಅದು ಯಥಾವಸ್ಥಿತ ವ್ಯವಹಾರವೆನಿಸುವುದಿಲ್ಲ. ಅಂತೂ ಯಥಾರ್ಥವ್ಯವಹಾರಕ್ಕೆ ಕಾರಣವಾದ ಯಥಾರ್ಥಜ್ಞಾನಕ್ಕೆ ಜನಕವಾದುದು ಪ್ರಮಾಣವೆನಿಸಿದೆ.

**ಮೂರು ಪ್ರಮಾಣಗಳು**

ಪ್ರತ್ಯಕ್ಷ - ಅನುಮಾನ - ಆಗಮವೆಂಬುದಾಗಿ ಪ್ರಮಾಣಗಳು ಮೂರು. **'ಸಾಕ್ಷಾತ್ಕಾರಿಪ್ರಮಾಕರಣಂ ಪ್ರತ್ಯಕ್ಷಮ್'** (ಯ.ದೀ. ಪು.4) ಎಂಬ ಪ್ರತ್ಯಕ್ಷಲಕ್ಷಣದ ಆಶಯ ಹೀಗಿದೆ - ಇಂದ್ರಿಯಕ್ಕೂ ವಸ್ತುವಿಗೂ ಸಂಪರ್ಕವಾದಾಗ ವಸ್ತುವನ್ನು ಯಥಾವತ್ತಾಗಿ ಗ್ರಹಿಸುವ ಇಂದ್ರಿಯ ಜನ್ಯವಾದ ಯಥಾರ್ಥಜ್ಞಾನಕ್ಕೆ ಸಾಧನವಾದುದು ಪ್ರತ್ಯಕ್ಷವೆನಿಸಿದೆ.

ಬೆಳಕಿನ ನಡುವೆ ಇರುವ ಮನೆ-ವ್ಯಕ್ತಿ-ಪಶುಗಳನ್ನು ಕಣ್ಣಿನಿಂದ ಕಂಡೊಡನೆಯೇ 'ಇದು ಹೀಗಿದೆ' ಎಂಬುದಾಗಿ ಜ್ಞಾನಬರುತ್ತದೆ. ಉದಾ: 'ಇದು ಪುಸ್ತಕ' 'ಇದು ಕುದುರೆ, ಹಸು' ಇತ್ಯಾದಿ. ಪಂಚಜ್ಞಾನೇಂದ್ರಿಯಗಳು, ಮನಸ್ಸಿನ ಮೂಲಕ ಆತ್ಮನಿಗೆ ವಸ್ತುಗಳ ಜ್ಞಾನವನ್ನು ತಂದುಕೊಡುತ್ತವೆ.

ಯಥಾರ್ಥಜ್ಞಾನ ಸಾಧನವಾದುದು ಪ್ರತ್ಯಕ್ಷ ಎಂದು ಲಕ್ಷಣವನ್ನು ನಿರೂಪಿಸಿದರೆ, ಅನುಮಾನಶಬ್ದಗಳಿಂದಲೂ ಅನುಮಿತಿ - ಶಾಬ್ದಬೋಧವು ಹುಟ್ಟುವ ಕಾರಣ ಅವುಗಳೂ ಪ್ರಮಾಕರಣವಾಗಿವೆ. ಅದಕ್ಕಾಗಿ 'ಸಾಕ್ಷಾತ್ಕಾರಿ'

ಎಂಬ ವಿಶೇಷಣ ನೀಡಲಾಗಿದೆ . ವಸ್ತುವಿಗೂ ಇಂದ್ರಿಯಕ್ಕೂ ಸಂಪರ್ಕದಿಂದ ಹುಟ್ಟುವ ಜ್ಞಾನವು 'ಸಾಕ್ಷಾತ್ಕಾರಿಪ್ರಮಾ' ಎನಿಸಿದೆ. ಅನುಮಾನ ಮತ್ತು ಶಬ್ದಗಳಿಂದ ಹುಟ್ಟುವ ಜ್ಞಾನ ಇಂತಹದಲ್ಲ (ಸಾಕ್ಷಾತ್ಕಾರಿ ಪ್ರಮಾರೂಪವಲ್ಲ). ಲಕ್ಷಣವಾಕ್ಯದಲ್ಲಿ 'ಪ್ರಮಾ' ಪದವನ್ನು ಬಿಟ್ಟರೆ, ದೋಷವುಳ್ಳ ಇಂದ್ರಿಯದಿಂದ ವಿಪರೀತಜ್ಞಾನವು (ಸಾಕ್ಷಾತ್ಕಾರರೂಪವಾದುದು) ಜನಿಸುತ್ತದೆ. ಅಲ್ಲಿ ಸಾಕ್ಷಾತ್ಕಾರಿಕರಣತ್ವವಿದೆ ಆದ್ದರಿಂದ ಪ್ರತ್ಯಕ್ಷ ಲಕ್ಷಣಕ್ಕೆ ಅತಿವ್ಯಾಪ್ತಿ ಬರುವುದು. ಇದನ್ನು ಪರಿಹರಿಸಲು 'ಪ್ರಮಾ' ಪದವನ್ನು ನೀಡಲಾಗಿದೆ. ದುಷ್ಟೇಂದ್ರಿಯ ಜನ್ಯವಾದ ಸಾಕ್ಷಾತ್ಕಾರವು ಜ್ಞಾನ (ಪ್ರಮಾ) ರೂಪವಲ್ಲ.

**ಜ್ಞಾನವು ಜನಿಸುವ ಕ್ರಮ ಹೀಗಿದೆ**

ಆತ್ಮನಿಗೂ ಮನಸ್ಸಿಗೂ ಸಂಪರ್ಕವಾಗುವುದು. ಮನಸ್ಸಿಗೂ ಇಂದ್ರಿಯಕ್ಕೂ ಸಂಪರ್ಕವಾಗುವುದು. ಇಂದ್ರಿಯಕ್ಕೂ ವಸ್ತುವಿಗೂ ಸನ್ನಿಕರ್ಷವಾಗುವುದು. ಅನಂತರ 'ಇದು ಪುಸ್ತಕ ' ಇತ್ಯಾದಿಯಾಗಿ ಪ್ರತ್ಯಕ್ಷವು ಉಂಟಾಗುತ್ತದೆ.

ಪಂಚಜ್ಞಾನೇಂದ್ರಿಯಗಳು ತಮ್ಮ ಸಂಪರ್ಕ ಹೊಂದಿದ ವಸ್ತುವಿನ ಜ್ಞಾನವನ್ನು ತಂದುಕೊಡುತ್ತವೆ . ತ್ವಗಿಂದ್ರಿಯ ಮತ್ತು ರಸನೇಂದ್ರಿಯಗಳು ತಮ್ಮ ಸಂಪರ್ಕ ಹೊಂದಿದ ವಸ್ತುವಿನ ಜ್ಞಾನ ತಂದುಕೊಡುವುದು ಅನುಭವಸಿದ್ಧ. ಗಂಧವೂ ಗಾಳಿಯಮೂಲಕ ಘ್ರಾಣೇಂದ್ರಿಯದ ಬಳಿ ಬಂದಾಗ ಗಂಧದ ಜ್ಞಾನ ಉಂಟಾಗುವುದು.ದೂರದಲ್ಲಿರುವ ಶಬ್ದವೂ ಗಾಳಿಯಮೂಲಕ ಕಿವಿಯ ಪ್ರದೇಶದವರೆಗೆ ಬಂದಾಗ ಜ್ಞಾನ ಜನಿಸುವುದು. ಸೂರ್ಯೋದಯ ವಾದಕೂಡಲೇ ಸೂರ್ಯನ ಪ್ರಭೆಯು ದಶದಿಕ್ಕುಗಳನ್ನು ಏಕಕಾಲದಲ್ಲಿ ವ್ಯಾಪಿಸುವಂತೆ ಚಕ್ಷುರಿಂದ್ರಿಯವು ವೃತ್ತಿಯ ಮೂಲಕ ದೂರದಲ್ಲಿರುವ ವಸ್ತುವಿನ ಸಂಪರ್ಕಹೊಂದಿ ರೂಪಜ್ಞಾನವನ್ನು ತಂದುಕೊಡುವುದು. ಈ ಹಿನ್ನೆಲೆಯಲ್ಲಿ ಇಂದ್ರಿಯಗಳು 'ಪ್ರಾಪ್ಯ ಪ್ರಕಾಶಕಾರಿ'. ತನ್ನ ಸಂಪರ್ಕಕ್ಕೆ ಒಳಪಟ್ಟ ವಸ್ತುಗಳ ಜ್ಞಾನವನ್ನು ತಂದು ಕೊಡುತ್ತವೆ-

**ಗ್ರಹಣಪ್ರಕಾರಸ್ತು ಆತ್ಮಾ ಮನಸಾ ಸಂಯುಜ್ಯತೇ । ಮನ ಇಂದ್ರಿಯೇಣ । ಇಂದ್ರಿಯಮರ್ಥೇನ । ಇಂದ್ರಿಯಾಣಾಂ ಪ್ರಾಪ್ಯಪ್ರಕಾಶಕಾರಿತ್ವನಿಯಮಾತ್ । ಅತಃ ಘಟಾದಿರೂಪಾರ್ಥಸ್ಯ ಚಕ್ಷೂರೂಪೇಂದ್ರಿಯಸ್ಯ ಚ ಸನ್ನಿಕರ್ಷೇ ಸತ್ಯಯಂ ಘಟ ಇತಿ ಚಾಕ್ಷುಷಜ್ಞಾನಂ ಜಾಯತೇ । ಏವಮೇವ ಸ್ಪಾರ್ಶನ-ಪ್ರತ್ಯಕ್ಷಾದಯೋಽಪಿ ।** *(ಯ.ದೀ. ಪು - 5,6)*

## ಪ್ರತ್ಯಕ್ಷದಲ್ಲಿ ವೈವಿಧ್ಯ

ಪ್ರತ್ಯಕ್ಷವು ಸವಿಕಲ್ಪಕ ನಿರ್ವಿಕಲ್ಪಕ ಎಂಬುದಾಗಿ ಎರಡು ಬಗೆಯದಾಗಿದೆ. ಇಂದ್ರಿಯಕ್ಕೂ ವಸ್ತುವಿಗೂ ಮೊದಲು ಸಂಪರ್ಕವಾದಾಗ ಅತ್ಯಂತ ಸ್ಥೂಲವಾಗಿ ಬರುವ ವಸ್ತುವಿನ ಜ್ಞಾನವು 'ನಿರ್ವಿಕಲ್ಪಕ'ವೆನಿಸಿದೆ. ವಸ್ತುವಿನಲ್ಲಿರುವ ಗುಣ-ಕ್ರಿಯೆ ಇತ್ಯಾದಿಗಳನ್ನು ಸೂಕ್ಷ್ಮವಾಗಿ ಗುರುತಿಸುವ ವಸ್ತು ವಿಷಯಕವಾದ ಎರಡನೆಯ ಬಾರಿಗೆ ಬರುವ ಜ್ಞಾನವನ್ನು 'ಸವಿಕಲ್ಪಕ' ಎನ್ನುವರು-

**ತದ್‌ದ್ವಿವಿಧಮ್ । ನಿರ್ವಿಕಲ್ಪಕಂ ಸವಿಕಲ್ಪಕಂ ಚೇತಿ । ಗುಣಸಂಸ್ಥಾನಾದ್ಯ-ವಿಶಿಷ್ಟಪ್ರಥಮಪಿಂಡಜ್ಞಾನಂ ನಿರ್ವಿಕಲ್ಪಕಮ್। ಪ್ರತ್ಯವಮರ್ಶಂ ಗುಣ-ಸಂಸ್ಥಾನಾದಿವಿಶಿಷ್ಟದ್ವಿತೀಯಪಿಂಡಜ್ಞಾನಂ ಸವಿಕಲ್ಪಕಮ್ ।** *(ವಿ.ನ. ಪು. 8)*

ಇದನ್ನು ಹೀಗೆ ಸ್ಫುಟವಾಗಿ ನಿರೂಪಿಸಬಹುದಾಗಿದೆ -

ಇಂದ್ರಿಯಕ್ಕೂ ಘಟ ಪಟಾದಿವಸ್ತುಗಳಿಗೂ ಸನ್ನಿಕರ್ಷವಾದಾಗ ದ್ರವ್ಯದ ಗ್ರಹಣವಾಗುವಾಗಲೇ ಇಂದ್ರಿಯದಿಂದ ಅಲ್ಲಿರುವ ಗುಣಗ್ರಹಣವೂ ಆಗಿಯೇ ತೀರುವುದು. ಅದಕ್ಕೆ ಭಿನ್ನ ಸಾಮಗ್ರಿ ಇಲ್ಲವಷ್ಟೆ! ನಾವು ಹಸುವನ್ನು 'ಹಸು' ಎಂದು ಗುರುತಿಸುವಾಗಲೇ ಅದರಲ್ಲಿರವ ಬಣ್ಣವು ಅದೇ ಇಂದ್ರಿಯದಿಂದ ಗೃಹೀತವಾಗುವುದು. ಆದರೆ ಈ ಗೋವಿನಲ್ಲಿರುವ ಗೋತ್ವರೂಪವಾದ ಜಾತಿ ಇಂಥಹ ಬಣ್ಣದ ಇನ್ನೊಂದು ಗೋವಿನಲ್ಲೂ ಇದೆ ಎಂಬ ಅಂಶವು ಮೊದಲ ಜ್ಞಾನದಲ್ಲಿ ಗೋಚರಿಸುವುದಿಲ್ಲ. ಈ ಹಿನ್ನೆಲೆಯಲ್ಲಿ ಈ ಮೊದಲ ಜ್ಞಾನವನ್ನು 'ನಿರ್ವಿಕಲ್ಪಕ' ಎನ್ನುವುದು.

ಇದೇ ಗೋತ್ವವು ಇತರ ಗೋವುಗಳಲ್ಲೂ ಇದೆ ಎಂದು ತೋರಿದಾಗ 'ಸವಿಕಲ್ಪಕ' ಎನಿಸುವುದು. ಪ್ರತಿಯೊಂದು ವಸ್ತುವಿನಲ್ಲಿಯೂ ಎರಡಂಶ ಇದೆ. ಉದಾ: ಘಟವನ್ನು ತೆಗೆದುಕೊಂಡರೆ, ಅಲ್ಲಿ ಪಟಮೊದಲಾದ ವಸ್ತುಗಳಿಂದ ವ್ಯಾವೃತ್ತವಾದ ಆಕಾರ ಒಂದಿದೆ. ಇದರಂತೆ ಎಲ್ಲ ಘಟಗಳಲ್ಲಿ ಅನುವೃತ್ತವಾದ (ಸಮಾನವಾದ) ಆಕಾರ ಒಂದಿದೆ. ಮೊದಲನೆಯದು ಮಾತ್ರ ತೋರಿದಾಗ ನಿರ್ವಿಕಲ್ಪಕ. ಎರಡೂ ತೋರಿದಾಗ ಸವಿಕಲ್ಪಕ. ಇದನ್ನು ಶ್ರೀವೇದಾಂತದೇಶಿಕರು ಹೃದಯಂಗಮವಾಗಿ ನಿರೂಪಿಸಿದ್ದಾರೆ-

**ಈದೃಕ್ತ್ವಾತ್ಯಂತಶೂನ್ಯೇ ನ ಹಿ ಮಿಷತಿರ್ನಾಪಿ ಯುಕ್ತಿಸ್ತಥಾತ್ವೇ**
**ಸಾಮಗ್ರೀಭೇದವೇದ್ಯೇ ಪೃಥಗವಗತಿರಸ್ತ್ವತ್ರ ನೈಷಾನ್ಯಥಾ ಸ್ಯಾತ್ ।**

**ಧೀತ್ವಾದೇರ್ವಾ ವಿಶಿಷ್ಟಂ ಪ್ರಥಯತಿ ಜನಿತಾ ಬುದ್ಧಿರಾದ್ಯಾಕ್ಷಯೋಗೈಃ ತಸ್ಮಾತ್ ಸಂಸ್ಕಾರಶೂನ್ಯೇಂದ್ರಿಯ ಜನಿತಮತಿರ್ನಿರ್ವಿಕಲ್ಪೇತಿ ವಾಚ್ಯಾ ॥**

*(ತ.ಕ., ಬುದ್ಧಿಸರ, ಶ್ಲೋ. 32 ॥)*

ಎರಡು ಬಗೆಯ ಜ್ಞಾನಗಳೂ 'ಅರ್ವಾಚೀನ' 'ಅನರ್ವಾಚೀನ' ಎಂದು ಎರಡು ಬಗೆಯಾಗಿವೆ. ಅರ್ವಾಚೀನಜ್ಞಾನವು ಇಂದ್ರಿಯಸಾಪೇಕ್ಷ ಮತ್ತು ನಿರಪೇಕ್ಷವೆಂದು ಎರಡು ಬಗೆ. ಇಂದ್ರಿಯ ನಿರಪೇಕ್ಷ ಜ್ಞಾನವು ಸ್ವಯಂಸಿದ್ಧ ಮತ್ತು ದಿವ್ಯ ಎಂಬುದಾಗಿ ಎರಡುಬಗೆಯಾಗಿದೆ. ಯೋಗಜನ್ಯವಾದ ಸನಕಾದಿ ಋಷಿಗಳಿಗೆ ಜನಿಸುವ ಪ್ರತ್ಯಕ್ಷವು 'ಸ್ವಯಂಸಿದ್ಧ' ಎನಿಸಿದೆ.

ಪರಮಾತ್ಮನ ಪ್ರಸಾದದಿಂದ ಪರಾಂಕುಶ ಮೊದಲಾದ ದಿವ್ಯ ಸೂರಿಗಳಿಗೆ ಆಗುವ ಅನುಭವವನ್ನು 'ದಿವ್ಯ' ಎನ್ನುವರು. ಇಂದ್ರಿಯದಿಂದ ಆಗುವ ಈ ಅನುಭವವನ್ನು ಅರ್ವಾಚೀನ' ಎನ್ನುತ್ತಾರೆ. ನಿತ್ಯರು, ಮುಕ್ತರು ಮತ್ತು ಪರಮಾತ್ಮನ ಅನುಭವವು 'ಅನರ್ವಾಚೀನ' ಎನಿಸಿದೆ-

**'ಉಭಯಮಪ್ಯರ್ವಾಚೀನಮನರ್ವಾಚೀನಮಿತಿ ದ್ವಿವಿಧಮ್ । ಅರ್ವಾಚೀನಂ ದ್ವಿವಿಧಮ್ । ಇಂದ್ರಿಯಸಾಪೇಕ್ಷಂ ತನ್ನಿರಪೇಕ್ಷಂ ಚೇತಿ। ಆದ್ಯಮುಕ್ತಮ್ । ದ್ವಿತೀಯಂ ದ್ವಿವಿಧಮ್ । ಸ್ವಯಂ ಸಿದ್ಧಂ ದಿವ್ಯಂ ಚೇತಿ । ಆದ್ಯಂ ಯೋಗಿಜ್ಞಾನಮ್ । ದಿವ್ಯಂ ಭಗವತ್ಪ್ರಸಾದಜನ್ಯಮ್ ಅನರ್ವಾಚೀನಂ ತು ನಿತ್ಯಮುಕ್ತೇಶ್ವರಾಣಾಂ ಜ್ಞಾನಮ್ ।'** *(ಯ.ದೀ. ಪು. 8)*

## ಸ್ಮೃತಿ-ಪ್ರತ್ಯಭಿಜ್ಞೆಗಳು ಪ್ರತ್ಯಕ್ಷದಲ್ಲಿ ಅಂತರ್ಭೂತವಾಗುವವು

ಸ್ಮೃತಿ-ಪ್ರತ್ಯಭಿಜ್ಞೆಗಳು ಪ್ರಮಾಣವೆನಿಸಿವೆ. ಸ್ಮೃತಿಯು ಹೊಸವಿಷಯವನ್ನು ತಿಳಿಸದಕಾರಣ ಅಪ್ರಮಾಣವೆನ್ನುವರು ಕೆಲವರು. ಆದರೆ ಯಥಾರ್ಥ ಗ್ರಾಹಿತ್ವವಿರುವುದರಿಂದ ಅದಕ್ಕೆ ಪ್ರಾಮಾಣ್ಯವು ಅಂಗೀಕಾರಾರ್ಹವಾಗಿದೆ. 'ಸ್ಮೃತಿಃ ಪ್ರತ್ಯಕ್ಷಮೈತಿಹ್ಯಮ್' ಇತ್ಯಾದಿಯಾಗಿ ಸ್ಮೃತಿಯು ಪ್ರಮಾಣವೆಂಬುದು ವೈದಿಕ ಸಿದ್ಧಾಂತದಲ್ಲಿ ಅಂಗೀಕೃತವಾಗಿದೆ. ಸ್ಮೃತಿಯು ಸಂಸ್ಕಾರ ಜನ್ಯವಾಗಿದೆ. ಸಂಸ್ಕಾರವು ಅನುಭವಸಾಪೇಕ್ಷವಾಗಿದೆ. ಅಂತೂ ಪ್ರತ್ಯಕ್ಷಮೂಲಕವಾದುದರಿಂದ ಸ್ಮೃತಿಯು ಪ್ರತ್ಯಕ್ಷದಲ್ಲಿ ಅಂತರ್ಭೂತವಾಗುವುದು. ಇದರಂತೆ ಸಂಸ್ಕಾರ + ಸನ್ನಿಕರ್ಷಗಳಿಂದ ಜನಿಸುವ ಜ್ಞಾನವು 'ಪ್ರತ್ಯಭಿಜ್ಞೆ' ಎನಿಸಿದೆ. ಇದೂ ಪ್ರತ್ಯಕ್ಷದಲ್ಲಿ

ಅಂತರ್ಭೂತವಾಗುವುದು. ಅನುಪಲಬ್ಧಿಯೂ ಪ್ರತ್ಯಕ್ಷದಲ್ಲಿ ಅಂತರ್ಭೂತವಾಗುವುದು. ಊಹ-ಪ್ರತಿಭಾದಿಗಳಿಗೂ ಪ್ರತ್ಯಕ್ಷದಲ್ಲೇ ಅಂತರ್ಭಾವವನ್ನು ತಿಳಿಯಬೇಕು-

**'ಸ್ಮೃತೇಃ ಪ್ರಾಮಾಣ್ಯಾಂಗೀಕಾರೇಽಪಿ ಸಂಸ್ಕಾರಸಾಪೇಕ್ಷತ್ವಾತ್ ತಸ್ಯಾಃ ಪ್ರತ್ಯಕ್ಷ-ಮೂಲಭೂತತ್ವಾತ್ ಮೂಲಭೂತೇ ಪ್ರತ್ಯಕ್ಷೇಽಂತರ್ಭಾವ ಇತಿ ನ ಪೃಥಕ್ ಪ್ರಮಾಣಕಲ್ಪನಮ್ ।'** *(ಯ.ದೀ. ಪು. 8)*

**ಎಲ್ಲ ಜ್ಞಾನವೂ ಯಥಾರ್ಥವೇ**

**'ಯಥಾರ್ಥಂ ಸರ್ವವಿಜ್ಞಾನಮ್ ಇತಿ ವೇದವಿದಾಂ ಮತಮ್'** ಎಂಬ ಅಭಿಯುಕ್ತವಚನದಂತೆ ಭ್ರಮವೆಂದು ಪರಿಗಣಿತವಾದ 'ಇದಂ ರಜತಮ್' ಎಂಬ ಜ್ಞಾನವು ಯಥಾರ್ಥವಾಗಿದೆ. ಪಂಚೀಕರಣ ಪ್ರಕ್ರಿಯೆಯು ವೇದೋಕ್ತವಾಗಿದ್ದು ಪಂಚ ಮಹಾಭೂತಗಳಲ್ಲಿ ಪರಸ್ಪರ ಕಲಬೆರಕೆ ಇದೆ. ಆದ್ದರಿಂದ ಚಿಪ್ಪಿನಲ್ಲಿ ಬೆಳ್ಳಿಯ ಅಂಶವೂ ಇರುವುದರಿಂದ ಜ್ಞಾನವಿಷಯವು ಸತ್ಯವೇ ಆಗಿದೆ. ಆದರೆ ಶುಕ್ತಿಯಲ್ಲಿ ರಜತಾಂಶವು ಅಲ್ಪವಾಗಿರುವ ಕಾರಣ ಅಲ್ಪಾಂಶವನ್ನು ಮಾತ್ರವೇ ಗ್ರಹಿಸುವ 'ಇದಂ ರಜತಮ್' ಎಂಬ ವ್ಯವಹಾರವು ಭ್ರಮೆ ಎನಿಸಿದೆ. 'ಇಯಂ ಶುಕ್ತಿಃ' ಎಂಬ ಬಹ್ವಂಶವನ್ನು ಗ್ರಹಿಸುವ ಜ್ಞಾನವು 'ಬಾಧಜ್ಞಾನ'ವೆನಿಸಿದೆ.

ಭ್ರಮಸ್ಥಳದಲ್ಲಿ ಅಸತ್ಯವೇ ಪ್ರತಿಭಾತವಾಗುವುದೆಂಬುದು ವೇದಸಮ್ಮತವಲ್ಲ. ಅಲ್ಲಿ ತೋರುವ ವಿಷಯವು ಸತ್ಯವಾದಕಾರಣ ಎಲ್ಲ ಜ್ಞಾನವು ಯಥಾರ್ಥ-

**ಅತ ಏವ ಶುಕ್ತಿಕಾದೌ ರಜತಾಂಶಸ್ಯ ವಿದ್ಯಮಾನತ್ವಾತ್ ಜ್ಞಾನವಿಷಯಸ್ಯ ಸತ್ಯತ್ವಮ್ । ತತ್ರ ರಜತಾಂಶಸ್ಯ ಸ್ವಲ್ಪತ್ವಾತ್ ತತ್ರ ನ ವ್ಯವಹಾರ ಇತಿ ತಜ್ಜ್ಞಾನಂ ಭ್ರಮಃ । ಶುಕ್ತ್ಯಂಶಭೂಯಸ್ತ್ವಜ್ಞಾನಾತ್ ಭ್ರಮನಿವೃತ್ತಿಃ ।**

*(ಯ.ದೀ. ಪು. 12)*

ಈ ಸಂಗತಿಯನ್ನು ವೇದಾಂತದೇಶಿಕರು ಹೃದಯಂಗಮವಾಗಿ ನಿರೂಪಿಸಿದ್ದಾರೆ-

ಎಲ್ಲ ಜ್ಞಾನವೂ ಯಥಾರ್ಥವೆಂದು ಒಪ್ಪಿದರೆ ಪರಮತಖಂಡನೆ ಏಕೆ? ಇದರಂತೆ ಎಲ್ಲ ಜ್ಞಾನವು ಅಯಥಾರ್ಥವಾದರೆ ಸ್ವಮತವೂ ಅಯಥಾರ್ಥವಾಗದೆ? ಆದ್ದರಿಂದ ಕೆಲವು ಜ್ಞಾನಗಳು ಯಥಾರ್ಥ ಮತ್ತು

ಅಯಥಾರ್ಥಜ್ಞಾನವನ್ನು ಒಪ್ಪಬೇಕೆಂದು ವಾದಿಸಬಹುದಾದರೂ ಅಯಥಾರ್ಥಜ್ಞಾನದ ಉತ್ಪತ್ತಿಯನ್ನು ಸಮರ್ಥಿಸುವುದು ಕಷ್ಟದಾಯಕ. ಶುಕ್ತಿಯನ್ನು ಕಂಡು 'ಇದು ರಜತ'ವೆಂಬ ಪ್ರತ್ಯಕ್ಷಜ್ಞಾನ ಬರುವುದು ಸರ್ವಾನುಭವಸಿದ್ಧ. ಅಲ್ಲಿರುವುದು ಶುಕ್ತಿ. ಇಂದ್ರಿಯಕ್ಕೂ ರಜತಕ್ಕೂ ಸನ್ನಿಕರ್ಷವೇ ಇಲ್ಲ. ರಜತ ಅಲ್ಲಿ ಇಲ್ಲ ಕೂಡ. ಆದ್ದರಿಂದ ರಜತದ ಸನ್ನಿಕರ್ಷವಿರದಿರುವಾಗ ಪ್ರತ್ಯಕ್ಷ ಹೇಗೆ ಬಂದಿತು ?

**ಅಖ್ಯಾತಿ-ಅನ್ಯಥಾಖ್ಯಾತಿ**

1. ಇರುವುದು ತೋರಲಿಲ್ಲ, 2. ಇಲ್ಲದಿರುವುದು ತೋರಿತು. ಎರಡನೆಯಗುಂಪಿಗೆ ಸೇರಿದವರನ್ನು 'ಅನ್ಯಥಾಖ್ಯಾತಿ'ವಾದಿಗಳೆನ್ನುವರು. ಮೊದಲಗುಂಪಿನವರನ್ನು 'ಅಖ್ಯಾತಿವಾದಿ'ಗಳೆನ್ನುವರು.

ವೇದವು ನಿರೂಪಿಸುವ ಪಂಚೀಕರಣ ಪ್ರಕ್ರಿಯೆ (ಪಂಚಭೂತಗಳಲ್ಲಿ ಪರಸ್ಪರ ಕಲಬೆರಕೆ)ಗೆ ಅನುಗುಣವಾಗಿ ಶುಕ್ತಿಯಲ್ಲೂ ರಜತಾಂಶವಿದೆ. ಆದ್ದರಿಂದ ಜ್ಞಾನವಿಷಯವು ಸತ್ಯವೇ ಆಗಿದೆ. ಈ ಹಿನ್ನೆಲೆಯಲ್ಲಿ ಎಲ್ಲ ಜ್ಞಾನವೂ ಯಥಾರ್ಥವೇ. ವಸ್ತುವಿನಲ್ಲಿರುವ (ಶುಕ್ತಿಯಲ್ಲಿರುವ) ಬಹ್ವಂಶವು ಗೃಹೀತ ವಾಗದೆಯೇ ಅಲ್ಪಾಂಶವು (ರಜತಾಂಶವು) ಗೃಹೀತವಾದಾಗ ಅಂತಹ ವ್ಯವಹಾರವನ್ನು ಭ್ರಮೆ ಎನ್ನಲಾಗುವುದು. ವಸ್ತುವಿನಲ್ಲಿರುವ (ಶುಕ್ತಿಯಲ್ಲಿರುವ) ಬಹ್ವಂಶವು ಗೃಹೀತವಾದಾಗ ಆ ವ್ಯವಹಾರವನ್ನು 'ಪ್ರಮಾ' ಎನ್ನಲಾಗುವುದು. ಹೀಗೆ ಖ್ಯಾತಿ-ಬಾಧಗಳು ವ್ಯವಹಾರಕ್ಕೆ ಮಾತ್ರವೇ ಅನ್ವಯಿಸುತ್ತವೆ. ಏಕೆಂದರೆ ಪಂಚೀಕರಣ ಪ್ರಕ್ರಿಯೆಯಂತೆ ಶುಕ್ತಿಯಲ್ಲಿ ರಜತಾಂಶವು ಅಲ್ಪವಾಗಿರುವಕಾರಣ ಜ್ಞಾನ ವಿಷಯವು ಸತ್ಯವಾಗಿರುವುದನ್ನು ನಿರಾಕರಿಸಲಾಗದು. ಆದ್ದರಿಂದ ಭ್ರಾಂತಿ-ಬಾಧಗಳನ್ನು ವ್ಯವಹಾರಕ್ಕೆ ಅನ್ವಯಿಸಿಕೊಳ್ಳುವುದು ಉಚಿತ (ಜಾಣ್ಮೆ) ಎನಿಸುವುದು. ಭ್ರಮ-ಪ್ರಮಾಸ್ಥಲಗಳಲ್ಲಿ ಭೇದಾಗ್ರಹವೇ (ಶುಕ್ತಿರಜತಗಳಲ್ಲಿರುವ) ಪ್ರವರ್ತಕ. ಹೀಗೆ ಸರ್ವಜ್ಞಾನದ ಯಾಥಾರ್ಥ್ಯವನ್ನು ನಾಥಮುನಿಗಳು ಮತ್ತು ಭಾಷ್ಯಕಾರರು ವರ್ಣಿಸಿದಂತೆ ಅರಿಯಬೇಕು –

**ಸರ್ವಂ ಜ್ಞಾನಂ ನ ಮಾನಂ ಪರಮತವಿಜಯಾತ್ ನಾಪ್ರಮಾಣಂ ಸ್ವಬಾಧಾತ್**
**ಮಾನಾಮಾನವ್ಯವಸ್ಥಾ ತದಿಯಮನುಮತಾ ಲೌಕಿಕೈರ್ಯೌಕ್ತಿಕೈಶ್ಚ ।**
**ತತ್ರಾಮಾನೇ ತ್ವವರ್ಜ್ಯಂ ಸ್ವರಸಮಿತಿವದನ್ಯಥಾಭಾನಮೇಕೇ**
**ತತ್ಸಾಮಗ್ರ್ಯೈವ ತಾದೃಗ್ ವ್ಯವಹೃತಿಮಪರೇ ಲಾಘವಾದಾಶ್ರಯಂತಿ ॥**

**ನಾಥೈರುಕ್ತಾ ಯಥಾರ್ಥಾ ವಿಮತಮತಿರಪಿ ನ್ಯಾಯತತ್ತ್ವೇ ತದೇತತ್**
**ಭಾಷ್ಯೇಽನೂಕ್ತಂ ತದತ್ರ ವ್ಯವಹೃತಿರುಭಯೀ ಬಾಧಿತಾಬಾಧಿತಾಖ್ಯಾ ।**
**ಶುಕ್ತೌ ರೂಪ್ಯಂ ಪ್ರಭಾಮ್ಬುಃ ಶ್ರುತಿನಯವಶತಃ ಸ್ವಾಪ್ನಮಪ್ಯಸ್ತು ಸತ್ಯಂ**
**ಯೋಗ್ಯಾಯೋಗ್ಯಾದಿಭೇದಾಗ್ರಹ ಇಹ ಚರಮಾಂ ಗಾಹತೇ ಸಂಪ್ರತಿಷ್ಠಾಮ್॥**

*(ತ.ಕ., ಬುದ್ಧಿಸರ ಶ್ಲೋ. 9,10)*

## ಅನುಮಾನ ನಿರೂಪಣೆ

ಅನುಮಿತಿಕರಣವಾದುದು ಅನುಮಾನ. ಧೂಮ-ವಹ್ನಿಗಳ ನಡುವೆ ವ್ಯಾಪ್ಯವ್ಯಾಪಕಭಾವವನ್ನು ಮನನಗೈದು ವಹ್ನಿಯ ಪ್ರಮಿತಿಯನ್ನು ಪಡೆಯುವುದು 'ಅನುಮಿತಿ'. ಅದಕ್ಕೆ ಕರಣವಾದುದು ಅನುಮಾನ. ಅವಿನಾಭಾವವೇ 'ವ್ಯಾಪ್ತಿ' ಎನಿಸಿದೆ. ನ್ಯೂನದೇಶದಲ್ಲಿರುವುದು 'ವ್ಯಾಪ್ಯ'. ಅಧಿಕದೇಶದಲ್ಲಿರುವುದು 'ವ್ಯಾಪಕ'. ಈ ವ್ಯಾಪ್ತಿಗ್ರಹವು ಭೂಯೋದರ್ಶನದಿಂದ ಉಂಟಾಗುತ್ತದೆ.

ಪ್ರತಿಜ್ಞಾ-ಹೇತು-ಉದಾಹರಣ-ಉಪನಯ-ನಿಗಮನವೆಂಬ ಪಂಚಾವಯವಗಳ ಆವಶ್ಯಕತೆ ಇದ್ದರೂ ಅನುಮಿತಿ ಹುಟ್ಟಲು ಇಂತಿಷ್ಟು ಅವಯವಗಳು ಕಡ್ಡಾಯಬೇಕೆಂಬ ನಿಯಮವಿಲ್ಲ.

## ಶಬ್ದ ನಿರೂಪಣೆ

ಅನಾಪ್ತರಿಂದ ಅನುಕ್ತವಾದ ವಾಕ್ಯದಿಂದ ಬರುವ ಅರ್ಥಜ್ಞಾನವನ್ನು ಶಾಬ್ದಬೋಧ ಎನ್ನುವರು. ಇದಕ್ಕೆ ಕಾರಣವಾದ ಶಬ್ದವು ಪ್ರಮಾಣ ಎನಿಸಿದೆ. ಈ ವಿಶ್ಲೇಷಣೆಯಿಂದ (ನಞ್ದ್ವಯಘಟಿತಲಕ್ಷಣನಿರೂಪಣೆಯಿಂದ) ವೇದಪ್ರಮಾಣ್ಯವು ಸಂರಕ್ಷಿತವಾಯಿತು. ವೇದವು ಅನಾಪ್ತರಿಂದ ಉಕ್ತವಲ್ಲ. ಇದರಂತೆ ಆಯಾ ವಿಷಯಗಳ ಬಗ್ಗೆ ಯಥಾರ್ಥ ಜ್ಞಾನವುಳ್ಳವ ಮತ್ತು ಯಥಾರ್ಥವನ್ನು ತಿಳಿಸುವ ಆಪ್ತನ ವಚನವೂ ಪ್ರಮಾಣವೆನಿಸುವುದು -

**'ಅನಾಪ್ತಾನುಕ್ತವಾಕ್ಯಂ ಪ್ರಮಾಣಶಬ್ದಃ । ಅನ್ಯಶಬ್ದೋಽಪ್ರಮಾಣಮ್। ನಿತ್ಯಾಪೌರುಷೇಯ ವೇದಸಂಗ್ರಹಾರ್ಥಂ ನಞ್ದ್ವಯಮ್ '।** *(ವಿ.ನ. ಪು.13)*

ಶಬ್ದವೃತ್ತಿಯು ಮುಖ್ಯ-ಅಮುಖ್ಯವೆಂಬುದಾಗಿ ಎರಡು ಬಗೆಯಾಗಿದೆ. ಶಬ್ದದಿಂದ ಸಹಜವಾಗಿ ದೊರಕುವ ಅರ್ಥವನ್ನು 'ಅಭಿಧಾವೃತ್ತಿ ಅಥವಾ ಮುಖ್ಯವೃತ್ತಿ ಎನ್ನುವರು. ಅಮುಖ್ಯ ವೃತ್ತಿಯು 'ಲಕ್ಷಣಾ', 'ಗೌಣೀ' ಎಂಬುದಾಗಿ

ಎರಡು ಬಗೆಯಾಗಿದೆ. ವಾಚ್ಯಾರ್ಥ (ಶಕ್ಯಾರ್ಥ)ವನ್ನು ಗ್ರಹಿಸುವಲ್ಲಿ ಅನುಪಪತ್ತಿ ಇರುವಾಗ, ಅದರ ಸಂಬಂಧಿಯಾದ ವಸ್ತುವು ಲಕ್ಷಣಾವೃತ್ತಿಯಿಂದ ಬೋಧಿತವಾಗುವುದು. 'ಗಂಗೆಯಲ್ಲಿ ಹಳ್ಳಿ ಇದೆ' (ಗಂಗಾಯಾಂ ಘೋಷಃ) ಎಂಬ ವಾಕ್ಯವನ್ನು ಕೇಳಿದಾಗ ಆಪ್ತನಿಂದ ಪ್ರಯುಕ್ತವಾದ ವಾಕ್ಯದಲ್ಲಿ ವಾಚ್ಯಾರ್ಥವನ್ನು ಸ್ವೀಕರಿಸಲು ಸಾಧ್ಯವಿಲ್ಲ. ಗಂಗಾಶಬ್ದವು ಗಂಗಾಪ್ರವಾಹ ಎಂಬ ಅರ್ಥವನ್ನು ಸಹಜವಾಗಿ ಬೋಧಿಸುವುದು. ಅಲ್ಲಿ ಹಳ್ಳಿ ಇರುವುದು ಅಸಾಧ್ಯ. ಆದ್ದರಿಂದ ಶಕ್ಯಾರ್ಥ ಸಂಬಂಧಿಯಾದ ತೀರವನ್ನು ಗಂಗಾ ಪದದಿಂದ ತೆಗೆದುಕೊಳ್ಳುತ್ತೇವೆ. ಅಲ್ಲಿ ಹಳ್ಳಿ ಇರುವುದು ಯುಕ್ತವಾಗಿದೆ. ಹೀಗೆ ಶಬ್ದವು ಲಕ್ಷಣಾವೃತ್ತಿಯಿಂದ ಅರ್ಥವನ್ನು ಬೋಧಿಸುತ್ತದೆ.

ಇನ್ನು ಶಕ್ಯವಸ್ತುವಿನಲ್ಲಿರುವ ಗುಣವನ್ನು ಹೊಂದಿದ ವಸ್ತುವನ್ನು ಶಬ್ದವು ಬೋಧಿಸಿದರೆ, ಅದು 'ಗೌಣೀವೃತ್ತಿ' ಎನಿಸುವುದು. 'ಅಗ್ನಿಃ ಮಾಣವಕಃ' ಎಂಬುದು ಉದಾಹರಣೆ. ಅಗ್ನಿಯಲ್ಲಿರುವ ತೇಜಸ್ಸು-ಪಾವನತೆ ಮಾಣವಕ (ಬ್ರಹ್ಮಚಾರಿ)ನಲ್ಲಿದೆ ಎಂಬುದನ್ನು ತಿಳಿಸಲು ಹೀಗೆ ವಾಕ್ಯವನ್ನು ಪ್ರಯೋಗಿಸಲಾಗುವುದು –

**'ಶಬ್ದವೃತ್ತಿರ್ದ್ವಿಧಾ ಮುಖ್ಯಾ ಅಮುಖ್ಯೇತಿ । ಅಭಿಧಾ ಮುಖ್ಯವೃತ್ತಿಃ । ಸೈವ ಶಕ್ತಿಃ । ಅಮುಖ್ಯಾ ತು ಲಕ್ಷಣಾ ಗೌಣೀತಿ ದ್ವಿಧಾ । ಶಕ್ಯಸಂಬಂಧೇ ಸತಿ ಲಕ್ಷಣಾ। ಗಂಗಾಯಾಂ ಘೋಷಃ । ಶಕ್ಯಗುಣಯೋಗೇ ಗೌಣೀ । ಸಿಂಹೋ ಮಾಣವಕಃ।**

*(I bid p. 13)*

ಲಕ್ಷಣಾವೃತ್ತಿಯಲ್ಲಿ ಅಜಹತ್ ಲಕ್ಷಣಾ ಒಪ್ಪುವ ಅಗತ್ಯವಿಲ್ಲ. ಇದರಂತೆ ಜಹದಜಹತ್ ಲಕ್ಷಣಾ ಕೂಡ ಅನಪೇಕ್ಷಿತ.

### ಸಿದ್ಧವಸ್ತುಬೋಧಕವೇದವೂ ಪ್ರಮಾಣ

ವೇದಗಳು ಅಪೌರುಷೇಯ ಮತ್ತು ನಿತ್ಯವೂ ಆಗಿವೆ. ಕಾರ್ಯಪರವಾದ 'ಲಿಜ್-ಲೋಟ್-ತವ್ಯ' ಪ್ರಯತ್ಯಗಳ ಮೂಲಕ ಆದೇಶವನ್ನು ತಿಳಿಸುವ ವೇದಭಾಗ ಮಾತ್ರವೇ ಪ್ರಮಾಣವಲ್ಲ. ಸಿದ್ಧವಾದ ಬ್ರಹ್ಮಸ್ವರೂಪವನ್ನು ತಿಳಿಸುವ ವೇದವೂ ಪ್ರಮಾಣವೇ ಆಗಿದೆ-

**ಕಾರ್ಯೇ ಮಾನಂತರಾಪೂರ್ವೇ ಸಮಸ್ತಂ ವೈದಿಕಂ ವಚಃ ।**
**ಪ್ರಮಾಣಮಿತಿ ಹಿ ಪ್ರಾಜ್ಞಾಃ ಮನ್ಯಂತೇ ಮಾನ್ಯಬುದ್ಧಯಃ ॥**

ಹೀಗೆ ಪ್ರತ್ಯಕ್ಷಾದಿ ಪ್ರಮಾಣಸ್ವರೂಪವನ್ನು ವಿವರಿಸುವ ದೇಶಿಕಪಾದರ ಸಂಗ್ರಹಶ್ಲೋಕವು ಹೀಗಿದೆ -

**ಪ್ರತ್ಯಕ್ಷಾದಿತ್ರಯಂ ಚ ಸ್ಮೃತಿರಿತಿ ಚ ಮತಿಃ ಶ್ರುತ್ಯಭೀಷ್ಟಾ ಚತುರ್ಧಾ**
**ಪ್ರತ್ಯಕ್ಷಂ ತತ್ರ ಸಾಕ್ಷಾತ್ಪ್ರತಿಪದನುಮಿತಿಃ ವ್ಯಾಪ್ಯತೋ ವ್ಯಾಪಕೇ ಧೀಃ ।**
**ಶಾಬ್ದೀ ವಾಚಾರ್ಥಬುದ್ಧಿಃ ಸ್ಮೃತಿರಪಿ ಕಥಿತಾ ಸಂಸ್ಕ್ರಿಯಾಮಾತ್ರಜಾ ಸಾ**
**ಯೇಷಾಮಿಷ್ಟಾನ್ಯಥಾಧೀಃ ಪೃಥಗಭಿದಧಿರೇ ತೈರಿಹಾನ್ಯೇಽಪಿ ಭೇದಾಃ॥**

*(ತ.ಕ., ಬುದ್ಧಿಸರ - 31)*

## IV. ಜೀವ

ಸ್ವರೂಪತಃ ಅಣುವಾಗಿರುವವನು ಪರಮಾತ್ಮನಿಗೆ ಶೇಷ (ದಾಸ ಅಥವಾ ಅಂಗ) ಆದವನು ಜೀವನೆನಿಸಿದ್ದಾನೆ. ಅಥವಾ ಅಣುವು ಜ್ಞಾನೇಚ್ಛಾ-ಕೃತಿಗಳುಳ್ಳವನು ಜೀವನೆನಿಸಿದ್ದಾನೆ. 'ಏಷೋಽಣುರಾತ್ಮಾ' ಎಂಬುದಾಗಿ ಶ್ರುತಿಯು ಆತ್ಮನಿಗೆ ಅಣುತ್ವವನ್ನು ಉಪವರ್ಣಿಸಿದೆ. 'ಯೋ ವೇದೇದಂ ಜಿಘ್ರಾಣೀತಿ ಸ ಆತ್ಮಾ' 'ನ ಹಿ ದ್ರಷ್ಟುಃ ದೃಷ್ಟೇಃ ವಿಪರಿಲೋಪೋ ವಿದ್ಯತೇ' ಇತ್ಯಾದಿ ಶ್ರುತಿಗಳು ಆತ್ಮನಲ್ಲಿ ಜ್ಞಾತೃತ್ವವನ್ನು ಸಮರ್ಥಿಸಿದ್ದಾವೆ. ಈ ಅಂಶಗಳು ರಾಮಾನಂದರ ಸಿದ್ಧಾಂತಸಾರಗ್ರಂಥದಲ್ಲಿ ಸ್ಫುಟವಾಗಿದ್ದಾವೆ- 'ಜೀವರು ಜ್ಞಾನಸ್ವರೂಪರು. ಅಣುವಾಗಿದ್ದಾರೆ. ಇವರ ಜ್ಞಾನವು ದೀಪಜ್ಯೋತಿಯಂತೆ ವ್ಯಾಪಕವಾಗಿದ್ದು ದೇಹದೊಳಗಿನ ಎಲ್ಲ ಚಟುವಟಿಕೆಗಳನ್ನು ಗುರುತಿಸಬಲ್ಲದು. ಹೃದಯದಲ್ಲಿರುವ ಜೀವನು ಅಲ್ಲಿಂದಲೇ ಸುಖ-ದುಃಖಗಳ ಅನುಭೂತಿಯನ್ನು ಪಡೆಯುತ್ತಾನೆ. ನಿತ್ಯರಾದ ಜೀವರೆಲ್ಲರೂ ಸುಖರೂಪರಾಗಿದ್ದಾರೆ. ಜ್ಞಾನಸ್ವರೂಪರೂ ಆಗಿದ್ದಾರೆ. ಕೆಲವರು ಕರ್ಮಬಂಧನಕ್ಕೆ ಒಳಪಟ್ಟು ಸಿರಿವಂತರು ಮತ್ತೆ ಕೆಲವರು ಬಡವರು ಆಗಿದ್ದು ದುಃಖವನ್ನು ಅನುಭವಿಸುತ್ತಾರೆ. ಆದರೆ ವಾಸ್ತವಿಕವಾಗಿ ಇವರೆಲ್ಲರೂ ಶ್ರೀಹರಿಯಲ್ಲಿ ಭಕ್ತಿಯನ್ನು ಮಾಡಿ ಸಂಸಾರದಿಂದ ಬಿಡುಗಡೆಯನ್ನು ಪಡೆಯುತ್ತಾರೆ-

**'ಅಣುತ್ವೇ ಸತಿ ಚೈತನ್ಯಂ ಜೀವಲಕ್ಷಣಮುಚ್ಯತೇ ।**
**ಸ ಚ ದೇಹೇಂದ್ರಿಯಾದಿಭ್ಯೋ ವಿಲಕ್ಷಣತಯಾ ಮತಃ ॥**

(ವೇ.ಕಾ. 8-1, ಶ್ಲೋ. 1)

'ಜ್ಞಾತಾರೋ ಜ್ಞಾನರೂಪಾಶ್ಚ ಜೀವಾಃ ಸರ್ವೇಽಜಡಾ ಮತಾಃ ।
ಸರ್ವೇ ಚಾಣುಪ್ರಮಾಣಾಸ್ತೇಽಮರ್ಯಾದಾ ವಿಭವೋ ನ ಹಿ ॥'
(ವೇ.ಕಾ. 8-1, ಶ್ಲೋ. 21)

'ದೀಪಜ್ಯೋತಿರಿವ ಜ್ಞಾನಂ ಜೀವಸ್ಯ ವ್ಯಾಪಕಂ ಮತಮ್ ।
ಹೃತ್ಸ್ಥೋ ಜೀವೋಽಖಿಲಂ ವೇತ್ತಿ ತತೋ ದೇಹಸುಖಾದಿಕಮ್ ॥
(ವೇ.ಕಾ. 8-1, ಶ್ಲೋ. 25)

'ನಿತ್ಯಾಃ ಸುಖಸ್ವರೂಪಾಶ್ಚೇಶ್ವರಸ್ಯಾಂಶಾಶ್ಚ ಚೇತನಾಃ ।
ಕೇಚಿತ್ ಕರ್ಮವಶಾತ್ ರಂಕಾ ಭೂಮಿಪಾಲಾಸ್ತಥಾಽಪರೇ ॥
(ವೇ.ಕಾ. 8-1, ಶ್ಲೋ. 30)

'ಜೀವಾಃ ಸರ್ವೇ ನಿಯಮ್ಯಾ ಹಿ ನಿಯಂತಾ ಜಾನಕೀಶ್ವರಃ ।
ರಾಮಭಕ್ತಿಂ ವಿನಾ ಜೀವೈರ್ವಿಶ್ರಾಮೋ ನ ಹಿ ಲಭ್ಯತೇ ॥
(ವೇ.ಕಾ. 8-1, ಶ್ಲೋ. 32)

ಭಗವದ್ರಾಮಾನುಜರು ಜೀವಸ್ವರೂಪದ ಬಗ್ಗೆ ಹೃದಯಂಗಮವಾಗಿ ಬೆಳಕು ನೀಡಿದ್ದಾರೆ- 'ಜೀವಾತ್ಮರ ಸ್ವರೂಪವು ದೇವ-ಮನುಷ್ಯ-ದಾನವ ಮೊದಲಾದ ವಿಭೇದರಹಿತವಾಗಿದ್ದು, ಜ್ಞಾನಾನಂದ ಮೊದಲಾದ ಸದ್ಗುಣ ರೂಪವಾಗಿದೆ. ಕರ್ಮದ ಹಿನ್ನೆಲೆಯಲ್ಲಿ ನಾನಾಶರೀರಗಳನ್ನು ಪಡೆಯುವ ಜೀವರು ಉಪಾಸನೆಯ ಮೂಲಕ ಈ ಔಪಾಧಿಕವಾದ ರೂಪವನ್ನು (ಶರೀರ ಗಳನ್ನು) ಕಳೆದುಕೊಂಡಾಗ ಉಳಿಯುವುದು ಸ್ವಪ್ರಕಾಶವೂ ಜ್ಞಾನ ಸ್ವರೂಪವೂ ಆದ ಚೈತನ್ಯವೇ ಆಗಿದೆ. ಇಂತಹ ಜ್ಞಾನವು ಎಲ್ಲ ಆತ್ಮರಲ್ಲೂ ಸಮಾನವಾಗಿದೆ-

'ಜೀವಾತ್ಮಸ್ವರೂಪಂ ತು ದೇವಮನುಷ್ಯಾದಿ-ಪ್ರಕೃತಿಪರಿಣಾಮವಿಶೇಷ-ರೂಪನಾನಾವಿಧಭೇದರಹಿತಂ ಜ್ಞಾನಾನಂದೈಕಗುಣಮ್ । ತಸ್ಯೈತಸ್ಯ ಕರ್ಮಕೃತದೇವಾದಿಭೇದೇ ಅಪಧ್ವಸ್ತೇ ಸ್ವರೂಪಭೇದೋ ವಾಚಾಮಗೋಚರಃ ಸ್ವಸಂವೇದ್ಯಃ ''ಜ್ಞಾನಸ್ವರೂಪಂ'' ಇತ್ಯೇತಾವದೇವ ನಿರ್ದೇಶ್ಯಮ್ । ತಚ್ಚ ಸರ್ವೇಷಾಮ್ ಆತ್ಮನಾಂ ಸಮಾನಮ್ ।' (ವೇ.ಸಂ. ಪುಟ 5)

**ಜೀವತ್ರೈವಿಧ್ಯ**

ಈ ಜೀವಾತ್ಮನು ಮಣಿ, ಸೂರ್ಯ ಮೊದಲಾದ ತೇಜೋಮಯ ವಸ್ತುಗಳಂತೆ ಪ್ರಕಾಶರೂಪನಾಗಿದ್ದಾನೆ. ದೀಪವು ಕೋಣೆಯ ಮಧ್ಯಭಾಗ ದಲ್ಲಿದ್ದರೂ ಸಮಗ್ರ ಕೋಣೆಯಲ್ಲಿ ಬೆಳಕನ್ನು ಬೀರುವಂತೆ ಜೀವಾತ್ಮನ

ಜ್ಞಾನಗುಣವು ಸಮಗ್ರ ದೇಹವನ್ನು ವ್ಯಾಪಿಸಿ ಇರುತ್ತದೆ. ಈ ಹಿನ್ನೆಲೆಯಲ್ಲಿ ಅವನು ಎಲ್ಲ ಬಗೆಯ ಅನುಭವವನ್ನು ಪಡೆಯಬಲ್ಲನು.

ಇಂತಹ ಜೀವರಲ್ಲಿ ತ್ರೈವಿಧ್ಯವಿದೆ. ಇದು ಸಾತ್ವಿಕ-ರಾಜಸ-ತಾಮಸ ಎಂಬ ಪ್ರಸಿದ್ಧ ವಿಭಾಗವಾಗಿರದೆಯೇ ಬದ್ಧ-ಮುಕ್ತ-ನಿತ್ಯ ಎಂಬುದಾಗಿ ಸಿದ್ಧಾಂತದಲ್ಲಿ ವಿವರಿಸಲ್ಪಟ್ಟಿದೆ.

ಈ ಸಿದ್ಧಾಂತದಲ್ಲಿ ಕೆಲವು ಜೀವರು ಮುಕ್ತಿಯೋಗ್ಯರು, ಕೆಲವರು ನಿತ್ಯ ಸಂಸಾರಿಗಳು, ಕೆಲವರು ನಿತ್ಯ ನಾರಕಿಗಳು ಎಂಬ ಪ್ರಭೇದವು ನಿರಾಕರಿಸಲ್ಪಟ್ಟಿದೆ. ಯಾವುದೇ ಜೀವನಿಗೆ ತಾನು ನಿತ್ಯಸಂಸಾರಿ ಎಂಬ ಸಂಶಯ ಬಂದರೆ ಮೋಕ್ಷಕ್ಕಾಗಿ ನಡೆಸುವ ಪ್ರಯತ್ನವು ಕುಂಠಿತವಾಗುತ್ತವೆ-

**ಕಶ್ಚಿಚ್ಚೇನ್ನಿತ್ಯಬದ್ಧಃ ಕಿಮಯಮಹಮಿತಿ ಸ್ಯಾಂ ಮುಮುಕ್ಷೋರುಪೇಕ್ಷಾ**
*(ತ.ಕ., ಜೀವಸರ, ಶ್ಲೋ. 27)*

ಇದರಂತೆ ಒಬ್ಬ ಜೀವನು ಅನಂತಕಾಲದವರೆಗೆ ನಿತ್ಯ ನರಕದಲ್ಲಿ ದುಃಖವನ್ನು ಪಡೆಯುವನೆಂಬ ಕಲ್ಪನೆಯು ಪರಮಾತ್ಮನ ಕಾರುಣ್ಯದ ಪರಾಕಾಷ್ಠೆಗೆ (ನಿರುಪಾಧಿಕ ದಯೆಗೆ) ಮಸಿ ಬಳಿದಂತಾಗುವುದು. ಈ ದೃಷ್ಟಿಯಿಂದ ನಿತ್ಯ ನಾರಕಿಗಳನ್ನು ಒಪ್ಪುವುದು ಸಮಂಜಸವಲ್ಲ.

ಸಂಸಾರದ ಬಂಧನದಲ್ಲಿರುವ ಚೇತನರು 'ಬದ್ಧ'ರೆನಿಸಿದ್ದಾರೆ. ಸಂಸಾರದಿಂದ ಬಿಡುಗಡೆ ಹೊಂದಿದ ಚೇತನರು 'ಮುಕ್ತ'ರೆನಿಸಿದ್ದಾರೆ. ಯಾವಕಾಲದಲ್ಲಿಯೂ ಸಂಸಾರದ ಸಂಬಂಧವನ್ನು ಪಡೆಯದವರು 'ನಿತ್ಯ' ಎನಿಸಿದ್ದಾರೆ. ಇವರಿಗೆ ಎಂದೆಂದೂ ಕರ್ಮ ಬಂಧನವಿರುವುದಿಲ್ಲ-

**ಆತ್ಮಸ್ವರೂಪಂ ಚ ಬದ್ಧ ಮುಕ್ತನಿತ್ಯಭೇದೇನ ತ್ರಿವಿಧಮ್ । ಸಂಸಾರಿಣಃ ಬದ್ಧಾಃ ಉಚ್ಯಂತೇ । ಮುಕ್ತಾಃ ನಿವೃತ್ತಸಂಸಾರಾಃ । ಕದಾಽಪಿ ಸಂಸಾರಮಪ್ರಾಪ್ತಾಃ ನಿತ್ಯಾ ಇತ್ಯುಚ್ಯಂತೇ ಶೇಷಗರುಡಾದಯಃ ।** *(ತ.ತ್ರ., ಪು. 26)*

ನಿತ್ಯಸೂರಿಗಳು

ಎಂದೆಂದಿಗೂ ಸಂಸಾರದ ಸಂಬಂಧವಿರದ ಲೆಕ್ಕವಿಲ್ಲದಷ್ಟು ನಿತ್ಯಸೂರಿಗಳಿದ್ದಾರೆ ಎಂಬ ವಿಷಯದಲ್ಲಿ ಶ್ರುತಿಯೇ ಪರಮಪ್ರಮಾಣವಾಗಿದೆ. '**ತದ್ವಿಷ್ಣೋಃ ಪರಮಂ ಪದಂ ಸದಾ ಪಶ್ಯಂತಿ ಸೂರಯಃ** ' ಎಂಬ ಶ್ರುತಿಯು ವಿಷ್ಣುವಿನ ದಿವ್ಯ ಮಂಗಲ ವಿಗ್ರಹವನ್ನು ನಿತ್ಯಸೂರಿಗಳು ಸದಾ ಕಾಣುತ್ತಾರೆಂದು ಇಲ್ಲಿ ವಿವರಿಸಿದೆ.

ಕೆಲವು ಕಾಲ ಸಂಸಾರದಲ್ಲಿ ಇದ್ದು ಮುಕ್ತಿಯಲ್ಲಿ ಭಗವಂತನನ್ನು ಅನಂತ ಕಾಲದವರೆಗೆ ನೋಡಬಹುದಾದರೂ, ಮುಕ್ತಿಗೆ ಮೊದಲು ಭಗವಂತನನ್ನು ಕಾಣದ ಬದ್ಧಜೀವರಿಗೆ 'ಸದಾ ಪಶ್ಯಂತಿ' ಎಂಬ ವಿಶೇಷಣವನ್ನು ಅನ್ವಯಿಸಲಾಗದು. ಆದ್ದರಿಂದ ಕೆಲವರು ಸದಾ ಮುಕ್ತರಾಗಿರುವರೆಂದು ಅಂಗೀಕರಿಸಬೇಕು. ಇದನ್ನು ನಿಗಮಾಂತ ಮಹಾದೇಶಿಕರು ಹೀಗೆ ವಿವರಿಸಿದ್ದಾರೆ-

**ಅನ್ಯೇ ಚಾನಾದಿ ಶುದ್ಧಾಃ ಶ್ರುತಿಸಮಧಿಗತಾಃ ಸೂರಯಃ ಸಂತ್ಯಸಂಖ್ಯಾಃ**
**ಕರ್ಮಾಭಾವಾದನಾದೇರ್ನ ತು ಭವತಿ ಕದಾಽಪ್ಯೇಷು ಸಂಸಾರಬಂಧಃ।**
**ಶೇಷಾಣಾಂ ಶೇಷಿಣಶ್ಚ ಸ್ಫುರತಿ ಸುಖತಯಾ ಸರ್ವದಾ ಸರ್ವತತ್ತ್ವೇ**
**ನಿತ್ಯಾನಾಂ ಮುಕ್ತಿಭಾಜಾಮಪಿ ಭುವನ ಕೃತಾ ಭೋಗಮಾತ್ರಂ ಸಮಾನಮ್ ॥**

*(ತ.ಕ., ಜೀವಸರ, ಶ್ಲೋ. 68)*

## V. ಪರಮಾತ್ಮ

ವಿಶಿಷ್ಟಾದ್ವೈತ ಸಿದ್ಧಾಂತದ ಹೃದಯಂಗಮ ನಿರೂಪಣೆಯಂತೆ, ಲಕ್ಷ್ಮೀಸಹಿತನಾದ ನಾರಾಯಣನು ಪರಮತತ್ತ್ವನೆನಿಸಿದ್ದಾನೆ.

### ಉಭಯಲಿಂಗತ್ವ

ಪರಮಾತ್ಮನು ಈ ವಿಶ್ವದ ಸೃಷ್ಟಿ-ಸ್ಥಿತಿ-ಲಯಕಾರಣನು. ಸೃಷ್ಟ್ಯಾದಿ ವ್ಯಾಪಾರವು ಅವನಿಗೆ ಕ್ರೀಡೆ ಎನಿಸಿದೆ. ಈ ಬ್ರಹ್ಮ ವಸ್ತುವು ಅದ್ವೈತವಾದಿಗಳು ಹೇಳುವಂತೆ ನಿರ್ಗುಣ ನಿರಾಕಾರವಲ್ಲ. **'ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ' 'ಯಸ್ಸರ್ವಜ್ಞಃ ಸ ಸರ್ವವಿತ್' 'ಸತ್ಯಕಾಮಃ ಸತ್ಯಸಂಕಲ್ಪಃ'** ಇತ್ಯಾದಿ ಶ್ರುತಿಗಳು ಬ್ರಹ್ಮನನ್ನು ಸಗುಣನೆಂದು ನಿರೂಪಿಸುತ್ತಿವೆ. ಆದ್ದರಿಂದ ಬ್ರಹ್ಮ ತತ್ತ್ವವು ಜ್ಞಾನ ಅನಂತ ಅಮಲ ಸುಂದರ ಆನಂದಮಯವಾಗಿದೆ. ನಿರ್ಗುಣತ್ವವು ವೇದಬೋಧಿತವಾದುದರಿಂದ ಅದನ್ನು ಹೇಯವಾದ ಪ್ರಾಕೃತ ಗುಣಗಳಿಗೆ ಅನ್ವಯಿಸಿಕೊಂಡಾಗ ಯಾವ ಶ್ರುತಿಯ ವಿರೋಧವೂ ಬರುವುದಿಲ್ಲ. ಇದನ್ನೇ 'ಉಭಯಲಿಂಗತ್ವ'ವೆಂದು ಶಾಸ್ತ್ರಗಳು ವರ್ಣಿಸಿವೆ.

### ನಿಮಿತ್ತನೂ ಅಹುದು, ಉಪಾದಾನನೂ ಅಹುದು

ಪರಬ್ರಹ್ಮನು ಸಮಗ್ರವಿಶ್ವಕ್ಕೆ ಉಪಾದಾನಕಾರಣನು ಹಾಗೂ ನಿಮಿತ್ತ ಕಾರಣನೂ ಆಗಿರುವನು. ಈ ವಿಶ್ವದ ಸೃಷ್ಟಿಯು ಇಚ್ಛೆ ಹಾಗೂ ಜ್ಞಾನಗಳ ಮೂಲಕ ನಡೆದ ಹಿನ್ನೆಲೆಯಲ್ಲಿ ಪರಮಾತ್ಮನು ನಿಮಿತ್ತಕಾರಣನಾಗಿರುವುದು

ಅತ್ಯಂತ ಯುಕ್ತವಾಗಿದೆ. ಉಪಾದಾನ ಕಾರಣತ್ವವನ್ನು ಬ್ರಹ್ಮನಿಗೆ ಹೇಳಿದರೆ ಅವನಲ್ಲಿ ವಿಕಾರವನ್ನು ಅಂಗೀಕರಿಸಿದಂತೆ ಆಗುವುದು ಎಂಬ ಆಕ್ಷೇಪವು ಇಲ್ಲಿ ಸಹಜವಾಗಿದೆ. ಆದರೆ **'ಸೋಽಕಾಮಯತ ಬಹುಸ್ಯಾಂ ಪ್ರಜಾಯೇಯ'** (ತೈ. 2-6) ಎಂಬುದಾಗಿ ಬ್ರಹ್ಮನು ಬುದ್ಧಿಪೂರ್ವಕವಾಗಿ ಸೃಷ್ಟಿ ಮಾಡಲು ಆಲೋಚಿಸಿದನೆಂದು ಶ್ರುತಿ ವರ್ಣಿಸುತ್ತಿದೆ. ಇದರಂತೆ **'ತದಾತ್ಮಾನಂ ಸ್ವಯಮಕುರುತ'** (ತೈ. 2-7) ಎಂಬುದಾಗಿ ಪರಮಾತ್ಮನೇ ವಿಶ್ವವಾಗಿ ಪರಿಣಾಮ ಹೊಂದಿದನೆಂದು ಶ್ರುತಿ ವರ್ಣಿಸುತ್ತಿದೆ. ನಾಮರೂಪಾತ್ಮಕವಾದ ಈ ವಿಶ್ವವನ್ನು ತನ್ನೊಳಡಗಿಸಿಕೊಂಡಾಗ ಅವನು ಕಾರಣನೆನಿಸಿದರೆ, ಅವುಗಳ ಸೃಷ್ಟಿಯ ನಂತರ ಕಣ-ಕಣಗಳಲ್ಲಿ ನಿಯಾಮಕನಾಗಿದ್ದು ಕಾರ್ಯನೆಂದೂ ಕರೆಸಿಕೊಳ್ಳುವನು. ಈ ಹಿನ್ನೆಲೆಯಲ್ಲಿ ಅವನು ನಿಮಿತ್ತಕಾರಣ ಹಾಗೂ ಉಪಾದಾನಕಾರಣನೂ ಆಗಿದ್ದಾನೆ.

**'ಸೋಽಕಾಮಯತ ಬಹುಸ್ಯಾಂ ಪ್ರಜಾಯೇಯ' (ತೈ. 2-6) ಇತಿ ಸಿಸೃಕ್ಷುತ್ವೇನ ಪ್ರಕೃತಸ್ಯ ಬ್ರಹ್ಮಣಃ, 'ತದಾತ್ಮಾನಂ ಸ್ವಯಮಕುರುತ' (ತೈ. 2-7) ಇತಿ ಸೃಷ್ಟೇಃ ಕರ್ಮತ್ವಂ ಕರ್ತೃತ್ವಂ ಚ ಪ್ರತೀಯತ ಇತಿ ಆತ್ಮನ ಬಹುತ್ವ-ಕರಣಾತ್ ತಸ್ಯೈವ ನಿಮಿತ್ತತ್ವಮುಪಾದಾನತ್ವಂ ಚ ಪ್ರತೀಯತೇ । ಅವಿಭಕ್ತ-ನಾಮರೂಪ ಆತ್ಮಾ ಕರ್ತಾ । ಸ ಏವ ವಿಭಕ್ತನಾಮರೂಪಃ ಕಾರ್ಯಮಿತಿ ಕರ್ತೃತ್ವಕರ್ಮತ್ವಯೋರ್ನ ವಿರೋಧಃ । ಸ್ವಯಮೇವಾತ್ಮಾನಂ ತಥಾಽಕುರುತೇತಿ ನಿಮಿತ್ತಮುಪಾದಾನಂ ಚ ॥** (ಶ್ರೀ.ಭಾ. 1-4-26)

ನಿಮಿತ್ತಕಾರಣ ಮತ್ತು ಉಪಾದಾನಕಾರಣಗಳಲ್ಲಿ ಕಡ್ಡಾಯವಾಗಿ ಭೇದವಿರಲೇಬೇಕೆಂದು ಆಗ್ರಹಿಸುವುದು ಸಮಂಜಸವಲ್ಲ. ಪರಮಾತ್ಮನು ವಿಶ್ವಕ್ಕೆ ನಿಮಿತ್ತಕಾರಣನೂ ಉಪಾದಾನಕಾರಣನೂ ಆಗಬಲ್ಲನು-

**ನಿಮಿತ್ತೋಪಾದಾನಯೋಸ್ತು ಭೇದಂ ವದಂತಃ ವೇದಬಾಹ್ಯಾ ಏವ ಸ್ಯುಃ।**
(ವೇ.ಸಂ. ಪುಟ 119)

ಲೋಕದಲ್ಲಿ ಮಣ್ಣು ಮಡಿಕೆಯಾಗಿ ಪರಿವರ್ತನೆ ಹೊಂದುವಾಗ ಜ್ಞಾನವಿಲ್ಲದ ಕಾರಣ ಅದು ಕೇವಲ ಉಪಾದಾನಕಾರಣವೆನಿಸುತ್ತದೆ. ಬುದ್ಧಿಜೀವಿಯಾದ ಕುಂಬಾರನು ನಿರ್ದಿಷ್ಟ ಆಲೋಚನೆಯೊಂದಿಗೆ ಮಣ್ಣಿಗೆ ನಾನಾ ರೂಪವನ್ನು ನೀಡುವುದರಿಂದ ನಿಮಿತ್ತಕಾರಣನೆನಿಸಿದ್ದಾನೆ. ಪರಮಾತ್ಮನು ಸರ್ವಜ್ಞನೂ, ಸರ್ವಶಕ್ತನೂ, ವಿಲಕ್ಷಣಸ್ವಭಾವವುಳ್ಳವನೂ

ಆದುದರಿಂದ ಮಣ್ಣು-ಕುಲಾಲನಂತೆ ಸೀಮಿತಶಕ್ತಿ ಉಳ್ಳವನಲ್ಲ. ಈ ಹಿನ್ನೆಲೆಯಲ್ಲಿ ಅವನನ್ನು ವಿಶ್ವಕ್ಕೆ ಉಪಾದಾನ ಹಾಗೂ ನಿಮಿತ್ತಕಾರಣನೆಂದು ಒಪ್ಪುವಲ್ಲಿ ಯಾವ ವಿರೋಧವೂ ಇಲ್ಲ.

**'ಅತ್ರೋಚ್ಯತೇ ಸಕಲೇತರವಿಲಕ್ಷಣಸ್ಯ ಪರಸ್ಯ ಬ್ರಹ್ಮಣಃ ಸರ್ವಶಕ್ತೇಃ ಸರ್ವಜ್ಞಸ್ಯ ಏಕಸ್ಯೈವ ಸರ್ವಮುಪಪದ್ಯತೇ ।**

**ಮೃದಾದೇರಚೇತನಸ್ಯ ಜ್ಞಾನಾಭಾವೇನ ಅಧಿಷ್ಠಾತೃತ್ವಾಯೋಗಾದಧಿಷ್ಠಾತುಃ ಕುಲಾಲಾದೇಃ ವಿಚಿತ್ರಪರಿಣಾಮಶಕ್ತಿವಿರಹಾತ್ ಅಸತ್ಯಸಂಕಲ್ಪತಯಾ ಚ ತಥಾ ದರ್ಶನನಿಯಮಃ । ಅತೋ ಬ್ರಹ್ಮೈವ ಜಗತೋ ನಿಮಿತ್ತಮುಪಾದಾನಂ ಚ ।** (ಶ್ರೀ.ಭಾ. 1-4-23)

ಇನ್ನೊಂದು ಅವಸ್ಥೆಯನ್ನು ಪಡೆಯುವುದೇ ಉಪಾದಾನವೆಂಬ ವಿಶ್ಲೇಷಣೆಯ ಹಿನ್ನೆಲೆಯಲ್ಲಿ ಬ್ರಹ್ಮನನ್ನು ವಿಶ್ವಕ್ಕೆ ಉಪಾದಾನವೆಂದು ಅಂಗೀಕರಿಸಿದಾಗ ಮಾತ್ರವೇ ಒಂದನ್ನು ತಿಳಿದರೆ ಎಲ್ಲವನ್ನೂ ತಿಳಿದಂತಾಗುವುದು (**ಏಕವಿಜ್ಞಾನೇನ ಸರ್ವಂ ವಿಜ್ಞಾತಂ ಭವತಿ**) ಎಂಬ ಶ್ರುತಿಯ ಚಿಂತನೆಯನ್ನು ಗೌರವಿಸಿದಂತಾಗುತ್ತದೆ-

**'ಅತ ಏವ ಏಕಸ್ಯ ಅವಸ್ಥಾಂತರಾಪತ್ತಿರೂಪವಿಕಾರಾಪೇಕ್ಷಯಾ 'ಯೇನಾಶ್ರುತಂ ಶ್ರುತಂ'** (ಛಾಂ. 6-1-3) **ಇತಿ ಏಕವಿಜ್ಞಾನೇನ ಸರ್ವವಿಜ್ಞಾನಂ ಪ್ರತಿಜ್ಞಾಯ ಮೃದಾದಿದೃಷ್ಟಾಂತಃ 'ಯಥಾ ಸೋಮ್ಯ ಏಕೇನ ಮೃತ್ಪಿಂಡೇನ'** (ಛಾಂ. 6-1-4) **ಇತ್ಯಾದಿನಾ ನಿದರ್ಶಿತಃ ।** (ಶ್ರೀ.ಭಾ. 2-3-18)

### ಉಪಾದಾನಸ್ವರೂಪ

ಈ ದರ್ಶನವು ಸೂಕ್ಷ್ಮ ಚಿದಚಿದ್‌ವಿಶಿಷ್ಟನಾದ ಬ್ರಹ್ಮನು ಕಾರಣನೆಂದು, ಸ್ಥೂಲ ಚಿದಚಿದ್‌ವಿಶಿಷ್ಟನಾದ ಬ್ರಹ್ಮನು ಕಾರ್ಯವೆಂದೂ ವರ್ಣಿಸುತ್ತದೆ. ಬ್ರಹ್ಮನಿಗೆ ವಿಶೇಷಣವಾಗಿರುವ ಅಚಿತ್ತಾದ ಪ್ರಕೃತಿ ಮಹತತ್ತ್ವಮುಂತಾದವುಗಳಲ್ಲಿ ವಿಕಾರ ಸಂಭವಿಸಿದರೂ ವಿಶೇಷ್ಯನಾದ ಬ್ರಹ್ಮನಲ್ಲಿ ವಿಕಾರವನ್ನು ಒಪ್ಪಿರುವುದಿಲ್ಲ. ಉಪಾದಾನವೆಂದರೆ ಇನ್ನೊಂದು ಅವಸ್ಥೆಗೆ ಆಶ್ರಯವಾದುದು (ಅವಸ್ಥಾಂತರಯೋಗಿತ್ವಮ್) ಎಂದು ಅಭಿಪ್ರಾಯವಾಗಿದೆ. ಸೂಕ್ಷ್ಮ ಚಿದಚಿತ್ತುಗಳಿಂದ ಕೂಡಿದ ಬ್ರಹ್ಮನು ಸ್ಥೂಲಚಿತ್-ಅಚಿತ್‌ಗಳಿಂದ ವಿಶಿಷ್ಟನಾದಾಗ ಅವನಲ್ಲಿಯೂ ಅವಸ್ಥಾಂತರ ಯೋಗಿತ್ವವು ಬರುತ್ತದೆ. ಒಂದು ವಸ್ತುವು ನಾನಾ ವಸ್ತುಗಳ ಜೊತೆ ಸೇರಿದಾಗ ಅದನ್ನು ಹೊಸ ಹೆಸರಿನಿಂದ ಕರೆಯುವುದು

ಅನುಭವಸಿದ್ಧವಾಗಿದೆ. ಅನ್ನವನ್ನು ಸಿದ್ಧಪಡಿಸಿ ಅದಕ್ಕೆ ಹಾಲು, ಸಕ್ಕರೆ, ಗೋಡಂಬಿ, ಏಲಕ್ಕಿ, ಕೇಸರಿ ಮೊದಲಾದ ಪದಾರ್ಥಗಳನ್ನು ಸೇರಿಸಿ ಕುದಿಸಿದಾಗ ಪರಮಾನ್ನವೆಂದು ಹೊಸ ಹೆಸರನ್ನು ನೀಡುತ್ತೇವೆ. ಪರಮಾನ್ನಕ್ಕೆ ಕಾರಣವಾದ ಮೂಲವಸ್ತುವಾದ ಅನ್ನವು ಒಂದು ಹಂತದಲ್ಲಿ ಕಾರಣವಾಗಿದೆ. ಅದೇ ನಾನಾಪದಾರ್ಥಗಳೊಡನೆ ಬೆರೆತಾಗ ಕಾರ್ಯವೆಂದೂ ಗುರುತಿಸಲ್ಪಡುತ್ತದೆ. ಹೀಗೆ ಬ್ರಹ್ಮನು ಸೂಕ್ಷ್ಮಚಿತ್ ಹಾಗೂ ಅಚಿತ್‌ಗಳೊಂದಿಗೆ ಕೂಡಿ ಕಾರಣನೆನಿಸಿದರೆ, ಸ್ಥೂಲವಾದ ಇದೇ ವಸ್ತುಗಳೊಡನೆ ಇರುವಾಗ ಕಾರ್ಯನೆನಿಸಿಕೊಳ್ಳುವನು. ಈ ಹಿನ್ನೆಯಲ್ಲಿ ಬ್ರಹ್ಮನು ಉಪಾದಾನಕಾರಣ ನೆಂದು ವರ್ಣಿಸುವುದು ಅತ್ಯಂತ ಸಮುಚಿತವಾಗಿದೆ. ಹೀಗೆ ವಿಶಿಷ್ಟಾದ್ವೈತ ದರ್ಶನವು, ನಿಮಿತ್ತಕಾರಣತ್ವವನ್ನು ಹೇಳುವ ಶ್ರುತಿ ಹಾಗೂ ಉಪಾದಾನ ಕಾರಣತ್ವವನ್ನು ಹೇಳುವ ಶ್ರುತಿಗಳಿಗೆ ಸಮಾನ ಗೌರವವನ್ನು ನೀಡಿ ಅವಿರೋಧವನ್ನು ಸಂಪಾದಿಸಿಕೊಂಡು ಅಪೂರ್ವವ್ಯಾಖ್ಯಾನವನ್ನು ಕರುಣಿಸಿರುವುದು ಗಮನಾರ್ಹವಾಗಿದೆ.

**ಶರೀರ-ಶರೀರಿಭಾವ**

ಪರಮಾತ್ಮನಿಗೂ ಜೀವ-ಜಡಾತ್ಮಕ ಪ್ರಪಂಚಕ್ಕೂ ಶರೀರ-ಶರೀರಿ ಭಾವರೂಪವಾದ ಸಂಬಂಧವು ಉಪನಿಷತ್ತುಗಳಲ್ಲಿ ಪ್ರತಿಪಾದಿಸಲ್ಪಟ್ಟಿದೆ. ಶರೀರದಲ್ಲಿ ವಾಸಮಾಡುವ ಜೀವನು ಅದರಲ್ಲಿ ಅಭಿಮಾನವನ್ನು ತಾಳಿದ್ದಾನೆ. ಈ ಶರೀರದಲ್ಲಿ ಆತ್ಮನು ಅಸ್ತಿತ್ವವನ್ನು ಪಡೆದಿದ್ದಾನೆ. ಆತ್ಮನಿಲ್ಲದೆ ಶರೀರವು ಯಾವ ಕಾರ್ಯವನ್ನು ಮಾಡಲಾರದು. ಅದರಂತೆ ಶರೀರ ದಿಂದ ದೊರಕುವ ಸಂತೋಷಗಳನ್ನೆಲ್ಲ ಆತ್ಮನು ಅನುಭವಿಸುತ್ತಾನೆ. ಪ್ರಕೃತ ಪರಮಾತ್ಮ ಹಾಗೂ ಚೇತನದ ನಡುವೆ ಶರೀರ ಶರೀರಿಭಾವವನ್ನು ಅಂಗೀಕರಿಸುವ ವಿಶಿಷ್ಟಾದ್ವೈತ ದರ್ಶನದಲ್ಲಿ ಪರಮಾತ್ಮನಿಗೂ ಅವನ ಶರೀರವೆನಿಸಿದ ಜೀವಜಡಗಳಿಗೂ ಇರುವ ಸುಮಧುರ ಸಂಬಂಧವನ್ನು ವಿಶ್ಲೇಷಿಸುವ ಉದ್ದೇಶ ಅಡಗಿದೆ. ಅವನಿಲ್ಲದೇ ಜೀವ ಜಡಾತ್ಮಕ ವಿಶ್ವ ಬದುಕಲಾರದು ಈ ವಿಶ್ವದ ಕಣಕಣಗಳಲ್ಲಿಯೂ ಅವನು ಅಂತರ್ಯಾಮಿಯಾಗಿ ಶರೀರಿಯಾಗಿ ವ್ಯಾಪ್ತನಾಗಿದ್ದಾನೆ. ಶರೀರವನ್ನು ವರ್ಣಿಸುವ ಎಲ್ಲ ಶಬ್ದಗಳು ಶರೀರಿಯಲ್ಲಿ ಪರ್ಯವಸಾನಗೊಳ್ಳುವವು. ಶರೀರವಾಚಕವಾದ ಶಬ್ದಗಳು ಶರೀರಿಯಲ್ಲಿ ಪರ್ಯವಸಾನಗೊಳ್ಳುವುದ ರಿಂದಲೇ ಪರಮಾತ್ಮನು ಸಕಲಶಬ್ದಗಳಿಂದ ವಾಚ್ಯನೆನಿಸುವನು-

**'ಯ ಆತ್ಮನಿ ತಿಷ್ಠನ್....ಏಕೋ ನಾರಾಯಣಃ** (ಸುಬಾಲ. ಉ. 7) **ಇತ್ಯಾದೀನಿ ಸಚೇತನಂ ಜಗತ್ ತಸ್ಯ ಶರೀರತ್ವೇನ ನಿರ್ದಿಶ್ಯ ತಸ್ಯಾತ್ಮತ್ವೇನ**

**ಪರಮಾತ್ಮಾನಮುಪದಿಶಂತಿ । ಅತಶ್ಚೇತನವಾಚಿನೋಽಪಿ ಶಬ್ದಾಶ್ಚೇತನಸ್ಯಾತ್ಮ-ಭೂತಂ ಚೇತನಶರೀರಕಂ ಪರಮಾತ್ಮಾನಮೇವಾಭಿದಧತಿ ।**

(ಶ್ರೀ.ಭಾ. 1-1-13)

ಈ ಪ್ರಮೇಯವನ್ನು ಭಗವದ್ರಾಮಾನುಜರು ಗೀತಾಭಾಷ್ಯದಲ್ಲಿ ಹೃದಯಂಗಮವಾಗಿ ವಿವರಿಸಿದ್ದಾರೆ- 'ಪರಮಾತ್ಮನು ಎಲ್ಲ ವಸ್ತುಗಳಲ್ಲಿ ನಿಯಾಮಕನಾಗಿ ನೆಲೆಸಿದ್ದಾನೆ. ಶರೀರದೊಳಗೆ ಆತ್ಮನಿರುವಾಗ ಚಟುವಟಿಕೆಗಳು ನಡೆಯುವಂತೆ ಪರಮಾತ್ಮನಿಂದ ಈ ವಿಶ್ವವು ಕಾರ್ಯವನ್ನು ನಡೆಸುತ್ತಿದೆ. ದೇವ-ಮನುಷ್ಯ-ಪಕ್ಷಿ ಮೊದಲಾದ ಶಬ್ದಗಳು ಕೇವಲ ದೇಹವನ್ನು ಪ್ರತಿಪಾದಿಸದೆಯೇ ಅದರೊಳಗಿರುವ ಆತ್ಮನನ್ನೂ ವರ್ಣಿಸುತ್ತವೆ ಎಂಬುದು ಎಲ್ಲರಿಗೂ ತಿಳಿದ ಸಂಗತಿ. ಇದರಂತೆ ಆತ್ಮರಲ್ಲಿಯೂ ಪರಮಾತ್ಮನು ಶರೀರಿಯಾಗಿರುವನು. ಈ ಹಿನ್ನೆಲೆಯಲ್ಲಿ ಶರೀರಸ್ಥಾನೀಯರಾದ ಅನಂತಜೀವರನ್ನು ವರ್ಣಿಸುವ ಶಬ್ದಗಳು ಶರೀರಿಯಾದ ಪರಮಾತ್ಮನಲ್ಲಿ ಪರ್ಯವಸಾನಗೊಳ್ಳುತ್ತವೆ. ಈ ದೃಷ್ಟಿಯಿಂದ ಎಲ್ಲ ಶಬ್ದಗಳೂ ಪರಮಾತ್ಮನನ್ನು ವರ್ಣಿಸುತ್ತಿವೆ-

**'ಭಗವತ್ಯಾತ್ಮತಯಾ ಅವಸ್ಥಿತೇ ಹಿ ಸರ್ವೇ ಶಬ್ದಾಃ ತಸ್ಮಿನ್ನೇವ ಪರ್ಯವಸ್ಯಂತಿ । ಯಥಾ ದೇವೋ ಮನುಷ್ಯಃ ಪಕ್ಷೀ ವೃಕ್ಷಃ ಇತ್ಯಾದಯಃ ಶಬ್ದಾಃ ಶರೀರಾಣಿ ಪ್ರತಿಪಾದಯಂತಃ ತತ್ತದಾತ್ಮನಿ ಪರ್ಯವಸ್ಯಂತಿ ಭಗವತಃ ತತ್ತದಾತ್ಮತಯಾ ಅವಸ್ಥಾನಮೇವ ತತ್ತಚ್ಛಬ್ದಸಾಮಾನಾಧಿಕರಣ್ಯನಿಬಂಧನಮಿತಿ ವಿಭೂತ್ಯುಪಸಂಹಾರೇ ವಕ್ಷ್ಯತಿ- 'ನ ತದಸ್ತಿ ವಿನಾ ಯತ್ ಸ್ಯಾನ್ಮಯಾ ಭೂತಂ ಚರಾಚರಂ'** (ಗೀ. 10-39) **ಇತಿ ಸರ್ವೇಷಾಂ ಸ್ವೇನ ಅವಿನಾಭಾವ-ವಚನಾತ್ ।** (ಗೀ.ಭಾ. 10-21)

**ಐದು ರೂಪಗಳು**

ಪರಮಾತ್ಮನಿಗೆ ಪರ, ವ್ಯೂಹ, ವಿಭವ, ಅಂತರ್ಯಾಮಿ, ಅರ್ಚಾವತಾರ ಎಂಬುದಾಗಿ ಐದು ರೂಪಗಳಿವೆ.

1. ಅದರಲ್ಲಿ ಶ್ವೇತದ್ವೀಪ ಅನಂತಾಸನ ವೈಕುಂಠಗಳಲ್ಲಿ ಸೇವ್ಯವಾದ ಅಗಣಿತ ವೈಭವವುಳ್ಳ ಮಂಗಲವಿಗ್ರಹವು 'ಪರ'ವೆನಿಸಿದೆ.
2. ವಿಶ್ವದ ಸೃಷ್ಟಿ, ಸ್ಥಿತಿ, ಲಯಗಳಿಗಾಗಿ ವಾಸುದೇವ-ಸಂಕರ್ಷಣ-ಪ್ರದ್ಯುಮ್ನ-ಅನಿರುದ್ಧ ರೂಪಗಳಿಂದ ಮೈದಳೆಯುವ ಚತೂರೂಪಿ ಯಾದ ಭಗವಂತನು 'ವ್ಯೂಹ' ನೆನಿಸುವನು.

3. ಮತ್ಸ್ಯಕೂರ್ಮ ವರಾಹಮೊದಲಾದ ಅನೇಕಾವತಾರಗಳು ದುಷ್ಟ ಶಿಕ್ಷಣೆ, ಮತ್ತು ಸುಜನ ರಕ್ಷಣೆಗಾಗಿ ಮೈದಳೆದಿದ್ದು 'ವಿಭವ'ವೆನಿಸಿದೆ.
4. ಸ್ವರ್ಗ, ನರಕಮುಂತಾದ ಸ್ಥಳಗಳಲ್ಲಿರುವ ಜೀವನಿಗೆ ಕೇವಲ ದಯೆಯಿಂದ ಅನುಗ್ರಾಹಕವಾದ ಯೋಗಿಗಳಿಂದ ಸಾಕ್ಷಾತ್ಕರಿಸಲ್ಪಡುವ ರೂಪವು 'ಅಂತರ್ಯಾಮಿ' ಎನಿಸಿದೆ. ಜೀವನ ಒಳಗಿರುವ ಈ ರೂಪವು ಅವನ ವಿಕಾರಗಳಿಂದ ವಿಕೃತಗೊಳ್ಳದೆ ಪರಿಪೂರ್ಣ ವಾಗಿರುವುದು.
5. ಸಂತ ಮಹಾಂತರು ಅರ್ಚಿಸುವ ವಿಗ್ರಹಗಳಲ್ಲಿ ಅಪ್ರಾಕೃತದಿವ್ಯಮಂಗಲ ರೂಪದಿಂದ ಪ್ರವೇಶಮಾಡಿ ಅರ್ಚಕನ ಅಧೀನನಾಗಿ ಸ್ನಾನ ಭೋಜನ ಶಯನಾದಿಗಳನ್ನು ಸ್ವೀಕರಿಸುವ, ಮನೆ-ಮಠ-ಮಂದಿರಗಳಲ್ಲಿರುವ ಮೂರ್ತಿಯು 'ಅರ್ಚಾವತಾರ'ವೆನಿಸಿದೆ.

ಈ ಪಂಚರೂಪಗಳಲ್ಲಿಯೂ ಕೂಡ ಪರಮಾತ್ಮನು ಶ್ರೀವಿಶಿಷ್ಟನಾಗಿಯೇ ಪೂಜಾರ್ಹನಾಗಿರುವನು.

## VI. ಇತರ ಪ್ರಮೇಯಗಳು

### ಷಡ್‌ದ್ರವ್ಯಗಳು

ಇನ್ನು ಮುಂದೆ ವಿಶಿಷ್ಟಾದ್ವೈತದರ್ಶನದಂತೆ ಪ್ರಮೇಯ ಮೀಮಾಂಸೆಯನ್ನು ನಿರೂಪಿಸುತ್ತೇವೆ -

ವಿಶಿಷ್ಟಾದ್ವೈತಸಿದ್ಧಾಂತಗಂಗೋತ್ರಿಯು ವೇದ-ಸ್ಮೃತಿ-ಬ್ರಹ್ಮಸೂತ್ರಗಳು ಶ್ರೀಮದ್ರಾಮಾಯಣ-ಮಹಾಭಾರತ -ಭಕ್ತೋತ್ತಮರಾದ ಆಳ್ವಾರರ ಪ್ರಬಂಧ ಗಳೆಂಬ ಹಿಮಾಲಯದಿಂದ ಹರಿದು ಬಂದಿದೆ. (ಉಪಜೀವಿಸಿ ಪ್ರವೃತ್ತವಾಗಿದೆ) ವೇದ -ಶಾಸ್ತ್ರಗಳನ್ನು ಸರಿಯಾಗಿ ವ್ಯಾಖ್ಯಾನ ಮಾಡುವಲ್ಲಿ ವಿಶಿಷ್ಟಾದ್ವೈತದರ್ಶನ ತೋರಿದ ಮಾರ್ಗ ವಿನೂತನ ಮತ್ತು ಚೇತೋ- ಹಾರಿ. ವೇದಗಳಲ್ಲಿ ಬಂದ 'ಐಕ್ಯವ್ಯಪದೇಶ' ಮತ್ತು 'ಅಭಿನ್ನ- ನಿಮಿತ್ತೋಪಾದಾನ ಕಾರಣತ್ವ'ಗಳನ್ನು ಸರಳಸುಂದರವಾಗಿ ವ್ಯಾಖ್ಯಾನಿಸಿದ ಹಿರಿಮೆ ಈ ಸಿದ್ಧಾಂತಕ್ಕಿದೆ. ಧರ್ಮಭೂತ ಜ್ಞಾನದ ಅಪೂರ್ವವಿಶ್ಲೇಷಣೆ ವೇದೋಪನಿಷತ್ತುಗಳನ್ನು ಆಧರಿಸಿದವಿನೂತನ ನಿರೂಪಣೆ ವಿದ್ವಾಂಸರ ವಿಮರ್ಶೆಗೆ ಗ್ರಾಸ ಒದಗಿಸಿದೆ. ಷಡಂಗಗಳಿಂದ ಕೂಡಿದ 'ಪ್ರಪತ್ತಿ' ಎಲ್ಲ ವರ್ಗಗಳಿಂದಲೂ ಸ್ವೀಕಾರ್ಯವಾಗಿದ್ದು ಅಧ್ಯಾತ್ಮ ಪ್ರಪಂಚ ಶ್ರೀಸಾಮಾನ್ಯನಿಗೂ ಎಟಕುವಂತಹದೆಂಬ ಭರವಸೆ ಮೂಡಿಸಿದೆ.

ಮುಕ್ತಿಯು (ಪೂರ್ಣಾನಂದವು) ಸಕಲಜೀವರಾಶಿಗಳಿಗೂ ಲಭ್ಯವೆಂಬ ಮಹಾಸಿದ್ಧಾಂತ ದರ್ಶನಪ್ರಪಂಚದಲ್ಲಿಯೇ ಹೊಸಮೈಲಿಗಲ್ಲು.

ವೇದಾಂತದೇಶಿಕರು ತಮ್ಮ ತತ್ತ್ವಮುಕ್ತಾಕಲಾಪದಲ್ಲಿ ಪ್ರಮೇಯ ವಿಶ್ಲೇಷಣೆಯನ್ನು ಹೀಗೆ ಮಾಡಿದ್ದಾರೆ -

ತತ್ತ್ವವು ದ್ರವ್ಯ - ಅದ್ರವ್ಯ ಎಂಬುದಾಗಿ ಎರಡು ಬಗೆಯಾಗಿದೆ. ದ್ರವ್ಯದಲ್ಲಿ ಪುನಃ ಜಡ - ಅಜಡ ಎಂಬುದಾಗಿ ಎರಡು ಬಗೆ ಇದೆ. ಜಡವು, ಪ್ರಕೃತಿ ಮತ್ತು ಕಾಲ ಎಂಬುದಾಗಿ ಎರಡು ಬಗೆ. ಅಜಡವು ಪ್ರತ್ಯಕ್ (ತನಗೆ ಭಾಸಮಾನ) ಪರಾಕ್ (ಇನ್ನೊಬ್ಬರಿಗೆ ತೋರುವುದು) ಎಂಬುದಾಗಿ ಎರಡು ಬಗೆ.

ಪ್ರತ್ಯಕ್ (ತನಗೆ ತೋರುವ) ತತ್ತ್ವವು ಜೀವ - ಪರಮಾತ್ಮ ಎಂಬುದಾಗಿ ಎರಡು ವಿಧ. ಇನ್ನೊಬ್ಬರಿಗೆ ತೋರುವುದರಿಂದ 'ಪರಾಕ್' ಎನಿಸಿದ ತತ್ತ್ವವು ನಿತ್ಯವಿಭೂತಿ ಮತ್ತು ಧರ್ಮಭೂತಜ್ಞಾನವೆಂದು ಎರಡು ವಿಧವಾಗಿದೆ. ಕೆಲವರು ನಿತ್ಯವಿಭೂತಿಯನ್ನು ಜಡವೆನ್ನುವರು.



**ದ್ರವ್ಯಾದ್ರವ್ಯಪ್ರಭೇದಾನ್ಮಿತಮುಭಯವಿಧಂ ತದ್ವಿದಸ್ತತ್ತ್ವಮಾಹುಃ**
**ದ್ರವ್ಯಂ ದ್ವೇಧಾ ವಿಭಕ್ತಂ ಜಡಮಜಡಮಿತಿ ಪ್ರಾಚ್ಯಮವ್ಯಕ್ತಕಾಲೌ ।**
**ಅಂತ್ಯಂ ಪ್ರತ್ಯಕ್ ಪರಾಕ್ ಚ ಪ್ರಥಮಮುಭಯಥಾ ತತ್ರ ಜೀವೇಶಭೇದಾತ್**
**ನಿತ್ಯಾ ಭೂತಿರ್ಮತಿಶ್ಚೇತ್ಯಪರಮಿಹ ಜಡಾಮಾದಿಮಾಂ ಕೇಚಿದಾಹುಃ ।**

*(ತ.ಕ, ಜಡದ್ರವ್ಯಸರ, ಶ್ಲೋ. 6)*

ಇವುಗಳ ಲಕ್ಷಣಗಳನ್ನು ದೇಶಿಕರು ಸಂಕ್ಷೇಪ-ವಿಸ್ತಾರಗಳಿಂದ ನಿರೂಪಿಸಿದ್ದಾರೆ.

ಸಂಕ್ಷೇಪವಿವರಣೆ ಹೀಗಿದೆ-

ದ್ರವ್ಯವೆಂದರೆ ಅವಸ್ಥಾಶ್ರಯವಾದುದು. 'ಅವಸ್ಥೆ' ಎಂದರೆ ಪರಿಣಾಮ. ಯಾವುದು ಪರಿಣಾಮಕ್ಕೆ ಆಸರೆಯಾಗಿದೆಯೋ ಅದು ದ್ರವ್ಯವೆನಿಸುತ್ತದೆ. ಉದಾ:- ಮಣ್ಣಿನ ಮುದ್ದೆಯಿಂದ 'ಘಟ'ವನ್ನು ನಿರ್ಮಿಸಿದಾಗ ಪಿಂಡತ್ವಾವಸ್ಥೆ ಹೋಗಿ 'ಘಟತ್ವಾವಸ್ಥೆ' ಬರುತ್ತದೆ. ಘಟನಾಶವಾದಾಗ ಪುನಃ 'ಲೋಷ್ಟತ್ವಾವಸ್ಥೆ' ಬರುತ್ತದೆ. ಹೀಗೆ ನಾನಾಬಗೆಯ ವಿಕಾರ (ಪರಿಣಾಮ)ವನ್ನು ಹೊಂದುವುದು 'ದ್ರವ್ಯ' ವೆನಿಸುತ್ತದೆ.

ಈ ಆರುದ್ರವ್ಯಗಳಲ್ಲಿ ಜಡವಾದ ಪ್ರಕೃತಿಯು- ಸತ್ತ್ವ, ರಜಸ್ಸು ತಮಸ್ಸು ಎಂಬ ಗುಣಗಳಿಂದ ಕೂಡಿದೆ.

ವರ್ಷ - ಮಾಸ - ದಿನ - ಮುಹೂರ್ತ - ಘಟಿಕಾ - ಕ್ಷಣ - ಲವಾದಿ ಪರಿಣಾಮವುಳ್ಳದ್ದು ಕಾಲ.

ಅಣುವು ಜ್ಞಾನಸ್ವರೂಪನೂ ಆಗಿರುವವನು ಚೇತನ.

ಜೀವನಿಗಿಂತ ಭಿನ್ನನಾದ ಪರಮಚೇತನನೇ ಈಶ್ವರ (ವಿಷ್ಣು).

ಪ್ರಕೃತಿಯನ್ನು ಮೀರಿನಿಂದ ಶುದ್ಧಸತ್ತ್ವಗುಣವುಳ್ಳದ್ದು ನಿತ್ಯವಿಭೂತಿ.

ಚೇತನರಿಗೆ ಉಂಟಾಗುವ ಪದಾರ್ಥವಿಷಯಕ ಪ್ರಕಾಶ (ಜ್ಞಾನ)ವೇ ಧರ್ಮಭೂತಜ್ಞಾನವೆನಿಸಿದೆ-

**ತತ್ರ ದ್ರವ್ಯಂ ದಶಾವತ್ ಪ್ರಕೃತಿರಿಹಗುಣೈಸ್ಸತ್ತ್ವಪೂರ್ವೈರುಪೇತಾ**
**ಕಾಲೋಽಬ್ದಾದ್ಯಾಕೃತಿಃ ಸ್ಯಾತ್ ಅಣುರವಗತಿಮಾನ್ ಜೀವ**
**ಈಶೋಽನ್ಯ ಆತ್ಮಾ।**

**ಸಂಪ್ರೋಕ್ತಾ ನಿತ್ಯಭೂತಿಸ್ತ್ರಿಗುಣಸಮಧಿಕಾ ಸತ್ತ್ವಯುಕ್ತಾ ತಥೈವ**
**ಜ್ಞಾತುರ್ಜ್ಞೇಯಾವಭಾಸೋ ಮತಿರಿತಿ ಕಥಿತಂ ಸಂಗ್ರಹಾದ್ ದ್ರವ್ಯಲಕ್ಷ್ಮ ॥**

*(ತ.ಕ., ಜಡದ್ರವ್ಯಸರ - 7)*

'ತತ್ತ್ವತ್ರಯಮ್', 'ತತ್ತ್ವತ್ರಯಚುಲಕಸಂಗ್ರಹ' ಮೊದಲಾದ ಗ್ರಂಥಗಳಲ್ಲಿ ತತ್ತ್ವಗಳು ಮೂರೆಂಬ ವಿಂಗಡಣೆ ಇದೆ. ಅದರ ಸಾಮಂಜಸ್ಯವನ್ನು ಹೀಗೆ ಅರಿಯಬೇಕು.

ಚಿತ್-ಅಚಿತ್ (ಪ್ರಕೃತಿ) ಈಶ್ವರ ಎಂಬುದಾಗಿ ದ್ರವ್ಯಗಳು (ತತ್ತ್ವಗಳು) ವಿಶೇಷ್ಯವೆನಿಸಿ ಪ್ರಧಾನವಾಗಿರುವವು. ಕಾಲ-ನಿತ್ಯವಿಭೂತಿ-ಧರ್ಮ-ಭೂತಜ್ಞಾನ ಇವು ಪ್ರಧಾನ ದ್ರವ್ಯ (ತತ್ತ್ವ)ಗಳಿಗೆ ವಿಶೇಷಣವೆನಿಸಿವೆ. ಕಾಲ ತತ್ತ್ವವು ಪ್ರಧಾನವಾದ ಮೂರಕ್ಕೂ ಸಂಬಂಧಿಸಿದೆ, ವಿಶೇಷಣವಾಗಿದೆ. ನಿತ್ಯವಿಭೂತಿಯು ಈಶ್ವರನ ಸಂಕಲ್ಪದಿಂದ ವಿಮಾನ-ಗೋಪುರ ಇತ್ಯಾದಿ ರೂಪಗಳನ್ನು ಪಡೆದಿದೆ. ಭಗವಂತನ ಭೋಗಸಾಧನವಾಗಿದೆ. ಧರ್ಮ-ಭೂತಜ್ಞಾನವು, ಆಸರೆ ನೀಡಿದ ಜೀವ - ಈಶ್ವರರಿಗೆ ವಿಶೇಷಣವಾಗಿದೆ. ಈ ಹಿನ್ನೆಲೆಯಲ್ಲಿ ವಿಶೇಷಣವು ವಿಶೇಷ್ಯದಿಂದ ಅಪೃಥಕ್‌ಸಿದ್ಧವಾಗಿದ್ದು, ಅವುಗಳನ್ನು (ವಿಶೇಷಣಗಳನ್ನು) ಪ್ರಧಾನವಾಗಿ ಪರಿಗಣಿಸದೆಯೇ ವಿಶೇಷ್ಯದ್ರವ್ಯಕ್ಕೆ ಹೆಚ್ಚಿನ ಮಹತ್ತ್ವವನ್ನು ಗುರುತಿಸಿ 'ತತ್ತ್ವಮೂರು' ಎನ್ನುವ ವಾದ.ಜಾಗೃತವಾಗಿದೆ.

ಈ ಸಿದ್ಧಾಂತದಲ್ಲಿ ಜಡದ್ರವ್ಯ- ಅಜಡದ್ರವ್ಯವೆಂದು ದ್ರವ್ಯವನ್ನು ವಿಂಗಡಿಸಿ ಜಡ ವಿಭಾಗದಲ್ಲಿ ಪ್ರಕೃತಿ ಕಾಲಗಳನ್ನು ಸೇರಿಸಲಾಗಿದೆ. ಅಜಡದ್ರವ್ಯದಲ್ಲಿ ಪ್ರತ್ಯಕ್ - ಪರಾಕ್ ಎಂಬುದಾಗಿ ಮತ್ತೆ ವಿಭಜಿಸಿ, ತಮ್ಮ ಅರಿವನ್ನು ಹೊಂದಿದ ಜೀವ ಪರಮಾತ್ಮರನ್ನು ಪ್ರತ್ಯಕ್ ಪ್ರಭೇದವಾಗಿ ವರ್ಣಿಸಿಲಾಗಿದೆ.'ಪರಾಕ್' ಗುಂಪಿನಲ್ಲಿ ಧರ್ಮಭೂತಜ್ಞಾನ ನಿತ್ಯ ವಿಭೂತಿಗಳನ್ನು ಸೇರಿಸಲಾಗಿದೆ. ಇಲ್ಲಿ ಒಂದು ಸೂಕ್ಷ್ಮ ಚಿಂತನೆ ಇದೆ. ವಾಸ್ತವದಲ್ಲಿ ಜೀವ-ಪರಮಾತ್ಮರನ್ನು ಹೊರತು ಪಡಿಸಿದರೆ, ಬಾಕಿ ಉಳಿದ ಕಾಲ-ಪ್ರಕೃತಿ- ಧರ್ಮಭೂತಜ್ಞಾನ-ನಿತ್ಯವಿಭೂತಿ ಜಡದಲ್ಲಿಯೇ ಸೇರಬೇಕಾಗುವುದು. ಆಗ 'ಅಜಡ'ವೆಂಬ ವರ್ಗೀಕರಣ ಹೇಗೆ ? ಎಂಬ ಪ್ರಶ್ನೆ ಸಹಜ. ಆದರೆ ಕಾಲ-ಪ್ರಕೃತಿಗಳು ಸ್ವತಃ ಸ್ಫುರಣ (ಪ್ರಕಾಶ)ರಹಿತವಾಗಿವೆ. ಇದರಂತೆ ಅವುಗಳು ಜ್ಞಾನ-ಸುಖಸಾಧನಗಳಲ್ಲ.

ಆದರೆ ಧರ್ಮಭೂತಜ್ಞಾನ ಮತ್ತು ನಿತ್ಯವಿಭೂತಿಯಲ್ಲಿ ಕಾಲ - ಪ್ರಕೃತಿಗಳಿಗಿಲ್ಲದ ವೈಶಿಷ್ಟ್ಯವಿದೆ. ಇವೆರಡಕ್ಕೂ 'ನಾನು' ಎಂಬ ಅನುಭವ

ಇಲ್ಲದಿದ್ದರೂ ಇತರರಿಗೆ ಪ್ರಕಾಶವನ್ನು ನೀಡುತ್ತವೆ. ಈ ವೈಶಿಷ್ಟ್ಯವನ್ನು ಗುರುತಿಸಿ ಅಜಡ ಮತ್ತು ಪರಾಕ್ ಎಂದು ಕರೆಯಲಾಗಿದೆ.

ಇನ್ನೊಂದು ಅಂಶವನ್ನು ಗಮನಿಸಬೇಕು -

ಕೆಲವು ಸಿದ್ಧಾಂತಗಳ ಪ್ರಕಾರ ಪರಮಾತ್ಮನು ಕೇವಲ 'ಪ್ರತ್ಯಗಾತ್ಮಾ' ಎನಿಸುವನು. ವಿಶಿಷ್ಟಾದ್ವೈತಸಿದ್ಧಾಂತದ ಪ್ರಕಾರ, ಎಲ್ಲ ಆತ್ಮರಿಗೂ ತಮಗಿರುವ ತಮ್ಮ ಅರಿವನ್ನು ಗಮನದಲ್ಲಿಸಿಕೊಂಡಾಗ ಅವರು 'ಪ್ರತ್ಯಗಾತ್ಮಾ' (ಸ್ವಸ್ಮೈಭಾಸಮಾನಮ್) ಆಗಬಲ್ಲರು. ಇನ್ನೊಬ್ಬರು 'ನೀನು' 'ಅವನು' ಇತ್ಯಾದಿಯಾಗಿ ವ್ಯವಹರಿಸುವುದರಿಂದ 'ಪರಾಕ್ ಆತ್ಮಾ' ಎಂದೂ ಕರೆಸಲ್ಪಡುವರು. ಜಡವು ಅಸ್ವಪ್ರಕಾಶವಾಗಿದೆ. ಸ್ವತಃಭಾಸಮಾನವಾದುದು ಅಜಡ'ವೆನಿಸುವುದು. ಹೀಗೆ ಪದಗಳು ಇತರದರ್ಶನಗಳಿಗಿಂತ ಭಿನ್ನ ಭಿನ್ನವಾದ ಅರ್ಥಗಳನ್ನು ಹೊಂದಿವೆ.

ಇನ್ನು ದ್ರವ್ಯಗಳ ಬಗ್ಗೆ ಸ್ವಲ್ಪವಿಸ್ತಾರವಾಗಿ ತಿಳಿದುಕೊಳ್ಳೋಣ. ಪ್ರಕೃತಿ-ಕಾಲ-ಪರಮಾತ್ಮ-ಧರ್ಮಭೂತಜ್ಞಾನ-ನಿತ್ಯವಿಭೂತಿ ಎಂಬುದಾಗಿ ಆರು ಜಡ ದ್ರವ್ಯಗಳು.

### 1. ಪ್ರಕೃತಿ

ಅವಿದ್ಯಾ-ಮಾಯಾ-ಮೂಲಪ್ರಕೃತಿ-ಅವ್ಯಕ್ತ-ಅಕ್ಷರ-ತ್ರಿಗುಣ ಇತ್ಯಾದಿ ಶಬ್ದಗಳಿಂದ ಕರೆಸಿಕೊಳ್ಳಲ್ಪಡುವ ಜಡದ್ರವ್ಯವಿದು.

ಶುದ್ಧ(ಯಥಾರ್ಥ)ವಾದ ಜ್ಞಾನ ಹುಟ್ಟಲು ಇದು ಪ್ರತಿಬಂಧಕವಾದುದರಿಂದ ಇದನ್ನು 'ಅವಿದ್ಯೆ' ಎನ್ನುವರು. ನಾನಾ ವೈಚಿತ್ರ್ಯೋಪೇತ ವಸ್ತುಸೃಷ್ಟಿಗೆ ಕಾರಣವಾದುದರಿಂದ 'ಮಾಯಾ' ಎನ್ನುವರು. ಸತ್ತ್ವ-ರಜಸ್-ತಮೋಗುಣಗಳಿಗೆ ಆಶ್ರಯವಾದುದರಿಂದ 'ತ್ರಿಗುಣ' ಮತ್ತು ನಿತ್ಯವಾದುದರಿಂದ 'ಅಕ್ಷರ' ಎನಿಸುವುದು. ಸೂಕ್ಷ್ಮವಾದುದರಿಂದ 'ಅವ್ಯಕ್ತ' ಎನಿಸಿದೆ.

ಇದರ ಸ್ವಭಾವವನ್ನು ಹೀಗೆ ವರ್ಣಿಸಲಾಗಿದೆ -

**ಅಚೇತನಾ ಪರಾರ್ಥಾ ಸಾ ನಿತ್ಯಾ ಸತತವಿಕ್ರಿಯಾ ।**
**ತ್ರಿಗುಣಾ ಕರ್ಮಿಣಾಂ ಕ್ಷೇತ್ರಂ ಪ್ರಕೃತೇ ರೂಪಮುಚ್ಯತೇ ॥**

*(ತ.ಭಾ., ಪು. 47)*

ಪ್ರಕೃತಿಯು ಅಚೇತನ. ಪರಪ್ರಯೋಜನಕ್ಕಾಗಿ ಇರುವುದು. ನಿತ್ಯವೂ

ವಿಕಾಸಶೀಲವೂ ಆಗಿದೆ. ಸತ್ತ್ವ-ರಜಸ್-ತಮೋಗುಣಗಳಿಂದ ಕೂಡಿದೆ. ಸಂಸಾರಿಗಳಿಗೆ ಮೂಲಬೀಜವಾಗಿದೆ.

ಪ್ರಕೃತಿಯ ಸ್ವರೂಪ ಮತ್ತು ಮಹತ್ತತ್ತ್ವ ಅಹಂಕಾರ ತತ್ತ್ವ ಹನ್ನೊಂದು ಇಂದ್ರಿಯಗಳು ಪಂಚತನ್ಮಾತ್ರಗಳು (ಒಟ್ಟು ಹತ್ತೊಂಬತ್ತು) ಇವುಗಳ ಸ್ವರೂಪವು ವೇದದಿಂದ ತಿಳಿದು ಬರುತ್ತವೆ. ಇವೆಲ್ಲ ಇಂದ್ರಿಯಗೋಚರವಲ್ಲದ ಕಾರಣ ಪ್ರತ್ಯಕ್ಷಪ್ರಮಾಣಸಿದ್ಧವಲ್ಲ. ಹೇತುಜ್ಞಾನ ಮತ್ತು ವ್ಯಾಪ್ತಿಜ್ಞಾನ ದಿಂದ ಜನಿಸದಿರುವ ಕಾರಣ ಅನುಮಾನದಿಂದಲೂ ಸಿದ್ಧಿಸುವುದಿಲ್ಲ.

ಸತ್ತ್ವ ರಜಸ್ತಮೋಗುಣಗಳ ಏರಿಳಿತಗಳಿಂದ ಮಹತ್ತತ್ತ್ವವು ಸಾತ್ತ್ವಿಕ-ರಾಜಸ-ತಾಮಸ ಎಂಬ ಪ್ರಭೇದವನ್ನು ಹೊಂದಿರುವಂತೆ ಅದರ ವಿಕಾಸವಾದ ಅಹಂಕಾರತತ್ತ್ವದಲ್ಲೂ ಇದೇ ಬಗೆಯ ಪ್ರಭೇದವಿದೆ.

ಮೊದಲನೆಯದಾದ ಸಾತ್ತ್ವಿಕಾಹಂಕಾರದಿಂದ ಪಂಚಜ್ಞಾನೇಂದ್ರಿಯಗಳು (ಘ್ರಾಣ-ರಸನ-ಚಕ್ಷುಸ್-ಶ್ರೋತ್ರ-ತ್ವಕ್) ಪಂಚಕರ್ಮೇಂದ್ರಿಯ ಗಳು (ವಾಕ್-ಪಾಣಿ-ಪಾದ-ಪಾಯು-ಉಪಸ್ಥ) ಮನಸ್ಸು ಎಂಬುದಾಗಿ ಒಟ್ಟು ಹನ್ನೊಂದು ಇಂದ್ರಿಯಗಳು ಉತ್ಪನ್ನವಾಗುವವು. ಸಾಂಖ್ಯರು ಅಂತಃಕರಣವನ್ನು ಮನಸ್ಸು-ಬುದ್ಧಿ-ಅಹಂಕಾರ ಎಂಬುದಾಗಿ ವಿಂಗಡಿಸುವರು. ಯೋಗಸಿದ್ಧಾಂತವು ಚಿತ್ತವೆಂಬ ನಾಲ್ಕನೆಯ ಪ್ರಭೇದವನ್ನು ಒಪ್ಪಿದೆ. ಆದರೆ, 'ಕಾಮಃ ಸಂಕಲ್ಪಃ ವಿಚಿಕಿತ್ಸಾ ಶ್ರದ್ಧಾ' ಇತ್ಯಾದಿಯಾಗಿ ಕಾಮ-ಸಂಕಲ್ಪ ಇತ್ಯಾದಿಗಳು ಮನಸ್ಸಿನ ವೃತ್ತಿ ವಿಶೇಷಗಳೇ.

ಅಂತಿಮವಾದ ತಾಮಸಾಹಂಕಾರವು ಶಬ್ದ-ಸ್ಪರ್ಶ-ರೂಪ-ರಸ-ಗಂಧವೆಂಬ ತನ್ಮಾತ್ರಕ್ಕೆ ಕಾರಣವಾಗಿದೆ. ಮಧ್ಯಮವಾದ ರಾಜಸಾಹಂಕಾರವು ಎರಡರ ವಿಕಾಸಕ್ಕೆ ಸಹಕಾರಿಯಾಗಿದೆ. ನಿಗಮಾಂತಮಹಾದೇಶಿಕರ ತತ್ತ್ವಮುಕ್ತಾಕಲಾಪದಲ್ಲಿ ಈ ವಿಷಯ ಸ್ಫುಟ ವಾಗಿದೆ-

**ಸ್ವಚ್ಛಂದೇನಾಗಮೇನ ಪ್ರಕೃತಿಮಹದಂಕಾರಮಾತ್ರಾಕ್ಷಸಿದ್ಧಿಃ**
**ನಾಧ್ಯಕ್ಷೇಣಾಪ್ರತೀತೇರ್ನ ಪುನರನುಮಯಾ ವ್ಯಾಪ್ತಿಲಿಂಗಾದ್ಯಸಿದ್ಧೇಃ ।**
**ಸತ್ತ್ವಾದ್ಯುನ್ಮೇಷಭಿನ್ನಾನ್ಮಹತ ಇಹ ತಥಾ ಸ್ಯಾದಹಂಕಾರಭೇದಃ**
**ಪ್ರಾಚ್ಯಾದಕ್ಷಾಣಿ ಮಾತ್ರಾಃ ಪ್ರಜನಯತಿ ಪರೋ ಮಧ್ಯಮಸ್ತೂಭಯಾರ್ಥಃ ॥**

*(ತ.ಕ., ಜಡದ್ರವ್ಯಸರ - 11)*

ಇನ್ನು ಅಹಂಕಾರತತ್ತ್ವದಿಂದ ಜನಿಸಿದ ಶಬ್ದತನ್ಮಾತ್ರವು 'ಆಕಾಶ'ವಾಗಿ ರೂಪುಗೊಳ್ಳುವುದು. ಇದರಂತೆ ಆಯಾ ತನ್ಮಾತ್ರಗಳ ಮೂಲಕ (ಸ್ಪರ್ಶ-ರೂಪ-ರಸ-ಗಂಧಗಳಮೂಲಕ) ಕ್ರಮವಾಗಿ ವಾಯು-ಅಗ್ನಿ-ಜಲ- ಪೃಥಿವೀ ತತ್ತ್ವಗಳು ಜನಿಸುವವು. ಇದು 'ಅಕಾಶಾದ್ ವಾಯುಃ' ಇತ್ಯಾದಿ ಶ್ರುತಿಸಿದ್ಧವಾದ ನಿರೂಪಣಕ್ರಮವಾಗಿದೆ. ಹಾಲಿಗೆ ಮೊಸರನ್ನು ಬೆರೆಸಿ ಹೆಪ್ಪು ಹಾಕಿದಾಗ ಅದು ಮೊಸರಾಗುತ್ತದೆ. ಕ್ಷೀರವು ತನ್ನ ಗುಣವನ್ನು ಬದಲಾಯಿಸುವ, ಮೊಸರಾಗಿ ಪರಿವರ್ತನೆಗೊಳ್ಳುವ ಮಧ್ಯದ ಸ್ಥಿತಿಯನ್ನು 'ಕಲಲ' ಎನ್ನುತ್ತಾರೆ. ಹೀಗೆ ಹಿಂದಿನ ಭೂತ ಮತ್ತು ಮುಂದಿನ ಭೂತದ ಉತ್ಪತ್ತಿಗೂ ಇರುವ ಮಧ್ಯದ ಸ್ಥಿತಿ (ಸೂಕ್ಷ್ಮತತ್ತ್ವ) 'ತನ್ಮಾತ್ರ'ವೆನಿಸಿದೆ –

**ತತ್ರಾಹಂಕಾರಜನ್ಯಂ ಭಜತಿ ಪರಿಣತೈಃ ಶಬ್ದಮಾತ್ರಂ ನಭಸ್ತ್ವಂ**
**ತದ್ವತ್ತನ್ಮಾತ್ರಪೂರ್ವಾಸ್ತದುಪರಿ ಮರುದಗ್ನ್ಯಂಬುಭೂಮ್ಯಃ ಕ್ರಮಾತ್ಸ್ಯುಃ ।**
**ಸೂಕ್ಷ್ಮಸ್ಥೂಲಸ್ವಭಾವ ಸ್ವಗುಣಸಮುದಯ ಪ್ರಕ್ರಿಯಾತಾರತಮ್ಯಾತ್**
**ತನ್ಮಾತ್ರಾ ಭೂತಭೇದಃ ಕಲಲದಧಿನಯಾತ್ ಕಲ್ಪಿತಸ್ತತ್ತ್ವವಿದ್ಭಿಃ ॥**

*(ತ.ಕ., ಜಡದ್ರವ್ಯಸರ – 12)*

ಇದನ್ನು ಹೀಗೆ ವಿವರಿಸಬಹುದು–




ತಾಮಸಾಹಂಕಾರದಿಂದ – ಶಬ್ದತನ್ಮಾತ್ರ
ಶಬ್ದ ತನ್ಮಾತ್ರದಿಂದ – ಆಕಾಶ

| | | |
|---|---|---|
| ಆಕಾಶದಿಂದ | - | ಸ್ಪರ್ಶತನ್ಮಾತ್ರ |
| ಸ್ಪರ್ಶತನ್ಮಾತ್ರದಿಂದ | - | ವಾಯು |
| ವಾಯುವಿನಿಂದ | - | ರೂಪತನ್ಮಾತ್ರೆ |
| ರೂಪತನ್ಮಾತ್ರೆಯಿಂದ | - | ತೇಜಸ್ಸು |
| ತೇಜಸ್ಸಿನಿಂದ | - | ರಸತನ್ಮಾತ್ರೆ |
| ರಸತನ್ಮಾತ್ರೆಯಿಂದ | - | ಜಲ |
| ಜಲದಿಂದ | - | ಗಂಧತನ್ಮಾತ್ರ |
| ಗಂಧತನ್ಮಾತ್ರದಿಂದ | - | ಪೃಥಿವೀ |

ಇನ್ನು ಕ್ರಮವಾಗಿ ಸಂಕ್ಷೇಪವಾಗಿ ಭೂತಗಳ ಪರಿಚಯ ಮಾಡಿ ಕೊಳ್ಳೋಣ.

**ಆಕಾಶ**

'ಆಕಾಶವು ನೀಲಿಯಾಗಿದೆ' ಎಂಬ ಪ್ರತ್ಯಕ್ಷಾನುಭವ ಎಲ್ಲರಿಗಿದೆ. ವೈಶೇಷಿಕರು ಹೇಳುವಂತೆ ಆಕಾಶವು ಅನುಮಾನ ಪ್ರಮಾಣಸಿದ್ಧವಲ್ಲ. 'ಆತ್ಮನ ಆಕಾಶಃ ಸಂಭೂತಃ' ಎಂಬ ಶ್ರುತಿ ಪ್ರಮಾಣ ಇರುವುದರಂದ ಆಕಾಶಕ್ಕೂ ಉತ್ಪತ್ತಿ ಇದೆ. ಅದು ನಿರವಯವ ಮತ್ತು ವಿಭುವಲ್ಲ. ಇದರಂತೆ ವೈಶೇಷಿಕರ, 'ದಿಕ್ ಎಂಬುದು ಅತಿರಿಕ್ತ 'ದ್ರವ್ಯ'ವೆಂಬ ವಾದವೂ ಅನುಚಿತ. ಆಕಾಶಕ್ಕೇ ಪ್ರದೇಶಾದ್ಯುಪಾಧಿ ಭೇದದಿಂದ 'ದೂರ' 'ಹತ್ತಿರ' ಎಂಬ ಧರ್ಮಗಳನ್ನು ಒಪ್ಪಬಹುದು. ಅತಿರಿಕ್ತವಾದ 'ದಿಕ್‌ದ್ರವ್ಯ'ವನ್ನು ಅಂಗೀಕರಿಸಿದರೂ ಉಪಾಧಿ ಭೇದದಿಂದಲೇ ಅಲ್ಲಿ ಪರತ್ವಾಪರತ್ವ ವ್ಯವಹಾರವನ್ನು ನಿರ್ವಹಿಸ ಬೇಕಾಗುವುದು.ಆಕಾಶ ದ್ರವ್ಯವೇ ಉಪಾಧಿಗಳಿಂದ ಪರತ್ವಾಪರತ್ವವ್ಯವಹಾರ ಕಾರಣವಾಗಬಹುದಾದ್ದರಿಂದ ಅತಿರಿಕ್ತ ದಿಕ್‌ದ್ರವ್ಯ ಒಪ್ಪುವ ಕಾರಣವಿಲ್ಲ. ಆದ್ದರಿಂದ ಆಕಾಶವು ದಿಗ್ವ್ಯವಹಾರವನ್ನು ನಿರ್ವಹಿಸಬಲ್ಲದು. ಅದು ಅನಿತ್ಯ ಮತ್ತು ಪರಿಮಿತ -

**'ಆಕಾಶಃ ಪ್ರತ್ಯಕ್ಷಃ ಶಬ್ದಮಾತ್ರಗುಣಕೋ ಅವಕಾಶಹೇತುಃ ।' 'ನೀಲಂ ನಭಃ' ಇತಿ ಪ್ರತೀತೇಃ ಪಂಚೀಕರಣಪ್ರಕ್ರಿಯಯಾ ರೂಪವಾಂಶ್ಚ । ಏತೇನಾऽಕಾಶ-ಸ್ಯಾಜನ್ಯತ್ವನಿರಾಸಃ । ಸೂರ್ಯಪರಿಸ್ಪಂದಾದಿಭಿರಾಕಾಶಸ್ಯೈವ ಪ್ರಾಚ್ಯಾದಿವ್ಯವ-ಹಾರೋಪಪತ್ತೌ ದಿಗಿತಿ ನ ಪೃಥಗ್ ದ್ರವ್ಯಕಲ್ಪನಮ್।** *(ಯ.ದೀ. ಪು.40. )*

**ವಾಯು**

ವೈಶೇಷಿಕರು, ಸ್ಪರ್ಶಗುಣವು ತ್ವಗಿಂದ್ರಿಯಗ್ರಾಹ್ಯವಾಗಿದ್ದು ಸ್ಪರ್ಶಗುಣಕ್ಕೆ ಆಶ್ರಯವಾದ ದ್ರವ್ಯವು ವಾಯುವೆಂದು ಅನುಮಾನದಿಂದ ವಾಯುವನ್ನು ಸಾಧಿಸುತ್ತಾರೆ. ಆದರೆ 'ದೀಪವು ಪ್ರಕಾಶಿಸುತ್ತದೆ' 'ಗಾಳಿಯು ಬೀಸುತ್ತಿದೆ' ಇತ್ಯಾದಿ ಅನುಭವವನ್ನು ವಿಮರ್ಶಿಸಿದಾಗ ದೀಪವು ಚಕ್ಷುರಿಂದ್ರಿಯ- ಗ್ರಾಹ್ಯವೂ ಗಾಳಿಯು ತ್ವಗಿಂದ್ರಿಯ ಪ್ರತ್ಯಕ್ಷ ವಿಷಯವೂ ಆಗಿರುವುದು ಅಂಗೀಕಾರಾರ್ಹ. ಆದ್ದರಿಂದ ವಾಯು ಪ್ರತ್ಯಕ್ಷ ಗ್ರಾಹ್ಯವಾಗಿದೆ-

**ವಾತೋ ವಾತೀತಿ ಸಾಕ್ಷಾನ್ಮತಿರಿತರಸಮಾ ಸ್ಪರ್ಶತೋ ನಾನುಮಾಽಸೌ**

*(ತ.ಕ., ಜಡದ್ರವ್ಯಸರ - 51)*

**ತೇಜಸ್ಸು**

ಬೆಳಕು ದೀಪದ ಧರ್ಮ. ಇದು ದೀಪದ ಹತ್ತಿರ ದಟ್ಟವಾಗಿದ್ದು ದೂರ ಪ್ರದೇಶದಲ್ಲಿ ಕಡಿಮೆ (ಅಸ್ಪಷ್ಟ) ಆಗುವುದು ಅನುಭವಸಿದ್ಧ. ದೀಪ ಮತ್ತು ಪ್ರಭೆ ತೇಜೋದ್ರವ್ಯಗಳಾದುದರಿಂದ ಪರಸ್ಪರ ಧರ್ಮ-ಧರ್ಮಿಭಾವ ಬರಲಾರದು ಎರಡೂ ಒಂದೆ ದ್ರವ್ಯವೆಂಬ ವಾದ ಸಲ್ಲದು. ಆದರೆ 'ದೀಪದ ಬೆಳಕು' ಎಂಬ ಅನುಭವವೇ ಅವುಗಳಲ್ಲಿರುವ ಭೇದವನ್ನು ಸ್ಫುಟವಾಗಿ ಸಾರುತ್ತದೆ.

ಸುವರ್ಣವು ತೈಜಸವೆಂದು ವೈಶೇಷಿಕರ ವಾದ. ಆದರೆ ಪೃಥಿವಿ ಯಲ್ಲಿರುವ ಹಳದಿಬಣ್ಣ ಕಾಠಿಣ್ಯಗಳು ಅಲ್ಲಿ ಕಾಣುವುದರಿಂದ ಅದನ್ನು ಪಾರ್ಥಿವವೆನ್ನುವುದೇ ಉಚಿತ. ಸ್ಮೃತಿಗ್ರಂಥಗಳಲ್ಲಿ ಸುವರ್ಣದಲ್ಲಿರುವ ಶುದ್ಧಿಯನ್ನು ಗಮನದಲ್ಲಿರಿಸಿ ಕೊಂಡು ಅದನ್ನು 'ತೈಜಸ'ವೆಂದು ವ್ಯವಹರಿಸಲಾಗಿದೆ. ಆದರೆ ವಾಸ್ತವವಾಗಿ ಅದು ಪಾರ್ಥಿವ ದ್ರವ್ಯ-

**ವರ್ಣಾನಾಂ ತಾದೃಶತ್ವಾದತಿಕಠಿನತಯಾ ಗೌರವಸ್ಯಾಪಿ ಭೂಮ್ನಾ**
**ಧಾತ್ರೀಭಾಗೈಃ ಪ್ರಭೂತೈಃ ಸ್ಫುಟಮಿಹ ಘಟಿತಾ ಧಾತವೋ ಹಾಟಕಾದ್ಯಾಃ।**
**ತಾದೃಕ್ತ್ವೇಽಪಿ ಸ್ಫುರತ್ತಾದ್ಯನಿತರ ಸುಲಭಂ ಕಿಂಚಿದನ್ವೀಕ್ಷ್ಯ ತದ್‌ಜ್ಞೈಃ**
**ವ್ಯಾಖ್ಯಾತಂ ತೈಜಸತ್ವಂ ವಿಧಿತದಿತರಯೋಸ್ತತ್ರ ಸೌಕರ್ಯಸಿದ್ಧ್ಯೈ ॥**

*(ತ.ಕ., ಜಡದ್ರವ್ಯಸರ - 59 )*

**ಜಲ + ಪೃಥಿವೀ**

ಜಲದಬಗ್ಗೆ ಹೇಳಬೇಕಾದುದಿಲ್ಲ. ವಾಯುವಿನಿಂದ ಅಗ್ನಿ, ಅಗ್ನಿಯಿಂದ ಜಲ,

ಜಲದಿಂದ ಪೃಥ್ವಿ ಎಂಬ ಭೂತಗಳು ಜನ್ಮ ಪಡೆಯುತ್ತವೆ. ತೇಜಸ್ಸಿನ ಅಭಾವವೇ ತಮಸ್ಸೆನ್ನುವುದು ವೈಶೇಷಿಕರ ವಾದ. ಇದನ್ನು ವಿಶಿಷ್ಟಾದ್ವೈತ ಸಿದ್ಧಾಂತ ಒಪ್ಪುವುದಿಲ್ಲ. ಪೃಥ್ವಿಯಲ್ಲಿರುವ ನೀಲವರ್ಣ ಮತ್ತು ಚಲನೆ - ನಿಬಿಡತೆ - ವಿರಳತೆ ಇತ್ಯಾದಿಗುಣಗಳು ತಮಸ್ಸಿನಲ್ಲಿ ಕಾಣುವುದರಿಂದ ತಮಸ್ಸನ್ನು ಪಾರ್ಥಿವವೆನ್ನುವುದು ಸಮುಚಿತ. '**ನಾಽಸೀತ್ತಮೋ ನ ಜ್ಯೋತಿರಭೂತ್**' ಎಂಬ ಶ್ರುತಿವಚನವು ತೇಜಸ್ಸು ತಮಸ್ಸುಗಳೆಂಬ ಎರಡು ದ್ರವ್ಯಗಳನ್ನು ಉಲ್ಲೇಖಿಸಿ ರುವುದು ಇಲ್ಲಿ ಗಮನಾರ್ಹ.

'**ಯಸ್ಯ ತೇಜಃ ಶರೀರಂ ಯಸ್ಯ ತಮಶ್ಶರೀರಮ್**' ಎಂಬ ಶ್ರುತಿವಚನವು ಸ್ವತಂತ್ರವಾಗಿ ತೇಜಸ್ಸು ಮತ್ತು ತಮಸ್ಸುಗಳನ್ನು ಪರಮಾತ್ಮನ ಶರೀರವೆಂದು ವಿವರಿಸಿದೆ. ಈ ಹಿನ್ನೆಲೆಯಲ್ಲಿ ತೇಜಸ್ಸಿನ ಅಭಾವವೇ ತಮಸ್ಸಲ್ಲ. ಅದು ಪಾರ್ಥಿವ-

**ನೈಲ್ಯಾದ್ ಭೌಮಂ ತಮಿಸ್ರಂ ಚಟುಲಬಹಲತಾದ್ಯನ್ವಯಾತ್‌ತನ್ನ ನೈಲ್ಯಂ**
**ಛಾಯಾವತ್ಪಾರತಂತ್ರ್ಯಂ ತ್ವಯಸ ಇವ ಮಣೌ ದೃಷ್ಟಿಸಿದ್ಧಾತ್ ಸ್ವಭಾವಾತ್।**

*(ತ.ಕ., ಶ್ಲೋಕ. 60)*

**....ಧ್ವಾಂತಂ ತೇಜಶ್ಚ ನಾಽಸೀದಿತಿ ಮುನಿಭಿರುಪಾಖ್ಯಾಯಿ ಸಂವರ್ತವಾರ್ತಾ**
**ಭಾವಾಭಾವೌ ನಿಷೇದ್ಧುಂ ತದುಭಯವಿಧಿವದ್ ವ್ಯಾಹತತ್ವಾದಶಕ್ಯಮ್।**

*(ಶ್ಲೋಕ. 62)*

**2. ಕಾಲ**

ಶೈವೈಕದೇಶಿಗಳು ಕಾಲವನ್ನು ಅನಿತ್ಯ ಮತ್ತು ಅವ್ಯಾಪ್ತವೆನ್ನುತ್ತಾರೆ. ಆದರೆ ಸಿದ್ಧಾಂತವು ಕಾಲವು ನಿತ್ಯ ಮತ್ತು ವಿಭು ಎಂದು ಸಾರಿದೆ. ಕಾಲಕ್ಕೆ ಉತ್ಪತ್ತಿಯನ್ನು ಹೇಳುವವರು 'ಇಂತಹ ಕಾಲದಲ್ಲಿ' ಕಾಲಹುಟ್ಟಿತು ಎಂದರೆ ಕಾಲ ಮೊದಲಿದ್ದಂತಾಗಲಿಲ್ಲವೆ ? 'ಕಾಲಹುಟ್ಟುವ ಮೊದಲು ಕಾಲವಿರಲಿಲ್ಲ' ಎಂದರೆ ವ್ಯಾಘಾತಬಾರದೆ ? ಆದ್ದರಿಂದ ಕಾಲ ನಿತ್ಯ.

ಕಾಲವು ಅತೀಂದ್ರಿಯವೆನ್ನುವರು ವೈಶೇಷಿಕರು. ಇದು ಯುಕ್ತವಲ್ಲ. ವಸ್ತುವಿನ ದರ್ಶನವಾದಾಗ ವಿಶೇಷಣವಾದ ಕಾಲವು ಪ್ರತ್ಯಕ್ಷದಿಂದಲೇ ಗೃಹೀತವಾಗುವುದು. 'ನೀಲಃ ಘಟಃ' ಎಂಬ ವ್ಯವಹಾರದಲ್ಲಿ ಘಟಕ್ಕೆ ವಿಶೇಷಣವಾದ ನೈಲ್ಯವು, ಘಟದಲ್ಲಿ ಇತರವರ್ಣಗಳಿಂದ ಭೇದಜ್ಞಾನವನ್ನು ತಂದುಕೊಂಡುವುದು. 'ಐದು ನಿಮಿಷದಲ್ಲಿ ಈ ಕೆಲಸವಾಯಿತು' ಎಂಬ

ವ್ಯವಹಾರದಲ್ಲಿ ಘಟಿಕಾ-ಮುಹೂರ್ತ ದಿನಗಳಿಂದ ವ್ಯಾವೃತ್ತಿ ಜ್ಞಾನವನ್ನು 'ಐದುನಿಮಿಷ' ಎಂಬುದಾಗಿ ತಿಳಿಸುವ ಆ ವಿಶೇಷಣ ತಂದು ಕೊಡುತ್ತದೆ. ಇದರಿಂದ ಕ್ಷಣದ ಕೆಲಸ-ನಿಮಿಷದ ಕೆಲಸ-ಮುಹೂರ್ತದ ಕೆಲಸ ಇತ್ಯಾದಿಗಳಲ್ಲಿ ಭೇದವು ತಿಳಿದು ಬರುತ್ತದೆ. ಈ ಪ್ರತೀತಿಯಲ್ಲಿ ಕಾಲವು ನೈಲ್ಯಾದಿಗಳಂತೆ ವಿಶೇಷಣವಾಗಿದ್ದು ವಸ್ತು ತೋರುವಾಗಲೇ ಪ್ರತ್ಯಕ್ಷ ವಾಗುತ್ತದೆ.

ವಿಶೇಷಣವಾಗಿ ತೋರುವುದೆಲ್ಲ ಎಲ್ಲ ಕಡೆಗೂ ಪ್ರತ್ಯಕ್ಷವಾಗುವುದೆಂಬುದು ನಮ್ಮ ಆಶಯವಲ್ಲ. ಆದರೆ ಘಟಾದಿವಸ್ತುಗಳು ತೋರುವಾಗ ವರ್ತಮಾನಕಾಲ ಸಂಬಂಧ ಗೃಹೀತವಾಗುತ್ತಿರುವುದನ್ನು ಯಾರೂ ಅಲ್ಲಗಳೆಯಲಾಗದು.

ಕಾಲವು, ವರ್ಷ ಮಾಸಾದ್ಯುಪಾಧಿಗಳಿಂದ ಭಿನ್ನವಾದರೂ 'ಏಕ'ವೆನ್ನುತ್ತಾರೆ ವೈಶೇಷಿಕರು. ಮತ್ತೆ ಕೆಲವರು ಕಾಲವೇ ವರ್ಷ-ಮಾಸಾದಿ ಭೇದದಿಂದ ಪರಿಣಾಮ ಹೊಂದುವುದೆನ್ನುತ್ತಾರೆ. ಒಟ್ಟಾರೆ, ಕಾಲವು ವಿಭುವೂ ನಿತ್ಯವೂ ಆಗಿದ್ದು ಪರಿಣಾಮವಿಶೇಷಣಗಳಿಂದ ವಿಶ್ವದ ಸಕಲ ಕಾರ್ಯಗಳಿಗೆ ನಿಮಿತ್ತ ಕಾರಣವೆನಿಸುವುದು.

### 3. ನಿತ್ಯವಿಭೂತಿ

ಅಚೇತನಗಳಲ್ಲಿ ಪ್ರಕೃತಿ - ಕಾಲಗಳನ್ನು ತಿಳಿದೆವು. ಜ್ಞಾನವಿಲ್ಲದ್ದು ಮತ್ತು ವಿಕಾರಕ್ಕೆ ಆಸ್ಪದವಾದುದು'ಅಚೇತನ' ವೆನಿಸಿದೆ. ಇಂತಹ ಅಚೇತನವು ಶುದ್ಧ ಸತ್ತ್ವ - ಮಿಶ್ರಸತ್ತ್ವ - ಸತ್ತ್ವ ಶೂನ್ಯ ಎಂಬುದಾಗಿ ಮೂರು ಬಗೆ. ಇದರಲ್ಲಿ ಮಿಶ್ರಸತ್ತ್ವವುಳ್ಳ 'ಪ್ರಕೃತಿ'ಯ ಪರಿಚಯ ಮಾಡಿಕೊಂಡೆವು. ಸತ್ತ್ವಶೂನ್ಯವಾದ ಕಾಲವನ್ನೂ ತಿಳಿದೆವು. ಇದೀಗ ಶುದ್ಧಸತ್ತ್ವಾತ್ಮಕವಾದ 'ನಿತ್ಯವಿಭೂತಿ'ಯನ್ನು ಪರಿಚಯಿಸಿಕೊಳ್ಳೋಣ. ಈ ನಿತ್ಯವಿಭೂತಿಯು ರಜಸ್ಸು-ತಮಸ್ಸುಗಳಿಂದ ಮಿಶ್ರಣ ಹೊಂದದ ಕೇವಲ ಶುದ್ಧಸತ್ತ್ವಾತ್ಮಕವಾಗಿದೆ. ನಿತ್ಯ ಮತ್ತು ಜ್ಞಾನಾನಂದ ಜನಕವಾಗಿದೆ. ಕೇವಲ ಭಗವದಿಚ್ಛೆಯಂತೆ ವಿಮಾನ ಗೋಪುರ-ಮಂಟಪ-ಪ್ರಾಸಾದಾದಿರೂಪಗಳನ್ನು ತಳೆಯುತ್ತದೆ. ನಿರೀಕ್ಷೆಗೆ ನಿಲುಕದ ತೇಜೋವಿಶೇಷ ಪೂರ್ಣವು. ನಿತ್ಯ ಜೀವರು, ಮುಕ್ತಜೀವರು ಮತ್ತು ಪರಮಾತ್ಮನಿಂದಲೂ ಅರಿಯಲು ಸಾಧ್ಯವಿಲ್ಲದ ಅದ್ಭುತವಸ್ತು- **'ತತ್ರ ಶುದ್ಧಸತ್ತ್ವಂ ನಾಮ ರಜಸ್ತಮೋಽಮಿಶ್ರಕೇವಲಸತ್ತ್ವಂ ನಿತ್ಯಂ ಜ್ಞಾನಾನಂದಜನಕಂ ಕರ್ಮಣಾ ವಿನಾ ಕೇವಲಭಗವದಿಚ್ಛಯಾ ವಿಮಾನಗೋಪುರಮಂಡಪಪ್ರಾಸಾದಾದಿರೂಪೇಣ**

**ಪರಿಣತಂ ನಿರವಧಿಕತೇಜೋರೂಪಂ ನಿತ್ಯಮುಕ್ತೈರೀಶ್ವರೇಣ ಚ ಪರಿಚ್ಛೇತ್ತು-ಮಶಕ್ಯಮತ್ಯದ್ಭುತಂ ವಸ್ತು।** *(ತ.ತ್ರ., ಪು. 41)*

**'ಲಕ್ಷಣ ಪ್ರಮಾಣಾಭ್ಯಾಂ ವಸ್ತುಸಿದ್ಧಿಃ'** ಎಂಬ ನಿಯಮಕ್ಕನುಸಾರವಾಗಿ ಇದರ ಬಗ್ಗೆ ಅನೇಕ ಪ್ರಮಾಣಗಳಿದ್ದರೂ ಕೆಲವನ್ನು ಇಲ್ಲಿ ಉಲ್ಲೇಖಿಸಲಾಗಿದೆ-

1. **'ಆದಿತ್ಯವರ್ಣಂ ತಮಸಃ ಪರಸ್ತಾತ್'** ಎಂಬ ಶ್ರುತಿ, ತಮಶ್ಶಬ್ದವಾಚ್ಯ ವಾದ ಪ್ರಕೃತಿತತ್ತ್ವವನ್ನು ಮೀರಿನಿಂತ ಸೂರ್ಯನಂತೆ ಕಂಗೊಳಿಸುವ ಅಪ್ರಾಕೃತ ಶುದ್ಧಸತ್ತ್ವಾತ್ಮಕ ದ್ರವ್ಯವನ್ನು ವರ್ಣಿಸುತ್ತಿದೆ. ಇದೇ ನಿತ್ಯವಿಭೂತಿ.

2. **'ತೇ ಹ ನಾಕಂ ಮಹಿಮಾನಸ್ಸಚಂತೇ'** ಎಂಬ ಶ್ರುತಿಯು, ಶ್ರೀಹರಿನಿಷ್ಠರು ಅತಿಶಯ ಮಹಿಮಾ ಸಂಪನ್ನರಾಗಿ 'ನಾಕ' ಶಬ್ದವಾಚ್ಯವಾದ ಪರಮ ಪದವೆಂಬ ಅಪ್ರಾಕೃತಸ್ಥಾನವನ್ನು ಹೊಂದುವರು ಎಂದು ಪ್ರತಿಪಾದಿಸಿದೆ. ಇಲ್ಲಿ 'ನಾಕ' ಶಬ್ದವು ಸ್ವರ್ಗಲೋಕವನ್ನು ವರ್ಣಿಸುತ್ತಿಲ್ಲ. ಏಕೆಂದರೆ ಮುಂದೆ 'ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ' ಎಂಬ ಶ್ರುತಿಶೇಷವು ನಿತ್ಯ (ಮುಕ್ತರಾದ) ಸೂರಿಗಳ ಆವಾಸಭೂಮಿ ಇದೆಂದು ನಿರೂಪಿಸುವುದು ಗಮನಾರ್ಹ. ಇದರಿಂದ ಪ್ರಕೃತ 'ನಾಕ' ಶಬ್ದವು ಇಂದ್ರ ಲೋಕವನ್ನು ವರ್ಣಿಸದೇ ಪರಮಪದ (ನಿತ್ಯವಿಭೂತಿ)ವನ್ನೆ ವರ್ಣಿಸುತ್ತದೆ ಎಂದು ತಿಳಿಯಬಹುದು.

3. ಇದರಂತೆ **'ಕ್ಷಯಂತಮಸ್ಯ ಪರಾಕೇ'** ಎಂಬ ಶ್ರುತಿಯು ರಜಶ್ಶಬ್ದವಾಚ್ಯವಾದ ಪ್ರಕೃತಿಯನ್ನು ಮೀರಿನಿಂತ ಉತ್ತಮಪ್ರದೇಶದಲ್ಲಿ ಪರಮಾತ್ಮನು ವಾಸಮಾಡುವನೆಂದು ತಿಳಿಸುತ್ತಿದೆ. ಇಂತಹ ಪರಮಪದವೇ ನಿತ್ಯ ವಿಭೂತಿ.

4. **'ಸಹಸ್ರಸ್ಥೂಣೇ ವಿಮಿತೇ ದೃಢ ಉಗ್ರೇ ಯತ್ರ ದೇವಾನಾಮಧಿದೇವ ಆಸ್ತೇ'** ಎಂಬ ಶ್ರುತಿಯು, ಹುಟ್ಟು-ಸಾವು (ಸೃಷ್ಟಿ-ಪ್ರಲಯ)ಗಳಿಗೆ ಆಸ್ಪದವಿಲ್ಲದ ತುಂಬ ವಿಶಾಲವಾದ, ಸಾವಿರಕಂಬಗಳಿಂದ ಕಂಗೊಳಿಸುವ ಮಹಾಮಣಿ ಮಂಟಪದಲ್ಲಿ ನಿತ್ಯಸೂರಿಗಳ ಒಡೆಯನಾದ ಶ್ರೀವಿಷ್ಣುವು ವಿರಾಜಮಾನ ನಾಗಿರುತ್ತಾನೆ' ಎಂದಿದೆ. ಈ ಲೋಕವೇ ನಿತ್ಯವಿಭೂತಿ ಎಂದು ಕರೆಯಲ್ಪಟ್ಟಿದೆ.

5. **'ಹಿರಣ್ಮಯೇ ಪರೇ ಕೋಶೇ ವಿರಜಂ ಬ್ರಹ್ಮ ನಿಷ್ಕಲಮ್ । ತಚ್ಛುಭ್ರಂ ಜ್ಯೋತಿಷಾಂ ಜ್ಯೋತಿಃ'** ಎಂಬ ಶ್ರುತಿಯು ಪ್ರಕೃತಿಯ ಸಂಬಂಧ ವಿದೂರವಾದ ಹಿರಣ್ಮಯವಾದ (ಬಂಗಾರದಂತೆ ಹೊಳೆಯುವ) ಪ್ರದೇಶದಲ್ಲಿ

ದೋಷಾತೀತನೂ ಗುಣಪೂರ್ಣನೂ ಆದ ಪರಮಾತ್ಮನನ್ನು ಉಪಾಸಕರು ಸಾಕ್ಷಾತ್ಕರಿಸಿಕೊಳ್ಳುವರು. ಈ ವರ್ಣನೆ ಪರಮಪದಕ್ಕೆ ಸೂಕ್ತವಾಗಿ ಅನ್ವಯಿಸುವುದು. ಇಂತಹ ಅಸಂಖ್ಯಪ್ರಮಾಣಗಳಿಂದ ನಿತ್ಯವಿಭೂತಿಯ ಅಸ್ತಿತ್ವ ಸಿದ್ಧವಾಗುವುದು.

ಈ ನಿತ್ಯವಿಭೂತಿಯು ಚೈತನ್ಯಕ್ಕೆ ಆಶ್ರಯವಲ್ಲದಕಾರಣ 'ಚೇತನ' ಎನಿಸಿಕೊಳ್ಳದಿದ್ದರೂ ಸ್ವಪ್ರಕಾಶವಾಗಿದೆ. (ಜ್ಞಾನಾಪೇಕ್ಷೆ ಇಲ್ಲದೆಯೇ ತಾನಾಗಿಯೇ ಪ್ರಕಾಶವಾಗುವುದು) ಜೀವನಲ್ಲಿರುವ ಜ್ಞಾನಾದಿಗುಣಗಳಿಗೆ ಇದು ಪ್ರಸರಣಹೇತುವಾಗಿದೆ. ಪ್ರಕೃತಿಯಂತೆ ಪ್ರತಿಬಂಧಕವಲ್ಲ.

ಇದು, ಮುಂದೆ ಪರಿಚಯಿಸಲಿರುವ ಧರ್ಮಭೂತ ಜ್ಞಾನದಂತೆ, ತನಗೆ ಪ್ರಕಾಶಕವಲ್ಲದಿದ್ದರೂ ಆತ್ಮನಿಗೆ ಪ್ರಕಾಶಕವಾದ ಕಾರಣ ನಿತ್ಯವಿಭೂತಿಯು 'ಪರಾಕ್ ದ್ರವ್ಯ' ಎನಿಸಿದೆ. ಬದ್ಧಾವಸ್ಥೆಯಲ್ಲಿರುವ ಜೀವರಿಗೆ ಇದು ವಸ್ತು ಪ್ರಕಾಶಕವಾಗದೆಯೇ ಮುಕ್ತರಿಗೆ ಮತ್ತು ಈಶ್ವರನಿಗೆ ಪ್ರಕಾಶಕವಾಗಿ 'ಸ್ವಯಂಪ್ರಕಾಶ' ಎನಿಸುವುದು.

ನಿತ್ಯವಿಭೂತಿಯ ವೈಭವವನ್ನು ಭಗವದ್ರಾಮಾನುಜರು ಕಣ್ಣಿಗೆ ಕಟ್ಟುವಂತೆ ತಮ್ಮ ವೈಕುಂಠಗದ್ಯ ಕೃತಿಯಲ್ಲಿ ವರ್ಣಿಸಿದ್ದಾರೆ.

### 4. ಧರ್ಮಭೂತಜ್ಞಾನ (ಬುದ್ಧಿ)

ವಿಶಿಷ್ಟಾದ್ವೈತ ದರ್ಶನದ ಅಸಾಧಾರಣ ಕೊಡುಗೆಗಳಲ್ಲಿ 'ಧರ್ಮಭೂತ ಜ್ಞಾನ'ದ ಶೋಧನೆ-ನಿರೂಪಣೆಗಳು ಅಪೂರ್ವವಾಗಿವೆ. ವಿದ್ವಾಂಸರು ಇತ್ತ ಗಮನಹರಿಸಬೇಕು. ಇದರ ಒಡಂಬಡಿಕೆಯ ಅನಿವಾರ್ಯತೆ- ಹಿನ್ನಲೆ ಇತ್ಯಾದಿಗಳನ್ನು ಸಂಕ್ಷೇಪವಾಗಿ ನಿರೂಪಿಸುತ್ತೇವೆ.

ಆತ್ಮನಿಗೆ ಬರುವ ಜ್ಞೇಯವಿಷಯಕಜ್ಞಾನವನ್ನೇ 'ಧರ್ಮಭೂತಜ್ಞಾನ' ವೆಂದು ಕರೆಯಲಾಗುವುದು. **'ಸಕರ್ಮಕಃ ಸಕರ್ತೃಕಃ ಪ್ರಕಾಶಃ ಧರ್ಮಭೂತಜ್ಞಾನಮ್'** ಎಂದು ಇದರ ಲಕ್ಷಣವನ್ನು ಹೇಳಬಹುದಾಗಿದೆ. ಶ್ರುತಿಗಳು, ಜೀವನು ಜ್ಞಾನ ಸ್ವರೂಪನೆಂದೂ ಜ್ಞಾನಾದಿಗುಣಗಳುಳ್ಳವನೆಂದೂ ಪ್ರತಿಪಾದಿಸುತ್ತಿವೆ. ಆತ್ಮನಿಗೆ ಅವನ ಜ್ಞಾನ ಬರಲು ಬೇರಾವುದರ ಸಹಾಯದ ಅಗತ್ಯವಿಲ್ಲ. ಈ ಆತ್ಮಜ್ಞಾನವು ಧರ್ಮಿಜ್ಞಾನವಾಗಿದ್ದು ಆತ್ಮ ಸ್ವರೂಪವೇ ಆಗಿದೆ. ಪ್ರತಿಯೊಬ್ಬನಿಗೂ ಅವನವನ

ಜ್ಞಾನ ಬರುವುದು ಸರ್ವಾನುಭವಸಿದ್ಧ. ಇದನ್ನೆ **'ಸ್ವಸ್ಮೈ ಭಾಸಮಾನತ್ವಮ್'** (ತನಗೆ ತನ್ನನ್ನು ತೋರಿಸಿಕೊಳ್ಳುವುದು) ಎಂದು ನಿರೂಪಿಸಲಾಗಿದೆ. ಇನ್ನೊಂದರ ಸಹಾಯವಿಲ್ಲದೆಯೇ ತನ್ನ ಜ್ಞಾನವು ಆತ್ಮನಿಗೆ ಬರುವುದರಿಂದಲೇ ಅವನು ಸ್ವಪ್ರಕಾಶ.

ಆತ್ಮನು ತನ್ನನ್ನು ತಿಳಿಯುವಂತೆ ಅನೇಕ ಬಾಹ್ಯ ವಸ್ತುಗಳ ಅರಿವನ್ನು ಪಡೆಯುತ್ತಾನೆ. ತನಗಿಂತ ಬೇರೆಯಾದ ವಸ್ತುಗಳ ಜ್ಞಾನವನ್ನು ತಂದು ಕೊಡುವುದೇ 'ಧರ್ಮಭೂತಜ್ಞಾನ'ವೆನಿಸಿದೆ. ಇದು ಆತ್ಮಸ್ವರೂಪಕ್ಕಿಂತ ಭಿನ್ನ. ಇದರ ಸಹಕಾರದಿಂದಲೇ ಆತ್ಮನು ಅನೇಕ ವಿಷಯಗಳನ್ನು ಅರಿಯುವನು. ಇದು ಆತ್ಮನಿಗೆ ಅಪೃಥಕ್ ಸಿದ್ಧವಿಶೇಷಣವಾಗಿದ್ದು ನಿತ್ಯ ಹಾಗೂ ವಿಭುವಾಗಿದೆ.

ಇಲ್ಲಿ ಅದ್ವೈತ ಮತ್ತು ದ್ವೈತ ದಾರ್ಶನಿಕರು ಸಹಜವಾಗಿ ಒಂದು ಪ್ರಶ್ನೆ ಮಾಡುತ್ತಾರೆ. **'ಕಾಮಃ ಸಂಕಲ್ಪಃ ವಿಚಿಕಿತ್ಸಾ ಶ್ರದ್ಧಾ ಅಶ್ರದ್ಧಾ ಧೃತಿಃ ಅಧೃತಿಃ ಹ್ರೀಃ ಧೀಃ ಭೀಃ ಸರ್ವಂ ಮನ ಏವ'** ಎಂಬುದಾಗಿ ನಾನಾ ಬಗೆಯ ಭಾವತರಂಗಗಳು ಮನಸ್ಸಿನ ಮೂಲಕ ಆತ್ಮನಿಗೆ ಉಂಟಾಗುತ್ತವೆ ಎಂದು ಶ್ರುತಿ ಸಾರುತ್ತಿದೆ. ಇಂತಹ ಮನಸ್ಸಿನಿಂದಲೇ ಆತ್ಮನಿಗೆ ಬಾಹ್ಯವಸ್ತುಗಳ ಜ್ಞಾನವನ್ನು ಉಪಪಾದಿಸಲು ಸಾಧ್ಯವಿರುವಾಗ ಆತ್ಮ ಸ್ವರೂಪಕ್ಕಿಂತ ಬೇರೆಯಾದ ನಿತ್ಯ ಹಾಗೂ ವಿಭುವಾದ ಧರ್ಮಭೂತಜ್ಞಾನವನ್ನೇಕೆ ಒಪ್ಪಬೇಕು ?

ಇದಕ್ಕೆ ಸಿದ್ಧಾಂತದ ಪ್ರತಿಕ್ರಿಯೆ ಹೀಗಿದೆ–

ಶ್ರುತಿ ಮಾತೆಯು ಹೇಳುವಂತೆ ಮನಸ್ಸಿಗೆ ಉತ್ಪತ್ತಿ ಇದೆ. ಧರ್ಮಭೂತ ಜ್ಞಾನವು (ಬುದ್ಧಿಯು) ನಿತ್ಯವೆಂದು ಮುಂದೆ ಪ್ರಮಾಣವನ್ನು ನೀಡಿ ಸಮರ್ಥಿಸುತ್ತೇವೆ. ಬುದ್ಧಿಗೆ ಮನಸ್ಸು ಸಹಕಾರಿಯಾದುದರಿಂದ ಸಹಕಾರಿ ಪ್ರಾಧಾನ್ಯವನ್ನು ಗಮನದಲ್ಲಿರಿಸಿಕೊಂಡು 'ಸರ್ವಂ ಮನ ಏವ' ಎಂಬ ಮಾತು ಬಂದಿದೆ. ಇದು ಗೌಣ ಪ್ರಯೋಗ. ಆದ್ದರಿಂದ ಶ್ರುತಿಸಿದ್ಧವಾದ ಬುದ್ಧಿತತ್ತ್ವವನ್ನು ನಿರಾಕರಿಸುವ ಅಗತ್ಯವಿಲ್ಲ.

ಈ ಬಗ್ಗೆ ಪ್ರಮಾಣಗಳನ್ನು ಗಮನಿಸೋಣ –

**'ನ ವಿಜ್ಞಾತುರ್ವಿಜ್ಞಾತೇರ್ವಿಪರಿಲೋಪೋ ವಿದ್ಯತೇ'** *(ಬೃಹ. 6.3.30)*

**'ಅವಿನಾಶೀ ವಾ ಅರೇಽಯಮಾತ್ಮಾಽನುಚ್ಛಿತ್ತಿಧರ್ಮಾ'** *(ಬೃಹ. 6.5.14)*

ಎಂಬ ಶ್ರುತಿಗಳು ಧರ್ಮಭೂತಜ್ಞಾನವನ್ನು ಸಮರ್ಥಿಸುತ್ತಿವೆ. **'ಅವಿನಾಶೀ ವಾ**

**ಅರೇಽಯಮಾತ್ಮಾ'** ಎಂಬ ವಾಕ್ಯಖಂಡವು ಆತ್ಮನಿಗೆ ಅವಿನಾಶಿತ್ವ (ನಿತ್ಯತ್ವ)ವನ್ನು ತಿಳಿಸುತ್ತಿದೆ. 'ಅನುಚ್ಛಿತ್ತಿಧರ್ಮಾ' ಎಂಬ ಪದವು, 'ನ ಉಚ್ಛಿತ್ತಿಃ (ನಾಶಃ) ಯಸ್ಯ ಸಃ ಅನುಚ್ಛಿತ್ತಿಃ (ನಿತ್ಯಃ) । ತಾದೃಶೋ ಧರ್ಮಃ ಯಸ್ಯ ಸಃ' ಎಂಬ ವಿಗ್ರಹದ (ವಿವರಣೆ) ಆಧಾರದಿಂದ ನಾಶವಿಲ್ಲದ (ನಿತ್ಯವಾದ) ಧರ್ಮವನ್ನು ತಿಳಿಸುತ್ತದೆ. ಆತ್ಮನ ಧರ್ಮವು ಜ್ಞಾನವೆಂಬುದು ಸರ್ವವಿದಿತ. ಆದ್ದರಿಂದ ಆತ್ಮನಂತೆಯೇ ಅವನಿಂದ ಭಿನ್ನವಾದ ಜ್ಞಾನ (ಧರ್ಮಭೂತಜ್ಞಾನ) ಕ್ಕೂ ಈ ಶ್ರುತಿ ನಿತ್ಯತ್ವವನ್ನು ಬೋಧಿಸುತ್ತದೆ.

ಇದರಂತೆ,

**ಯಥಾ ನ ಕ್ರಿಯತೇ ಜ್ಯೋತ್ಸ್ನಾ ಮಲಪ್ರಕ್ಷಾಲನಾನ್ಮಣೇಃ ।**
**ದೋಷಪ್ರಹಾಣಾನ್ನ ಜ್ಞಾನಮಾತ್ಮನಃ ಕ್ರಿಯತೇ ತಥಾ ॥**
**ಯಥೋಪಾದಾನ ಕರಣಾತ್ ಕ್ರಿಯತೇ ನ ಜಲಾಂಬರಮ್।**
**ಸದೇವ ನೀಯತೇ ವ್ಯಕ್ತಿಮಸತಃ ಸಂಭವಃ ಕುತಃ ॥**
**ತಥಾ ಹೇಯಗುಣಧ್ವಂಸಾದವಬೋಧಾದಯೋ ಗುಣಾಃ ।**
**ಪ್ರಕಾಶ್ಯಂತೆ ನ ಜನ್ಯಂತೇ ನಿತ್ಯಾ ಏವಾಽತ್ಮನೋ ಹಿ ತೇ ॥**

*(ತ.ಶು. ಪು.624)*

ಎಂಬ ಸ್ಮೃತಿಪ್ರಮಾಣವೂ ಧರ್ಮಭೂತಜ್ಞಾನಸಾಧಕವಾಗಬಲ್ಲದು.

ನೆಲದಲ್ಲಿ ಇರುವ ನೀರೇ ಬಾವಿ ತೋಡುವ ಪ್ರಯತ್ನದಿಂದ ವ್ಯಕ್ತವಾಗುವಂತೆ, ಮಣ್ಣುಮೆತ್ತಿದ ವಜ್ರವನ್ನು ನೀರಿನಿಂದ ತೊಳೆದು ಸಾಣೆ ಹಿಡಿದಾಗ ಇರುವ ಕಾಂತಿಯೇ ಅಭಿವ್ಯಕ್ತಗೊಳ್ಳುವಂತೆ, ಆತ್ಮನಲ್ಲಿರುವ ಜ್ಞಾನವು ಪ್ರಕೃತಿಯಿಂದ ಕಾಣದಾದಾಗ ಶಾಸ್ತ್ರೀಯ ಉಪಾಯ ಸಂಯೋಜನೆಯಿಂದ ಇರುವ ನಿತ್ಯಜ್ಞಾನವೇ ಚೆನ್ನಾಗಿ ಅಭಿವ್ಯಕ್ತಗೊಳ್ಳುವುದು. ಆತ್ಮನ ಗುಣಗಳು ಆಗಂತುಕವಲ್ಲ; ನಿತ್ಯವಾದವುಗಳು ಎಂಬ ಸಂಗತಿ ಈ ಪ್ರಮಾಣದಿಂದ ಸ್ಫುಟವಾಗುವುದು.

ಹೀಗೆ ಅನೇಕ ಪ್ರಮಾಣಸಿದ್ಧವಾದ ಧರ್ಮಭೂತಜ್ಞಾನದ ಅಂಗೀಕರಣವು ಅಪರಿಹಾರ್ಯವಾಗಿದೆ.

ಬುದ್ಧಿಯು, ದ್ರವ್ಯವಲ್ಲ, ಅನಿತ್ಯ ಮತ್ತು ಅಸ್ವಪ್ರಕಾಶವೆಂದು ಕೆಲವರ ಆಕ್ಷೇಪವಿದೆ. ಇದು ಸೂಕ್ತವಲ್ಲ. ಬುದ್ಧಿಯು ಇಂದ್ರಿಯಗಳ ಮೂಲಕ ಹೊರಹರಿಯುವುದು ಸ್ಮೃತಿಸಿದ್ಧವಾದ ಸಂಗತಿ –

**ಇಂದ್ರಿಯಾಣಾಂ ಹಿ ಚರತಾಂ ಯದ್ಯೇಕಂ ಕ್ಷರತೀಂದ್ರಿಯಮ್ ।**
**ತೇನಾಸ್ಯ ಕ್ಷರತಿ ಪ್ರಜ್ಞಾ ದೃತೇಃ ಪಾದಾದಿವೋದಕಮ್ ॥** *(ಮನುಸ್ಮೃತಿ)*

ಚರ್ಮದ ಚೀಲದಲ್ಲಿ ತುಂಬಿದ ನೀರು, ಅದರ ಛಿದ್ರದಿಂದ ಹೇಗೆ ಹೊರಗೆ ಹರಿಯುವುದೋ ಹಾಗೇ ಬುದ್ಧಿಯು ಇಂದ್ರಿಯಗಳ ಮೂಲಕ ಹೊರಗೆ ಹರಿಯುವುದೆಂದು ತಿಳಿಸುವ ಮೂಲಕ ಸ್ಮೃತಿಯು, ದ್ರವ್ಯದಲ್ಲಿರುವ ಕ್ರಿಯೆಯನ್ನು ಬುದ್ಧಿಯಲ್ಲಿ ವರ್ಣಿಸಿ ಅದನ್ನು ದ್ರವ್ಯವೆಂದು ಸಾರಿದೆ.

**'ನ ವಿಜ್ಞಾತುಃ ವಿಜ್ಞಾತೇಃ ವಿಪರಿಲೋಪೋ ವಿದ್ಯತೇ'** ಇತ್ಯಾದಿ ಶ್ರುತಿಗಳು ಆತ್ಮನಿಗೂ ಅವನ ಜ್ಞಾನಗುಣ(ಧರ್ಮಭೂತಜ್ಞಾನ)ಕ್ಕೂ ನಾಶವಿಲ್ಲವೆಂದು ನಿತ್ಯತ್ವವನ್ನು ಪ್ರತಿಪಾದಿಸಿವೆ.

ಇದರಂತೆ ಬುದ್ಧಿಗೆ ಸ್ವಪ್ರಕಾಶತ್ವವೂ ಅಂಗೀಕಾರಾರ್ಹವಾಗಿದೆ- ಘಟಕ್ಕೂ ಚಕ್ಷುರಿಂದ್ರಿಯಕ್ಕೂ ಸಂಯೋಗವಾದಾಗ 'ಇದು ಘಟ' ಎಂಬ ಜ್ಞಾನಬರುತ್ತದೆ. ಅನಂತರ 'ನಾನು ಘಟವನ್ನು ತಿಳಿದಿರುವೆ' ಇತ್ಯಾದಿವ್ಯವಹಾರವು ಉಂಟಾಗುತ್ತದೆ. ಇಲ್ಲಿ ಘಟಜ್ಞಾನ ವಿಷಯಕ ಜ್ಞಾನವು ಬಾರದಿರುವಲ್ಲಿ ಘಟಜ್ಞಾನ ವಿಷಯಕ ವ್ಯವಹಾರವು ಸಂಭವಿಸಲಾರದು. ಘಟಜ್ಞಾನ ಹುಟ್ಟದೆಯೇ 'ಅಯಂ ಘಟಃ' ಎಂಬ ವ್ಯವಹಾರವು ಹೇಗೆ ಹುಟ್ಟಲಾರದೋ ಹಾಗೆಯೇ ಘಟಜ್ಞಾನವಿಷಯಕ ಜ್ಞಾನ ಬರದೆಯೇ ಘಟಜ್ಞಾನವಿಷಯಕ ವ್ಯವಹಾರವೂ ಉಪಪನ್ನವಾಗಲಾರದು. ಘಟಜ್ಞಾನವು ಮತ್ತೊಂದು ಜ್ಞಾನದಿಂದ ಗೃಹೀತವಾಗುತ್ತದೆ ಎನ್ನುವುದಾದರೆ, ಆ ಜ್ಞಾನವೂ ಮತ್ತೊಂದು ಜ್ಞಾನದಿಂದ ಗೃಹೀತವಾಗುತ್ತದೆ ಎನ್ನಬೇಕು. ಹೀಗೆ ಕೊನೆ ಇಲ್ಲದ ಜ್ಞಾನಪರಂಪರೆಯನ್ನು ಕಲ್ಪಿಸಬೇಕಾಗುವುದು.

ಆದ್ದರಿಂದ ಕಣ್ಣಿಗೂ ಘಟಕ್ಕೂ ಸಂಯೋಗವಾಗಿ 'ಇದು ಘಟ'ವೆಂಬ ಜ್ಞಾನ ಜನಿಸುವಾಗಲೇ ಆ ಘಟಜ್ಞಾನವು ಘಟದಂತೆ ತನ್ನನ್ನೂ ವಿಷಯೀಕರಿಸುತ್ತದೆಂದು ಹೇಳಬೇಕು. ಹೀಗೆ ಬುದ್ಧಿಯು ಇತರ ವಸ್ತುವನ್ನು ತೋರಿಸುವುದರ ಜೊತೆಗೆ ತನ್ನನ್ನೂ ತೋರಿಸುವುದರಿಂದ ಸ್ವಪ್ರಕಾಶವೆನಿಸುವುದು.

ಇಷ್ಟಂಶದಲ್ಲಿ ಆತ್ಮ ಮತ್ತು ಧರ್ಮಭೂತಜ್ಞಾನದಲ್ಲಿ ವ್ಯತ್ಯಾಸವನ್ನು ತಿಳಿಯಬಹುದು-

1. ಧರ್ಮಿಯಾದ ಜೀವನು ಧರ್ಮಭೂತಜ್ಞಾನದ ಸಹಾಯದಿಂದ ಘಟ-ಪಟಾದಿ ಪದಾರ್ಥಗಳನ್ನು, ಹಾಗೂ ಅದರ ಅಗತ್ಯವಿಲ್ಲದಯೇ ತನ್ನನ್ನು

ತನ್ನಲ್ಲಿರುವ ಏಕತ್ವಾದಿಧರ್ಮಗಳನ್ನು ತಿಳಿಯುವುದರಿಂದ 'ಪ್ರಮಾತೃ' ಎನಿಸುವನು.

2. ಆತ್ಮನಿಗೆ ತನ್ನ ಸ್ವರೂಪವೂ ಗ್ರಾಹ್ಯವಾದುದರಿಂದ ಆತ್ಮನು 'ಪ್ರಮೇಯ' ನೆಂದೂ ಕರೆಸಬಲ್ಲವನು.

3. ಧರ್ಮಿಸ್ವರೂಪವು ಜ್ಞಾನಾಕಾರವಾದುದರಿಂದ 'ಪ್ರಮಾಣ'ವೆಂಬ ವ್ಯವಹಾರ ಯೋಗ್ಯನೂ ಆಗಿದ್ದು, ಧರ್ಮಿಯಲ್ಲಿ ಪ್ರಮಾತೃತ್ವ ಪ್ರಮೇಯತ್ವ-ಪ್ರಮಾಣತ್ವಧರ್ಮಗಳು ಇರುತ್ತವೆ.

ಧರ್ಮಭೂತಜ್ಞಾನವು ಘಟಾದಿಪದಾರ್ಥಗಳ ಜ್ಞಾನಸಾಧನವಾದುದರಿಂದ ಅಲ್ಲಿ 'ಪ್ರಮಾಣತ್ವ' ಇದೆ. ಪ್ರಸರಣಶೀಲಜ್ಞಾನವು ಸ್ವಯಂಪ್ರಕಾಶವಾಗಿದೆ ಮತ್ತು ಅತೀತಜ್ಞಾನಗ್ರಾಹಿಯಾಗಿದೆ. ಆದ್ದರಿಂದ ಪ್ರಮೇಯತ್ವವನ್ನೂ ಅದರಲ್ಲಿ ಒಪ್ಪಬೇಕು. ಧರ್ಮಭೂತಜ್ಞಾನವು ತನಗೆ ಆಶ್ರಯನಾದ ಆತ್ಮನಿಗೆ ಇತರ ವಿಷಯಗಳ ಪ್ರಕಾಶ ದೊರಕುವಂತೆ ಮಾಡಿದರೂ ತನ್ನ ಜ್ಞಾನವು ಅದಕ್ಕೆ ಇಲ್ಲದ ಕಾರಣ ಅದು ಪ್ರಮಾತೃವಾಗಲಾರದು.

ಇನ್ನು 'ಧರ್ಮಭೂತಜ್ಞಾನ'ದ ಬಗ್ಗೆ ಅದ್ವೈತಿಗಳು ಮತ್ತು ದ್ವೈತಿಗಳು ಮಾಡುವ ಕೆಲವು ಆಕ್ಷೇಪಗಳಿಗೆ ನಿಗಮಾಂತದೇಶಿಕರ ನ್ಯಾಯಸಿದ್ಧಾಂಜನ ಕೃತಿಯನ್ನು ಆಧರಿಸಿ ಉತ್ತರ ನೀಡಲಾಗುವುದು-

**1. ಧರ್ಮಭೂತಜ್ಞಾನವು ನಿತ್ಯವೆನ್ನಲು ಪ್ರಮಾಣವೇನಿದೆ ?**

**ಉತ್ತರ -** **'ನ ವಿಜ್ಞಾತುರ್ವಿಜ್ಞಾತೇರ್ವಿಪರಿಲೋಪೋ ವಿದ್ಯತೇ' 'ನ ಹಿ ದ್ರಷ್ಟುರ್ದೃಷ್ಟೇರ್ವಿಪರಿಲೋಪೋವಿದ್ಯತೇ'** ಇತ್ಯಾದಿ ಶ್ರುತಿಗಳು ಮತ್ತು **'ಯಥಾ ನ ಕ್ರಿಯತೇ ಜ್ಯೋತ್ಸ್ನಾ'** ಇತ್ಯಾದಿ ಸ್ಮೃತಿಗಳು ಧರ್ಮಭೂತ ಜ್ಞಾನದ ಅಸ್ತಿತ್ವ ಮತ್ತು ನಿತ್ಯತ್ವದಲ್ಲಿ ಪ್ರಮಾಣವಾಗಿವೆ.

**2. ಬುದ್ಧಿಯು ನಿತ್ಯವಾದರೆ 'ಸುಷುಪ್ತಿ (ಗಾಢನಿದ್ರೆ)ಯನ್ನು ಉಪಪಾಸುವುದು ಹೇಗೆ ? ಜಾಗರಾವಸ್ಥೆ ಮತ್ತು ಸುಷುಪ್ತ್ಯವಸ್ಥೆಗಳಲ್ಲಿ ಅಂತರ ಉಳಿಯಲಾರದಲ್ಲವೆ ?**

**ಉತ್ತರ -** ಬುದ್ಧಿಯು ನಿತ್ಯವಾದರೂ ಸುಷುಪ್ತಿಯನ್ನು ಉಪಪಾದಿಸ ಬಹುದಾಗಿದೆ ಜೀವಾತ್ಮನು ಪ್ರಕೃತಿಯ ಗುಣಗಳಿಗೆ ಬದ್ಧನಾಗಿರುವುದು ಪ್ರಮಾಣ ಸಿದ್ಧವಾದ ಸಂಗತಿ. ಇದರಲ್ಲಿರವ ಸತ್ವಗುಣವು ಅಭಿವೃದ್ಧಿಯಾದಾಗ ಜ್ಞಾನವು

ಪ್ರಕಾಶಕ್ಕೆ ಬರುವುದು. ಇದನ್ನು ಜಾಗರಾವಸ್ಥೆ ಎನ್ನುವುದು. ಮೋಡವು ಪ್ರಕಾಶ ರೂಪನಾದ ಸೂರ್ಯನನ್ನು ಮುಚ್ಚುವಂತೆ, ತಮೋಗುಣವು ಧರ್ಮ-ಭೂತಜ್ಞಾನ ಹಾಗೂ ಜ್ಞಾನದ ಶಕ್ತಿಯನ್ನು ಯಾವಾಗ ಪ್ರತಿಬದ್ಧಗೊಳಿಸುವುದೋ ಆಗ ಮನಸ್ಸು ಸುಪ್ತವಾಗುವುದು. ಇದನ್ನೇ ಸುಷುಪ್ತ್ಯವಸ್ಥೆ ಎಂದು ಉಪಪಾದಿಸಬಹುದು.

ಅಗ್ನಿಯು ದಾಹಕವಾದರೂ, ಮಣಿ-ಮಂತ್ರ-ಔಷಧಿಗಳಿಂದ ಅಲ್ಲಿರುವ ದಾಹಕತ್ವ ಶಕ್ತಿಯು ಪ್ರತಿಬದ್ಧವಾಗಿರುವುದು ಕಂಡಿದೆ. ಇದರಿಂದ ಅಲ್ಲಿರುವ ನೈಸರ್ಗಿಕ ಶಕ್ತಿಯನ್ನು ಅಲ್ಲಗಳೆಯಲಾಗದು. ಇದರಂತೆ ಬುದ್ಧಿಯಲ್ಲಿರುವ ವಿಷಯಪ್ರಕಾಶಕತ್ವಶಕ್ತಿಯು ಪ್ರತಿಬದ್ಧವಾದಾಗ ಸುಷುಪ್ತಿ ಮತ್ತು ಪ್ರತಿಬಂಧಕವಿಲ್ಲದಿರುವಾಗ ಜಾಗರವೆಂಬ ವ್ಯವಸ್ಥೆಯನ್ನು ಸಮಂಜಸವಾಗಿ ನಿರ್ವಹಿಸಬಹುದು.

**3. ಒಳಗಿರುವ ಬುದ್ಧಿಯು ಹೊರಗಿನ ವಸ್ತುವನ್ನು ಗ್ರಹಿಸುವುದು ಹೇಗೆ ? ಅದು ಹೊರಬಂದರೆ ಒಳಗೆ ಇರಲಾರದಲ್ಲವೆ ? ಆಗ ಆತ್ಮನಲ್ಲಿ ಇರುವ ನಿತ್ಯ ಗುಣವಿದು ಎಂಬ ಮಾತು ಹೇಗೆ ಸಂಗತ ?**

**ಉತ್ತರ** - ಹಿಂದೆ ತಿಳಿಸಿದ ಶ್ರುತಿಗಳ ಆಶಯದಂತೆ ಬುದ್ಧಿಯು ಇಂದ್ರಿಯ ಗೋಲಕಗಳ ಮೂಲಕ ಹೊರವಸ್ತುಗಳ ಸಂಪರ್ಕಹೊಂದಿ ಆತ್ಮನಿಗೆ ಅವುಗಳ ಜ್ಞಾನ ತಂದು ಕೊಡುವುದು. ಬುದ್ಧಿಯು ಹೊರಗೆ ಹರಿದಾಗ ಒಳಗೆ ಇರಲಾರದೆಂಬ ಆಕ್ಷೇಪವು ಅನುಚಿತ. ಮಣಿ - ದ್ಯುಮಣಿ - ದೀಪಗಳು ತಾವಿರುವ ಪ್ರದೇಶ ಮತ್ತು ದೂರದ ಪ್ರದೇಶಗಳಲ್ಲೂ ವ್ಯಾಪಿಸಿರುವಂತೆ ಬುದ್ಧಿಯು ಒಳ - ಹೊರಗೆ ಪಸರಿಸಬಲ್ಲದು.

**4. ಆತ್ಮನಿಗೆ ಗುಣವಾಗಿರುವ ಬುದ್ಧಿಗೆ ದ್ರವ್ಯತ್ವವು ಹೇಗೆ ಸಂಗತ ?**

**ಉತ್ತರ**- ಭಗವದ್ರಾಮಾನುಜಾಚಾರ್ಯರು- '**ಪ್ರಭಾದ್ರವ್ಯಸ್ಯ ದೀಪ-ಗುಣಭೂತಸ್ಯೇವ ಜ್ಞಾನಸ್ಯಾಪ್ಯಾತ್ಮ ಗುಣಭೂತಸ್ಯ ದ್ರವ್ಯತ್ವಮವಿರುದ್ಧಮ್**' ಎಂಬುದಾಗಿ ಮೇಲಿನ ಪ್ರಶ್ನೆಗೆ ಸಮಾಧಾನ ನೀಡಿದ್ದಾರೆ - ಪ್ರಭೆಯು ತನಗೆ ಆಶ್ರಯವಾದ ಸೂರ್ಯ - ದೀಪ - ಮಣಿಗಳ ಗುಣವಾಗಿ ಕಂಡರೂ ದ್ರವ್ಯವೆಂದು ಅಂಗೀಕೃತವಾಗಿರುವಂತೆ ಬುದ್ಧಿಯು ಆತ್ಮಗುಣವಾದರೂ ದ್ರವ್ಯವಾಗಲ್ಲದು.

ಗುಣಪದದಿಂದ ದ್ರವ್ಯಾತ್ಮಕ ಗುಣ ಮತ್ತು ಕೇವಲಗುಣಗಳು ಬೋಧಿತವಾಗುವವು. ಪ್ರಭಾ - ಜ್ಞಾನ ಮೊದಲಾದವುಗಳು ಮೊದಲ ವರ್ಗಕ್ಕೆ ಸೇರುತ್ತವೆ. ಸತ್ತ್ವಾದಿಗುಣಗಳು ಎರಡನೆಯ ವರ್ಗಕ್ಕೆ ಸೇರುತ್ತವೆ.

**5. ಬುದ್ಧಿಗೆ (ಜ್ಞಾನಕ್ಕೆ) ದ್ರವ್ಯತ್ವವನ್ನು ತಿಳಿಸುವ ಸ್ಪಷ್ಟ ಪ್ರಮಾಣ ಯಾವುದು?**

**ಉತ್ತರ** -ಅನುಮಾನ ಪ್ರಮಾಣದಿಂದ ಜ್ಞಾನವನ್ನು ದ್ರವ್ಯವೆಂದು ಸರಳವಾಗಿ ತೋರಿಸಬಹುದು. ದ್ರವ್ಯದಲ್ಲಿರುವ, ಸಂಕೋಚ-ವಿಕಾಸ- ಪ್ರಸರಣ-ಸಂಯೋಗಾದಿಗಳು, ಜ್ಞಾನದಲ್ಲಿರುವುದರಿಂದ ಅದು ಸಂಪ್ರತಿಪನ್ನ ದ್ರವ್ಯದಂತೆ ದ್ರವ್ಯವೆಂದು ಸಾಧಿಸಬಹುದು.

ಅಥವಾ ಆತ್ಮನನ್ನು ದೃಷ್ಟಾಂತವಾಗಿಟ್ಟುಕೊಂಡು ಜ್ಞಾನತ್ವರೂಪಹೇತುವಿನಿಂದ ಜ್ಞಾನವು ದ್ರವ್ಯವೆಂದು ಸಮರ್ಥಿಸಬಹುದಾಗಿದೆ.

**6. ಸದಾ ಆತ್ಮನ ಧರ್ಮವಾದ ಬುದ್ಧಿಯು ಇನ್ನೊಂದೆಡೆ ಚಲಿಸುವುದು ಹೇಗೆ ಸಾಧ್ಯ?**

**ಉತ್ತರ** - ರೂಪಾದಿಗಳು ಸ್ವಾಶ್ರಯವನ್ನು ತ್ಯಜಿಸಿ ಹೋಗದಿರುವುದು ಲೋಕಾನುಭವಸಿದ್ಧವಾಗಿದೆ. ಆದ್ದರಿಂದ ಬುದ್ಧಿಯು ಆತ್ಮನ ಧರ್ಮವಾದರೆ ಸ್ವಾಶ್ರಯವನ್ನು ತ್ಯಜಿಸಿ ಹೋಗಲಾರದು ಎಂಬ ಆಕ್ಷೇಪ ಸಹಜ.

ಬುದ್ಧಿಯು, ಪ್ರಭೆಯಂತೆ ಆತ್ಮ ಸಂಬಂಧವನ್ನು ಉಳಿಸಿಕೊಂಡೇ ಬೇರೆಡೆ ಪಸರಿಸುವುದೆಂದು ಹಿಂದೆಯೇ ಸಮರ್ಥಿಸಲಾಗಿದೆ. ಆದ್ದರಿಂದ ಜ್ಞಾನಕ್ಕೆ ಸ್ವಾಶ್ರಯಪರಿತ್ಯಾಗವನ್ನು ನಾವು ಒಪ್ಪಿಯೇ ಇಲ್ಲ.

**7. ಜ್ಞಾನವು ವಿಷಯ ಸಂಯೋಗವನ್ನು ಪಡೆಯುವುದು ಹೇಗೆ ? ಒಳಗಿರುವುದು ಪ್ರಭೆಯಂತೆ ಆಶ್ರಯಪ್ರದೇಶದಿಂದ ಹೊರಹೊಮ್ಮಿದಾಗ ಜ್ಞಾನದಲ್ಲಿ ಪರಿಮಾಣದೈರ್ಘ್ಯವನ್ನು ಒಪ್ಪಬೇಕಾಗುವುದು. ಈ ಪರಿಮಾಣ ತಾರತಮ್ಯವು ನಿರವಯವವಾದ ಜ್ಞಾನದಲ್ಲಿ ಹೇಗೆ ಸಂಭಾವಿತ ?**

**ಉತ್ತರ** -ಸರ್ಪವು ಕುಂಡಲಾಕಾರದಲ್ಲಿರುವಾಗ ನಿಬಿಡಾವಯವವುಳ್ಳದ್ದಾಗಿಯೂ ಚಲಿಸುವಾಗ ದೀರ್ಘಾಕೃತಿ ಹೊಂದಿ ಶಿಥಿಲಾವಯವವನ್ನು ಪಡೆಯುವುದು ಲೋಕಾನುಭೂತವಾಗಿದೆ. ಇಲ್ಲಿ ಉಪಚಯ-ವಿರಳತ್ವಗಳಿಲ್ಲದಿದ್ದರೂ ಪರಿಮಾಣ ತಾರತಮ್ಯ ಕಂಡಿದೆ. ಇದಲ್ಲದೇ ಪರಿಮಾಣ ತಾರತಮ್ಯವನ್ನು ಅವಯವ ವಿಶ್ಲೇಷಯೋಗ್ಯವಸ್ತುಗಳಲ್ಲಿ ಮಾತ್ರವೇ ಅನ್ವಯಿಸಿಕೊಳ್ಳಬೇಕು.

**8. ಜ್ಞಾನಕ್ಕೆ ಅತೀತ - ಅನಾಗತ ವಸ್ತುಗಳ ಜೊತೆಗೆ ಸಂಯೋಗ ಹೇಗೆ ಸಾಧ್ಯ ?**

**ಉತ್ತರ**-ಜ್ಞಾನ ಮತ್ತು ವಿಷಯಗಳಿಗೆ ವಿಷಯ-ವಿಷಯಿಭಾವರೂಪ ಸಂಬಂಧವನ್ನು ನೈಯಾಯಿಕರು ಒಪ್ಪಿದ್ದಾರೆ. ಇಲ್ಲಿ ಅತೀತ-ಅನಾಗತ ಪದಾರ್ಥಗಳೊಂದಿಗೆ ಹೇಗೆ ಜ್ಞಾನನಿರೂಪಿತವಿಷಯತ್ವಸಂಬಂಧವು ಅಂಗೀಕೃತವಾಗಿದೆಯೋ ಅದರಂತೆ ಕಾಲವಿಪ್ರಕರ್ಷವಿದ್ದರೂ ಅತೀತ- ಅನಾಗತ ವಸ್ತುಗಳಿಗೂ ವರ್ತಮಾನಜ್ಞಾನದೊಂದಿಗೆ ಸಂಯೋಗ ಸಂಬಂಧವನ್ನು ಹೇಳಬಹುದು. ವ್ಯಕ್ತ್ಯಾಕಾರವಾಗಿ ವಸ್ತುಗಳ ಸಂಬಂಧ ಸಾಧ್ಯವಾಗದಿರುವಾಗ್ಯೂ ಜಾತ್ಯಾಕಾರದಿಂದ ಸಂಬಂಧವು ಸಂಭಾವಿತ ವಾಗಿದೆ.

**9. ಜ್ಞಾನವು ಸ್ವಪ್ರಕಾಶ ಹೇಗೆ ?**

**ಉತ್ತರ** - ಜ್ಞಾನವೇ ವಸ್ತುವಿನ ಅಸ್ತಿತ್ವಕ್ಕೆ ಮಾಪಕ - ಜ್ಞಾಪಕವಾಗಿದೆ. ಪ್ರತ್ಯಕ್ಷಾದಿ ಮೂರು ಪ್ರಮಾಣಜನ್ಯವಾದ ಜ್ಞಾನದಲ್ಲಿ ಯಾವುದು ವಿಷಯವಾಗಿದೆಯೋ ಅದು ಇದೆ. ಉದಾ : ಚಕ್ಷುರಿಂದ್ರಿಯಕ್ಕೂ ಘಟಕ್ಕೂ ಸನ್ನಿಕರ್ಷವಾದಾಗ ,ನಿರ್ದುಷ್ಟವಾದ ಇಂದ್ರಿಯದಿಂದ 'ಇದು ಘಟ' (ಅಯಂ ಘಟಃ) ಎಂಬ ಜ್ಞಾನವು ಹುಟ್ಟುತ್ತದೆ. ಘಟವು ಇಲ್ಲಿದೆ ಎಂಬ ಬಗ್ಗೆ ಈ ಪ್ರತ್ಯಕ್ಷ ಜ್ಞಾನವೇ ಪ್ರಮಾಣವೆನಿಸುವುದು. ಚಕ್ಷುರಿಂದ್ರಿಯದಿಂದ ಘಟಜ್ಞಾನವು ಬರುತ್ತದೆ. ಆದರೆ ಜ್ಞಾನ ಬಂದಿರುವುದನ್ನು ತಿಳಿಯುವುದು ಹೇಗೆ ? ಇದಕ್ಕೆ ನ್ಯಾಯಶಾಸ್ತ್ರಜ್ಞರು ಜ್ಞಾನದ ಜ್ಞಾನವು ಮಾನಸಪ್ರತ್ಯಕ್ಷವೇದ್ಯ ಎನ್ನುತ್ತಾರೆ. 'ಅಯಂ ಘಟಃ' ಎಂಬ ಜ್ಞಾನವು 'ವ್ಯವಸಾಯ' ಎನಿಸಿದರೆ 'ಘಟಜ್ಞಾನವಾನಹಮ್' ಅಥವಾ 'ಘಟಮಹಂ ಜಾನಾಮಿ' ಎಂಬ ಅನುಭವವು 'ಅನುವ್ಯವಸಾಯ'ವೆನಿಸುವುದು. ಜ್ಞಾನದ ಅಸ್ತಿತ್ವಕ್ಕೆ ಈ ಅನುವ್ಯವಸಾಯವೇ ದಾಖಲೆ.

ಆದರೆ ಇಲ್ಲಿ ಒಂದು ಸಮಸ್ಯೆ ಇದೆ. ಜ್ಞಾನವು ತನ್ನ ತೋರುವಿಕೆಗೆ ಮತ್ತೊಂದು ಜ್ಞಾನವನ್ನು ಅವಲಂಬಿಸಿದರೆ ಅನವಸ್ಥಾ ದೋಷ ಬಾರದೇ? ಆದ್ದರಿಂದ ಜ್ಞಾನ ಹುಟ್ಟಿದ ಕೂಡಲೇ ಅದು ಕೂಡಲೇ ತಿಳಿಯುವುದು ಎನ್ನಬೇಕು. ಈ ಹಿನ್ನೆಲೆಯಲ್ಲಿ ಜ್ಞಾನವು ಸ್ವಪ್ರಕಾಶ.

ಇದರ ಮೇಲೊಂದು ಆಕ್ಷೇಪ ಸಂಭವಿಸಬಹುದು -

ಬೆರಳಿನ ತುದಿಯಿಂದ ಇತರ ವಸ್ತುಗಳನ್ನು ಮುಟ್ಟಬಹುದು. ಅದನ್ನೇ ಮುಟ್ಟಲು ಸಾಧ್ಯವಿಲ್ಲವಷ್ಟೇ ! ಅದರಂತೆ ಜ್ಞಾನದಲ್ಲಿ ಇತರಪದಾರ್ಥಗಳು

ವಿಷಯವಾಗಬಹುದಾದರೂ ತಾನೇ (ಜ್ಞಾನವೇ) ವಿಷಯವಾಗುವುದು ಹೇಗೆ? ಇದಕ್ಕೆ ಹೀಗೆ ಸಮಾಧಾನವನ್ನು ತಿಳಿಯಬೇಕು –

ಜ್ಞಾನದ ಹುಟ್ಟನ್ನು ತಿಳಿಯುವುದು ಹೇಗೆ? ಮತ್ತೊಂದು ಜ್ಞಾನದಿಂದ ಅದನ್ನು ತಿಳಿಯಬೇಕೆಂದರೆ ಅದಕ್ಕೆ ಮತ್ತೊಂದು ಜ್ಞಾನದ ಅಗತ್ಯವಿದೆಯೆಂದು ಜ್ಞಾನದ ಪರಂಪರೆಯನ್ನು ಒಪ್ಪಿದರೆ ಅನವಸ್ಥಾದೋಷವು ಅಪರಿಹಾರ್ಯ. ಆದ್ದರಿಂದ ಜ್ಞಾನವು ಇತರ ಪದಾರ್ಥಗಳನ್ನು ಗ್ರಹಿಸುವುದರ ಜೊತೆಗೆ ತನ್ನನ್ನೂ ಗ್ರಹಿಸುತ್ತದೆ ಎನ್ನಬೇಕು. ಇದೇ ಜ್ಞಾನಗತವಾದ 'ಸ್ವಪ್ರಕಾಶತ್ವ'ವೆನಿಸಿದೆ.

**10. ಬುದ್ಧಿಯು ದ್ರವ್ಯವಾದರೆ, 'ನಾನು ತಿಳಿಯುತ್ತೇನೆ' ಎಂಬುದಾಗಿ ಆತ್ಮನ ಧರ್ಮವಾಗಿ ತೋರುವುದು ಹೇಗೆ ?**

**ಉತ್ತರ-** ಬುದ್ಧಿಯು ದ್ರವ್ಯವಾದರೂ ಆತ್ಮ ಧರ್ಮವಾಗಬಲ್ಲದು. ಒಂದರ ಧರ್ಮವಾಗಿದ್ದು ಅದರ ಅಧೀನವಾದುದೇ 'ಗುಣ'ಎನಿಸುವುದು ಲೋಕಸಿದ್ಧ. ಪ್ರಕೃತ ಬುದ್ಧಿಯು ದೀಪದಂತೆ ದ್ರವ್ಯವಾದರೂ ಪ್ರಭೆಯಂತೆ ಗುಣವಾಗಿ ತೋರಬಲ್ಲದು. ಅಷ್ಟರಿಂದಲೇ ಅದನ್ನು ದ್ರವ್ಯವಲ್ಲ ಎನ್ನುವಂತಿಲ್ಲ.

**11. ಜ್ಞಾನವು ನಿತ್ಯವಾದರೆ ಜ್ಞಾನವು ಹುಟ್ಟಿತು, ನಷ್ಟವಾಯಿತು ಎಂಬ ವ್ಯವಹಾರ ಹೇಗೆ ?**

**ಉತ್ತರ-** ಜ್ಞಾನದ ವಿಕಾಸಾವಸ್ಥೆಯನ್ನು ಉತ್ಪತ್ತಿಯೆಂದೂ ಸಂಕೋಚಾವಸ್ಥೆಯನ್ನು ವಿನಾಶವೆಂದೂ ವ್ಯವಹರಿಸಲಾಗಿದೆ. ಧರ್ಮ-ಭೂತಜ್ಞಾನವು ಸ್ವಭಾವತಃ ವಿಭುವಾದರೂ ಆಯಾ ಚೇತನರ ಕರ್ಮಕ್ಕೆ ಅನುಗುಣವಾಗಿ ಬದ್ಧಾವಸ್ಥೆಯಲ್ಲಿ ಸಂಕುಚಿತತೆಯನ್ನು ಮುಕ್ತಿಯಲ್ಲಿ ವಿಕಸಿತ ರೂಪವನ್ನೂ ಪಡೆಯುತ್ತದೆ. ಈ ಹಿನ್ನೆಲೆಯಲ್ಲಿ ಉತ್ಪತ್ತಿ –ವಿನಾಶಗಳನ್ನು ವರ್ಣಿಸಲಾಗಿದೆ.

ಹೀಗೆ ಆಕ್ಷೇಪಗಳನ್ನು ತೆಗೆದುಕೊಂಡು ವಿಸ್ತಾರವಾಗಿ ಪರಿಹಾರವನ್ನು ನ್ಯಾಯಸಿದ್ಧಾಂಜನದಲ್ಲಿ ನೀಡಲಾಗಿದೆ.

ಜ್ಞಾನ–ಮತಿ–ಪ್ರಜ್ಞಾ–ಸಂವಿತ್–ಮೇಧಾ–ಬುದ್ಧಿ ಇತ್ಯಾದಿಗಳು ಧರ್ಮಭೂತಜ್ಞಾನದ ಪರ್ಯಾಯಪದಗಳು. ಧರ್ಮಭೂತಜ್ಞಾನದ ಅವಸ್ಥಾವಿಶೇಷಗಳೇ ಆತ್ಮನ ಆನಂದ–ದುಃಖ–ಇಚ್ಛಾ–ದ್ವೇಷ ಪ್ರಯತ್ನಗಳಾಗಿವೆ.

# VII. ಮುಕ್ತಿಸಾಧನಗಳು

## ಭಕ್ತಿ-ಪ್ರಪತ್ತಿ

ಶ್ರೀರಾಮಾನುಜಾಚಾರ್ಯರ ಸಿದ್ಧಾಂತದ ಪ್ರಕಾರ ಭಕ್ತಿ - ಪ್ರಪತ್ತಿ ಎರಡೂ ಮೋಕ್ಷಸಾಧನಗಳು. ಇವುಗಳೂ ಒಂದು ಹಂತದಲ್ಲಿ ಧರ್ಮಭೂತ ಜ್ಞಾನದ ಅವಸ್ಥಾವಿಶೇಷಗಳೇ (ರೂಪಾಂತರ) ಆಗಿವೆ-

**'ಭಕ್ತಿಪ್ರಪತ್ತಿಭ್ಯಾಂ ಪ್ರಪನ್ನ ಈಶ್ವರ ಏವ ಮೋಕ್ಷಂ ದದಾತಿ। ಅತಸ್ತಯೋರೇವ ಮೋಕ್ಷೋಪಾಯತ್ವಮ್ ।'** *(ಯ.ಮ.ದೀ., ಪು. 94)*

ಮೋಕ್ಷಸಾಧನಗಳೆಂದು ಬಣ್ಣಿಸಲ್ಪಟ್ಟ ಕರ್ಮಯೋಗ - ಜ್ಞಾನಯೋಗ ಮೊದಲಾದವುಗಳು ಭಗವಂತನಲ್ಲಿ ಭಕ್ತಿಯನ್ನು ಉತ್ಪಾದಿಸುವಲ್ಲಿ ಸಹಕಾರಿಗಳಾಗಿದ್ದಾವೆ. ಜೀವ-ಪರಮಾತ್ಮನ ಸರಿಯಾದ ಪರಿಚಯದೊಂದಿಗೆ ಫಲಾಪೇಕ್ಷೆ ತೊರೆದು ಅನಿಷಿದ್ಧವಾದ ವಿಹಿತಕರ್ಮವನ್ನಾಚರಿಸುವುದೇ 'ಕರ್ಮಯೋಗ' ಎನಿಸಿದೆ. ಕರ್ಮಾನುಷ್ಠಾನದಿಂದ ಹೃದಯವನ್ನು ನಿರ್ಮಲಗೊಳಿಸಿ ಕೊಂಡು ನಾನು ಪರಮಾತ್ಮನ ಅಂಗ (ಶೇಷ) ಎಂಬ ಪ್ರಜ್ಞಾಜಾಗೃತಿಯನ್ನು ಪಡೆಯುವುದೇ ಜ್ಞಾನಯೋಗವೆನಿಸಿದೆ.

**'ಮೋಕ್ಷೋಪಾಯತ್ವೇನ ಉಕ್ತಾನಾಂ ಕರ್ಮಯೋಗ ಜ್ಞಾನಯೋಗ-ಪ್ರಭೃತೀನಾಂ ಭಕ್ತಿದ್ವಾರೈವ ಸಾಧನತ್ವಮ್ । ಜ್ಞಾನಯೋಗೋ ನಾಮ ಕರ್ಮ-ಯೋಗಾನ್ನಿರ್ಮಲಾಂತಃಕರಣಸ್ಯ ಈಶ್ವರಶೇಷತ್ವೇನ ಪ್ರಕೃತಿವಿಯುಕ್ತ ಸ್ವಾತ್ಮ-ಚಿಂತಾವಿಶೇಷಃ ।'** *(ಯ.ಮ.ದೀ., ಪು. 94)*

## ಭಕ್ತಿಯ ಏಳು ಮಜಲುಗಳು

ಭಕ್ತಿ ಎಂದರೆ ಯಮ-ನಿಯಮವೇ ಮೊದಲಾದ ಅಷ್ಟಾಂಗಯೋಗಗಳೊಂದಿಗೆ ತೈಲಧಾರೆಯಂತೆ ಅವಿಚ್ಛಿನ್ನವಾದ ಸ್ಮರಣೆ. ಈ ಭಕ್ತಿ (1) ವಿವೇಕ (2) ವಿಮೋಕ (3) ಅಭ್ಯಾಸ (4) ಕ್ರಿಯಾ (5) ಕಲ್ಯಾಣ (6) ಅನವಸಾದ (7) ಅನುದ್ಧರ್ಷ ಎಂಬ ಸಾಧನಗಳಿಂದ ಉತ್ಪನ್ನವಾಗುತ್ತದೆ.

**'ಭಕ್ತಿಯೋಗೋ ನಾಮ ಯಮ-ನಿಯಮಾದ್ಯಷ್ಟಾಂಗಯೋಗವಾನ್ ತೈಲನಿಧಾರಾವದವಿಚ್ಛಿನ್ನ ಸ್ಮೃತಿಸಂತಾನರೂಪಃ । ಸ ಚ ವಿವೇಕ-ವಿಮೋಕ-ಅಭ್ಯಾಸ-ಕ್ರಿಯಾ-ಕಲ್ಯಾಣ-ಅನವಸಾದ-ಅನುದ್ಧರ್ಷರೂಪಸಾಧನಸಪ್ತಕ ಜನ್ಯಃ।**
*(ಯ.ಮ.ದೀ., ಪು.)*

ವಿವೇಕ ಮೊದಲಾದ ಪದಗಳ ಅರ್ಥ ಹೀಗಿದೆ :

1. ವಿವೇಕ- ಪವಿತ್ರಾನ್ನದಿಂದ ಸಂಪಾದಿಸುವ ದೇಹಶುದ್ಧಿ.
2. ವಿಮೋಕ- ಕಾಮ-ಕ್ರೋಧಾದಿಗಳಿಗೆ ವಶವಾಗದಿರುವಿಕೆ.
3. ಅಭ್ಯಾಸ- ಮತ್ತೆ ಮತ್ತೆ ಭಗವಚ್ಚಿಂತನ
4. ಕ್ರಿಯಾ- ಪ್ರಾಮಾಣಿಕವಾಗಿ ಪಂಚಯಜ್ಞಾನುಷ್ಠಾನ
5. ಕಲ್ಯಾಣ- ಸತ್ಯ - ಪ್ರಾಮಾಣಿಕತೆ - ದಯಾ - ದಾನ - ಅಹಿಂಸಾ ಮೊದಲಾದವು.
6. ಅನವಸಾದ- ದೈನ್ಯವಿಲ್ಲದಿರುವಿಕೆ.
7. ಅನುದ್ಧರ್ಷ- ಸಾಧನದ ಬಗ್ಗೆ ತೃಪ್ತಿ ಇಲ್ಲದಿರುವಿಕೆ.

ಜ್ಞಾನ-ಧ್ಯಾನ-ಉಪಾಸನಾ ಮೊದಲಾದ ಶಬ್ದಗಳಿಂದ ಕರೆಸಿಕೊಳ್ಳಲ್ಪಡುವ ಭಕ್ತಿಯು ಸ್ಮೃತಿಸಂತಾನರೂಪವಾಗಿದ್ದು ಪ್ರತ್ಯಕ್ಷದರ್ಶನದಂತೆ ಇರುತ್ತದೆ.

**'ಪರಮಪುರುಷಸ್ವರೂಪಂ ತದುಪಾಸನಂ ಚ ಭಕ್ತಿಶಬ್ದವಾಚ್ಯಮುಚ್ಯತೇ'**

*(ಗೀ.ಭಾ. 7.1, ಪು. 4)*

ಶ್ರೀರಾಮಾನುಜಾಚಾರ್ಯರ ಸಿದ್ಧಾಂತದ ಪ್ರಕಾರ ಬ್ರಹ್ಮನು ಪ್ರತ್ಯಕ್ಷ ಗೋಚರನಲ್ಲ. ಅವನು ಸರ್ವಥಾ ಅದೃಶ್ಯ. ಆದ್ದರಿಂದ ಅವನನ್ನು ಸಾಕ್ಷಾತ್ತಾಗಿ ಕಂಡಾಗ ಎಂತಹ ಜ್ಞಾನ ಜನಿಸಬಹುದೋ ಅದಕ್ಕೆ ಸದೃಶವಾದ ದರ್ಶನ ಸಮಾನಾಕಾರವಾದ ಸ್ಮೃತಿಸಂತಾನವನ್ನೇ ಭಕ್ತಿ ಎಂದು ಕರೆಯಲಾಗಿದೆ.

**'ಉಪಾಸನಂ ತು ಭಕ್ತಿರೂಪಾಪನ್ನಮೇವ ಪರಮಪ್ರಾಪ್ತ್ಯುಪಾಯಭೂತಮಿತಿ ವೇದಾಂತವಾಕ್ಯಸಿದ್ಧಮ್ । 'ತಮೇವಂ ವಿದಿತ್ವಾ' 'ಆತ್ಮಾನಮೇವ ಲೋಕಮುಪಾಸೀತ' 'ತಸ್ಮಿನ್ ದೃಷ್ಟೇ ಪರಾವರೇ' ಇತ್ಯಾದಿಭಿರೈಕ್ಯಾರ್ಥಾತ್ ಸ್ಮೃತಿಸಂತಾನರೂಪಂ ದರ್ಶನಸಮಾನಾಕಾರಂ ಧ್ಯಾನೋಪಾಸನಾ ಶಬ್ದವಾಚ್ಯ-ಮಿತ್ಯವಗಮ್ಯತೇ ।'** *(ಗೀ.ಭಾ. 7.1, ಪು. 5)*

**ಪ್ರಪತ್ತಿಯ ಹಿರಿಮೆ**

ಇನ್ನು ಪ್ರಪತ್ತಿಯೂ ಶ್ರೀರಾಮಾನುಜ ಸಿದ್ಧಾಂತದಂತೆ, ಮೋಕ್ಷಸಾಧನ ವಾಗಿದೆ. ಅದರ ಸ್ವರೂಪ ಹೀಗಿದೆ-

'ಇನ್ನೊಬ್ಬರಿಂದ ಈಡೇರಿಸಲಾಗದ ಅಭೀಷ್ಟದ ಈಡೇರಿಕೆಗಾಗಿ ಪರಿಪೂರ್ಣ

ನಂಬಿಕೆಯೊಂದಿಗೆ ಪರಶಕ್ತಿಗೆ ತನ್ನನ್ನು ಒಪ್ಪಿಸಿಕೊಳ್ಳುವುದು (ಶರಣಾಗತನಾಗುವುದು) 'ಪ್ರಪತ್ತಿ' ಎನಿಸಿದೆ.

**ಅನನ್ಯಸಾಧ್ಯೇ ಸ್ವಾಭೀಷ್ಟೇ ಮಹಾವಿಶ್ವಾಸಪೂರ್ವಮ್ ।**
**ತದೇಕೋಪಾಯತಾಯಾಂಚಾ ಪ್ರಪತ್ತಿಃ ಶರಣಾಗತಿಃ ॥** *(ಅ.ಸಂ., 2)*

1. ಪರಮಾತ್ಮನ ಅಪ್ಪಣೆಯಂತೆ ನಡೆಯುವ ಪ್ರಯತ್ನ
2. ಅಧ್ಯಾತ್ಮ ವಿರೋಧಿ ಚಟುವಟಿಕೆಯನ್ನು ತೊರೆಯುವುದು.
3. ಭಗವಂತನು ತನ್ನನ್ನು ನಿಶ್ಚಿತವಾಗಿ ರಕ್ಷಿಸುವನೆಂಬ ನಂಬಿಕೆ
4. ರಕ್ಷಕನು ಶ್ರೀಹರಿಯೇ ಎಂದು ಅವನನ್ನು ರಕ್ಷಕನನ್ನಾಗಿ ಸ್ವೀಕರಿಸುವುದು.
5. ಕರ್ಮದ ಫಲದೆಡೆ ಆಸಕ್ತಿ ತೊರೆಯುವುದು.
6. ಪ್ರತಿಭೆ - ಚಾರಿತ್ರ್ಯ- ಶ್ರೇಷ್ಠಕುಲದಲ್ಲಿ ಜನ್ಮ-ವಿದ್ಯಾ ಐಶ್ವರ್ಯ ಮೊದಲಾದ ಗರ್ವಸಾಧನಗಳಿರುವಾಗಲೂ ಗರ್ವವಿಲ್ಲದಿರುವಿಕೆ.

ಇವಿಷ್ಟು ಸಮಷ್ಟಿಯಾಗಿ 'ಪ್ರಪತ್ತಿ' ಎನಿಸಿದೆ. 'ಪ್ರಪತ್ತಿ'ಯನ್ನೇ 'ನ್ಯಾಸ' 'ಶರಣಾಗತಿ' ಎಂದೆಲ್ಲ ಕರೆಯಲಾಗಿದೆ.

**ಆನುಕೂಲ್ಯಸ್ಯಸಂಕಲ್ಪಃ ಪ್ರಾತಿಕೂಲ್ಯಸಸ್ಯ ವರ್ಜನಮ್ ।**
**ಆತ್ಮನಿಕ್ಷೇಪ ಕಾರ್ಪಣ್ಯೇ ಷಡ್ವಿಧಾ ಶರಣಾಗತಿಃ ॥** *(ಅ.ಸಂ., 28,29)*

ಶ್ರೀರಾಮಾನುಜ ಸಿದ್ಧಾಂತದಲ್ಲಿ ಭಕ್ತಿಯನ್ನು 'ಉಪಾಯಭಕ್ತಿ' ಮತ್ತು 'ಸಾಧ್ಯಭಕ್ತಿ' ಎಂದು ಎರಡು ಬಗೆಯಾಗಿ ವಿಶ್ಲೇಷಿಸಲಾಗಿದೆ. ಯಮ-ನಿಯಮಾದಿ ಅಷ್ಟಾಂಗಯೋಗ ಮತ್ತು ವಿವೇಕವೇ ಮೊದಲಾದ ಏಳುಸಾಧನಗಳಿಂದ ಜನಿಸುವ ಭಕ್ತಿ ಪರಮಾತ್ಮನ ಪ್ರಾಪ್ತಿಗೆ ಉಪಾಯವಾಗಿದ್ದು 'ಉಪಾಯಭಕ್ತಿ' ಎನಿಸಿದೆ. ಶಾಸ್ತ್ರಜ್ಞಾನ-ಪಾಂಡಿತ್ಯ-ಶ್ರೇಷ್ಠಕುಲದಲ್ಲಿ ಜನ್ಮ ಮೊದಲಾದ ಉಚ್ಚಮಟ್ಟದ ಸಾಧನಸಂಪನ್ನರು ಈ ಭಕ್ತಿಮಾರ್ಗಕ್ಕೆ ಅಧಿಕಾರಿಗಳು. 'ಸಾಧ್ಯಭಕ್ತಿ' ಎಂದರೆ ಭಕ್ತಿಗೆ ಅಂತರಂಗಸಾಧನವಾದುದು (ಸಾಧ್ಯಾ ಭಕ್ತಿಃ ಯಯಾ ಸಾ ಸಾಧ್ಯಭಕ್ತಿಃ) ಎಂದು ಅರ್ಥ. ಭಕ್ತಿಗೆ ಸಾಧನವಾದುದೇ ಪ್ರಪತ್ತಿ. ಆದ್ದರಿಂದ ಶ್ರೀರಾಮಾನುಜಾಚಾರ್ಯರು 'ಭಕ್ತಿಯೋಗದಲ್ಲಿ ಅಧಿಕಾರ ದೊರಕಲು ಶರಣಾಗತಿ ಸಾಧನವಾಗಿದೆ' ಎಂದಿದ್ದಾರೆ-

'ಭಕ್ತಿಯೋಗಾರಂಭಸಿದ್ಧಯೇ ಭಕ್ತ್ಯಂಗತ್ವೇನ ಶರಣಾಗತಿರುಪಾಯಭೂತಾ ..'

*(ಗೀ.ಭಾ.7.1, ಪು. 2)*

ಇನ್ನು ಪ್ರಪತ್ತಿಮಾರ್ಗವು ಸರ್ವರಿಗೂ ಎಟಕುವ ಸುಲಭ ಸಾಧನವಾಗಿದೆ. ಇದರ ಅರ್ಹತಾವಿವರ ಹೀಗಿದೆ-

1. ಭಕ್ತಿಮಾರ್ಗಕ್ಕೆ ಹೋಗಲು ಸಾಮರ್ಥ್ಯವಿಲ್ಲದವರು.
2. ಜ್ಞಾನಸಂಪಾದಿಸಲು ಅಶಕ್ತರಾದವರು.
3. ಶಾಸ್ತ್ರಾಧ್ಯಯನ ವಿದೂರರು
4. ಸತ್ಕಾಲಕ್ಷೇಪ ಮಾಡಲು ದಾರಿ ತಿಳಿಯದವರು.

ಯಾವುದೇ ಜಾತಿಮತ ಕುಲದವರು ಪ್ರಪತ್ತಿಮಾರ್ಗಕ್ಕೆ ಅಧಿಕಾರಿಗಳಾಗಬಹುದು.

**'ಭಕ್ತ್ಯಾದೌ ಶಕ್ತ್ಯಭಾವಃ ಪ್ರಮಿತಿರಹಿತತಾ ಶಾಸ್ತ್ರತಃ ಪರ್ಯುದಾಸಃ ।**
**ಕಾಲಕ್ಷೇಪಾಕ್ಷಮತ್ವಂ ತ್ವಿತಿ ನಿಯತಿವಶಾದಾಪತದ್‌ಭಿಃ ಚತುರ್ಭಿಃ ।'**

*(ವಿಜಯೀಂದ್ರಭಿಕ್ಷು ವಿರಚಿತ ಸರ್ವಸಿದ್ಧಾಂತ ಸಾರಸಂಗ್ರಹ)*

ಉಪಾಯಭಕ್ತಿಯು ಪ್ರಾರಬ್ಧಕ್ಕಿಂತ ಭಿನ್ನವಾದ ಪಾಪವನ್ನು ವಿನಾಶಗೊಳಿಸಬಲ್ಲದು. ಆದರೆ ಸಾಧ್ಯಭಕ್ತಿ(ಪ್ರಪತ್ತಿ) ಪ್ರಾರಬ್ಧಪಾಪವನ್ನೂ ನಾಶಗೊಳಿಸಬಲ್ಲದು. ಆದ್ದರಿಂದ ಪ್ರಪತ್ತಿಮಾರ್ಗ ಸರಳ ಮತ್ತು ಎಲ್ಲರಿಂದ ಆಶ್ರಯಣೀಯವಾಗಿದೆ.

**ಸಾಧನಂ ಭಗವತ್ಪ್ರಾಪ್ತೌ ಸಾ ಏವೇತಿ ಸ್ಥಿರಾ ಮತಿಃ ।**
**ಸಾಧ್ಯಭಕ್ತಿಸ್ತಥಾ ಸೈವ ಪ್ರಪತ್ತಿರಿತಿ ಗೀಯತೇ ॥**
**ಉಪಾಯಭಕ್ತಿಃ ಪ್ರಾರಬ್ಧವ್ಯತಿರಿಕ್ತಾಘನಾಶಿನೀ ।**
**ಸಾಧ್ಯಭಕ್ತಿಸ್ತು ಸಾ ಹಂತ್ರೀ ಪ್ರಾರಬ್ಧಸ್ಯಾಪಿ ಭೂಯಸೀ ॥**

*(ನ್ಯಾ.ಸಿ., ಪು. 72)*

ಈ ವಿಷಯಗಳು ವಾತ್ಸ್ಯವರದಾಚಾರ್ಯರ ಪ್ರಪನ್ನ ಪಾರಿಜಾತ ರಮಾನಂದರ ಸಿದ್ಧಾಂತಸಾರ ಮತ್ತು ವೈಷ್ಣವಮತಾಬ್ಜಭಾಸ್ಕರ ಹಾಗೂ ವೇದಾಂತಾಚಾರ್ಯರ ನ್ಯಾಯಸಿದ್ಧಾಂಜನದಲ್ಲಿ ಸ್ಫುಟವಾಗಿ ನಿರೂಪಿಸಲ್ಪಟ್ಟಿವೆ.

# VIII. ಮುಕ್ತಿ

## ಸಾಯುಜ್ಯವೇ ಪ್ರಧಾನ ಮುಕ್ತಿ

ಇದಲ್ಲದೇ ಜೀವಾತ್ಮರಲ್ಲಿ ಸಮಾನತೆಯನ್ನು ಈ ದರ್ಶನವು ಅಂಗೀಕರಿಸಿದೆ. ಪ್ರತಿಯೊಬ್ಬ ಚೇತನನು ಜ್ಞಾನಾನಂದಾದಿಗುಣಗಳಿಂದ ಪೂರ್ಣನಾಗಿರುವನು. ಔಪಾಧಿಕವಾದ ದೇವತ್ವ ಋಷಿತ್ವಾದಿ ಧರ್ಮಗಳನ್ನು ಒಮ್ಮೆ ಕಳೆದುಕೊಂಡು, ಪರಮಾತ್ಮನ ಆನಂದ ಸಾಮ್ಯದೊಂದಿಗೆ ಜೀವರು ಮುಕ್ತಿಯಲ್ಲಿ ಅಸ್ತಿತ್ವವನ್ನು ಪಡೆಯುತ್ತಾರೆ. ಸಾಲೋಕ್ಯ , ಸಾಮೀಪ್ಯ ಮೊದಲಾಗಿ ಪುರಾಣಗಳು ಮೋಕ್ಷವನ್ನು ನಾಲ್ಕುಬಗೆಯಾಗಿ ವರ್ಣಿಸಿದರೂ ಸಾಯುಜ್ಯಮುಕ್ತಿಯೇ ಪ್ರಧಾನಮುಕ್ತಿ ಎನಿಸಿದೆ. ಈ ಬಗ್ಗೆ ನಿಗಮಾಂತಮಹಾದೇಶಿಕರ ಈ ವಾಕ್ಯವನ್ನು ಮನನ ಮಾಡಬಹುದಾಗಿದೆ-

**ಸಾಲೋಕ್ಯಾದ್ಯಾಃ ಪ್ರಭೇದಾಃ ನನು ಪರಿಪಠಿತಾಃ ಕ್ವಾಪಿ ಮೋಕ್ಷಸ್ಯ ಮೈವಂ**
**ಸಾಯುಜ್ಯಸ್ಯೈವ ತತ್ತ್ವಾತ್ ತದಿತರ ವಿಷಯೇ ಮೋಕ್ಷಶಬ್ದಸ್ತು ಭಾಕ್ತಃ ॥**

*(ತ.ಕ., ಜೀವಸರ, ಪು. 67)*

ಇದಕ್ಕೆ ಪೂರಕವಾಗಿ ಪ್ರಮಾಣಗಳನ್ನು ಹೀಗೆ ಗಮನಿಸಬಹುದಾಗಿದೆ-

**'ಲೋಕೇಷು ವಿಷ್ಣೋರ್ನಿವಸಂತಿ ಕೇಚಿತ್**
**ಸಮೀಪಮಿಚ್ಛಂತಿ ಚ ಕೇಚಿದನ್ಯೇ ।**
**ಅನ್ಯೇತು ರೂಪಂ ಸದೃಶಂ ಭಜಂತೇ**
**ಸಾಯುಜ್ಯಮನ್ಯೇ ಸ ತು ಮೋಕ್ಷ ಉಕ್ತಃ ॥'**

**'ಮೋಕ್ಷಂ ಸಾಲೋಕ್ಯಸಾರೂಪ್ಯಂ**
**ಪ್ರಾರ್ಥಯೇತ ನರಾಧಮಃ ।**
**ಇಚ್ಛಾಮ್ಯಹಂ ಮಹಾಬಾಹೋ**
**ಸಾಯುಜ್ಯಂ ತವ ಸುವ್ರತ ॥'**

## ಮುಕ್ತಿಯಲ್ಲಿ ಆನಂದತಾರತಮ್ಯ

ವಿಶಿಷ್ಟಾದ್ವೈತಸಿದ್ಧಾಂತವು ಮುಕ್ತರ ಆನಂದದಲ್ಲಿ ತಾರತಮ್ಯವನ್ನು ನಿರಾಕರಿಸುವುದರ ಜೊತೆಗೆ ಬ್ರಹ್ಮಾನಂದಾನುಭವವನ್ನು ಜೀವನಿಗೆ ಅಂಗೀಕರಿಸಿರುವುದು ಈ ಸಿದ್ಧಾಂತದ ಉದಾರ ಚಿಂತನೆಯಾಗಿದೆ. ಮುಕ್ತಿಯಲ್ಲಿ

ಜೀವನ ಅನಾದಿಯಾದ ಅವಿದ್ಯೆಯ ಬಿಡುಗಡೆಯುಂಟಾದಾಗ ಸ್ವಾಭಾವಿಕವಾದ ಪರಮಾತ್ಮನ ಆನಂದಾನುಭವವೇ ಅವನಿಗೆ ದೊರಕುತ್ತದೆ-

**'ತ್ರಯ್ಯಂತನಿಷ್ಣಾತಾಸ್ತು ....... ಜೀವಸ್ಯ ಅನಾದಿಕರ್ಮರೂಪಾವಿದ್ಯಾ-ತಿರೋಹಿತಸ್ವರೂಪಸ್ಯ ಅವಿದ್ಯೋಚ್ಛೇದಪೂರ್ವಕಸ್ವಾಭಾವಿಕಪರಮಾತ್ಮಾ-ನುಭವಮೇವ ಮೋಕ್ಷಮಾಚಕ್ಷತೇ ।'** (ಶ್ರೀ.ಭಾ. 1-2-12)

ಮುಕ್ತಿಯಲ್ಲಿ ಜೀವನ ಸ್ವಾಭಾವಿಕವಾದ ಪಾಪವಿದೂರತೆ, ಸರ್ವಜ್ಞತ್ವಾದಿ ಮಂಗಲ ಗುಣಗಳು ಅಭಿವ್ಯಕ್ತಿಗೊಳ್ಳುತ್ತವೆ. ಕೊಳೆಯಾದ ಮಣಿಯನ್ನು ತೊಳೆದಾಗ ಅದರಲ್ಲಿರುವ ಪ್ರಕಾಶವೇ ಹೊರಹೊಮ್ಮುವಂತೆ ಜೀವರಲ್ಲಿರುವ ಸಹಜವಾದ ಜ್ಞಾನಾನಂದಾದಿ ಸದ್ಗುಣಗಳೇ ಅಭಿವ್ಯಕ್ತಿಗೊಳ್ಳುತ್ತವೆ. ಮುಕ್ತಿ ಎಂದರೆ ಇರುವುದನ್ನು ಚೆನ್ನಾಗಿ ಆವಿಷ್ಕಾರಮಾಡಿಕೊಳ್ಳುವುದಲ್ಲದೇ ಹೊಸತನ್ನು ಪಡೆಯುವುದಲ್ಲ.

**''ಅತಃ ಅಪಹತಪಾಪ್ಮತ್ವಾದಿಸ್ವರೂಪ ಏವಾಯಮಾತ್ಮಾ ಸಂಸಾರ-ದಶಾಯಾಂ ಕರ್ಮಾಖ್ಯಾವಿದ್ಯಯಾ ತಿರೋಹಿತಸ್ವರೂಪಃ ಪರಂಜ್ಯೋತಿರುಪ-ಸಂಪದ್ಯ ಆವಿರ್ಭೂತಸ್ವರೂಪೋ ಭವತಿ । ಅತಃ ಪ್ರತ್ಯಗಾತ್ಮನೋಽಪಹತ-ಪಾಪ್ಮತ್ವಾದಯಃ ಸ್ವಾಭಾವಿಕಾ ಗುಣಾಃ ಪರಂಜ್ಯೋತಿರುಪಸಂಪನ್ನ-ಸ್ಯಾವಿರ್ಭವಂತಿ; ನೋತ್ಪದ್ಯಂತೇ । ಯಥೋಕ್ತಂ ಭಗವತಾ ಶೌನಕೇನಾಪಿ - 'ಯಥಾ ನ ಕ್ರಿಯತೇ ಜ್ಯೋತ್ಸ್ನಾ ಮಲಪ್ರಕ್ಷಾಲನನ್ಮಣೇಃ । ದೋಷ-ಪ್ರಹಾಣಾನ್ನ ಜ್ಞಾನಮಾತ್ಮನಃ ಕ್ರಿಯತೇ ತಥಾ । ಯತೋದಪಾನಕರಣಾತ್ ಕ್ರಿಯತೇ ನ ಜಲಾಂಬರಮ್ । ಸದೇವ ನಿಯತೇ ವ್ಯಕ್ತಿಮಸತಸ್ಸಂಭವಃ ಕುತಃ। ತಥಾ ಹೇಯಗುಣಧ್ವಂಸಾದವಬೋಧಾದಯೋ ಗುಣಾಃ । ಪ್ರಕಾಶ್ಯಂತೇ ನ ಜನ್ಯಂತೇ ನಿತ್ಯಾ ಏವಾತ್ಮನೋ ಹಿ ತೇ ॥'** (ವಿಷ್ಣುಧರ್ಮ 4-55-57)''
(ಶ್ರೀ.ಭಾ. 4-4-3)

## IX. ಉಪಸಂಹಾರ

ವಿಶಿಷ್ಟಾದ್ವೈತಸಿದ್ಧಾಂತವು ಭಕ್ತಿ-ಪ್ರಪತ್ತಿ ಎಂಬ ಎರಡು ಸಾಧನಗಳನ್ನು ನಿರೂಪಿಸಿ ಪರಮಾತ್ಮನನ್ನು ಎಲ್ಲರೂ ಪಡೆಯಬಹುದೆಂದು ಸಂದೇಶಿಸಿದೆ. ಅಶಕ್ತರಾದ ವ್ಯಕ್ತಿಗಳು ಸರಳವಾದ ಪ್ರಪತ್ತಿಮಾರ್ಗದ ಮೂಲಕ

ಪರಮಾತ್ಮನನ್ನು ಪಡೆಯಬಹುದಾಗಿದೆ. ಮಂಗಲಗುಣಧಾಮನಾದ ಪರಮಾತ್ಮನ ಅಂಶರಾದ ಎಲ್ಲ ಜೀವರೂ ಜ್ಞಾನಾನಂದಸ್ವರೂಪರೆಂಬ ವಿಶಿಷ್ಟಾದ್ವೈತದ ಚಿಂತನೆ ಚೇತೋಹಾರಿಯಾಗಿದೆ. ಸಮಗ್ರ ವಿಶ್ವವನ್ನೇ ಶರಣಾಗತಿಯ ತೋಳ್ತೆಕ್ಕೆಯಲ್ಲಿ ಬಂದಿಯಾಗಿಸುವ ಇಲ್ಲಿಯ ಉದಾತ್ತ ದೃಷ್ಟಿ ಎಲ್ಲರನ್ನೂ ಆಕರ್ಷಿಸುತ್ತದೆ. ಸಾವಿರಾರು ವರ್ಷಗಳ ಇತಿಹಾಸವನ್ನು ಹೊಂದಿದ ದ್ರಾವಿಡಸಂಸ್ಕೃತಮಯ ಪ್ರಬಂಧಗಳನ್ನು ಒಳಗೊಂಡ ಈ ವಾಙ್ಮಯಪ್ರಪಂಚವು ವಿದ್ವಾಂಸರು ಹಾಗೂ ಜನಸಾಮಾನ್ಯರನ್ನು ಗಾಂಭೀರ್ಯ ಹಾಗೂ ಔದಾರ್ಯಗಳಿಂದ ಅಯಸ್ಕಾಂತದಂತೆ ಆಕರ್ಷಿಸಿದೆ. ಇಂದಿಗೂ ಈ ಪರಂಪರೆಯ ಸಂತರು ದೇಶಾದ್ಯಂತ ವೈಷ್ಣವಧರ್ಮ ಪ್ರಸಾರವನ್ನು ಮಾಡುತ್ತಿದ್ದು ಜನರಲ್ಲಿ ಆಧ್ಯಾತ್ಮಿಕ ಭಾವನೆಯ ಜಾಗೃತಿಯಲ್ಲಿ ವಿಶಿಷ್ಟ ಕೊಡುಗೆಯನ್ನು ನೀಡಿದ್ದಾರೆ.

0-0-0

# ದ್ವೈತದರ್ಶನ

## I. ದರ್ಶನಸಾರ

### ಶ್ರೀಹರಿ ಅನಂತಗುಣ

ವಿಶ್ವದ ಯಾವುದೋ ಒಂದೊಂದು ಚೇತನನಲ್ಲಿ ದಯೆ, ಶಾಂತಿ, ಔದಾರ್ಯ, ವಿದ್ವತ್ತು ಮೊದಲಾದ ಗುಣಗಳನ್ನು ಕಾಣುತ್ತೇವೆ. ಇಂತಹ ಅಮೂಲ್ಯವಾದ ಜ್ಞಾನ, ವಿಜ್ಞಾನ, ದಯೆ, ಸೌಂದರ್ಯ, ಔದಾರ್ಯ, ಗಾಂಭೀರ್ಯವೇ ಮೊದಲಾದ, ಅಪ್ರಾಕೃತವಾದ ಅನಂತ ಶುಭಗುಣಗಳ ಅಂತಿಮ ಧಾಮವೂ, ನಿರ್ದೋಷವೂ ಆದ ವಿಶ್ವದ ಚಾಲಕಶಕ್ತಿಯೇ ಪರಮಾತ್ಮನೆನಿಸಿರುವನು-

**'ಅತೋಽಶೇಷಗುಣೋನ್ನದ್ಧಂ ನಿರ್ದೋಷಂ ಯಾವದೇವ ಹಿ ।**
**ತಾವದೇವೇಶ್ವರೋ ನಾಮ .... ॥'** (ಬ್ರ.ಸೂ. ಅನು. 3-2, ಶ್ಲೋ. 137)

ಇಂತಹ ಪರಶಕ್ತಿಯ ಅದ್ಭುತ ಕರ್ತೃತ್ವದ ಸಂಕೇತವೇ ಸತ್ಯವಾದ (ಮಿಥ್ಯೆಯಲ್ಲದ), ಕಾಣುವ ಈ ವಿಶ್ವವಾಗಿದೆ. ಜನಿಸಿದ, ವೈವಿಧ್ಯಮಯವಾದ ಈ ಪ್ರಪಂಚದಲ್ಲಿರುವ ಕೌಶಲದಿಂದ ಇದರ ನಿರ್ಮಾತೃವಾದ ಪರಮಾತ್ಮನ ಮಾಹಾತ್ಮ್ಯವನ್ನು ನಾವು ಅರಿಯಬಹುದಾಗಿದೆ.

ವಿಶ್ವದ ಒಂದೊಂದು ಪದಾರ್ಥವೂ ಹಲವು ಅದ್ಭುತಗಳನ್ನೊಳಗೊಂಡಿದೆ. ಕಾಣ್ಕೆ, ಅಭಿರುಚಿಗಳ ವಿಭಿನ್ನತೆಯು, ವಸ್ತುವಿನ ಬಹುಮುಖತೆಯ ಪರಿಚಾಯಕವಾಗಿದೆ. ಪರಿಶುದ್ಧವಾದ ಜ್ಞಾನಯುತವಾದ ಅನುಭವದ ಪರಾಕಾಷ್ಠೆಯನ್ನು ತಲುಪುವವರೆಗೂ ಯಾವುದೇ ಒಂದು ವಸ್ತುವನ್ನು ಮಾನವನು ಪೂರ್ತಿಯಾಗಿ ಅರಿಯಲಾರನು. ಸಂಶೋಧನೆ ನಡೆಸಿದಂತೆಲ್ಲ ಪ್ರಕೃತಿಯ ವಿಚಿತ್ರ ಸೊಬಗನ್ನು ಕಾಣುವ ನಾವು, ಇದರಿಂದ ಅದರ ಸೂತ್ರಶಕ್ತಿಯ ಮಹತ್ವವನ್ನು ಮನಗಾಣಬಹುದಾಗಿದೆ. ಆದ್ದರಿಂದಲೇ ಆಚಾರ್ಯರು, 'ಅತ್ಯಂತವಿಚಿತ್ರವಾದ, ನಮ್ಮ ಸಂಶೋಧನೆಗೆ ನಿಲುಕದ, ಚೇತನಾಚೇತನಾತ್ಮಕವಾದ ಈ ವಿಶ್ವದ, ನಿರ್ಮಾತೃವು ಸರ್ವೋತ್ಕೃಷ್ಟ ಶಕ್ತಿಯುತನೂ, ಗುಣಪೂರ್ಣನೂ ಆಗಿರುವನು' ಎಂದಿದ್ದಾರೆ-

'ಬಹುಚಿತ್ರಜಗದ್ಬಹುಧಾ ಕರಣಾತ್ ಪರಶಕ್ತಿರನಂತಗುಣಃ ಪರಮಃ'
(ದ್ವಾ.ಸ್ತೋ.)

### ವೈಚಿತ್ರ್ಯ-ಭಿನ್ನತೆಗಳು ಎಲ್ಲೆಡೆ ಇವೆ

ಪ್ರತಿಯೊಂದು ವಸ್ತುವು, ತನ್ನದೇ ಆದ ವೈಶಿಷ್ಟ್ಯ, ವೈಚಿತ್ರ್ಯವನ್ನೊಳಗೊಂಡಿದೆ. ಆದ್ದರಿಂದಲೇ ಪ್ರತಿಯೊಂದು ವಸ್ತುವು ತನಗಿಂತ ಬೇರೆಯಾದ ಎಲ್ಲ ವಸ್ತುಗಳಿಂದ ವಿಭಿನ್ನವಾಗಿದೆ. ವಸ್ತುವಿನ ಜ್ಞಾನ ಬರುವಾಗಲೇ, 'ಇದು ಉಳಿದೆಲ್ಲ ವಸ್ತುಗಳಿಗಿಂತ ಭಿನ್ನವಾಗಿದೆ' ಎಂದೇ ಜ್ಞಾನ ಬರುವುದು. ಎಲ್ಲೆಡೆ ಅನುಭವಕ್ಕೆ ಬರುವ ಈ ಭೇದವು ಯಥಾರ್ಥವಾಗಿದೆ. 'ನಾವೆಲ್ಲಾ ಒಂದು, ನಮ್ಮಲ್ಲಿ ಭೇದವಿಲ್ಲ' ಎಂದು ಸುಲಭವಾಗಿ ಘೋಷಿಸಬಹುದಾದರೂ, ಎಲ್ಲರೂ ಒಂದಾಗುವುದು ಪ್ರಕೃತಿನಿಯಮಕ್ಕೆ ನಿಲುಕದೆಂಬುದು ಎಲ್ಲರ ಅನುಭವಕ್ಕೆ ಬಂದಿರುವ ವಿಷಯ. ಈ ಹಿನ್ನೆಲೆಯಲ್ಲಿ ಪ್ರತಿಯೋರ್ವ ಜೀವಾತ್ಮನೂ ಇನ್ನೋರ್ವ ಜೀವಾತ್ಮನಿಂದ ಭಿನ್ನನಾಗಿರುವನು. ಇದರಂತೆ ಜೀವಾತ್ಮರೆಲ್ಲರೂ ವಿಶ್ವದ ಚಾಲಕಶಕ್ತಿಯಾದ ಪರಮಾತ್ಮನಿಂದ ಭಿನ್ನರಾಗಿದ್ದಾರೆ. ಜೀವ, ಜಡ, ಪರಮಾತ್ಮರಲ್ಲಿರುವ ಈ ಭೇದ, ಸ್ವಾಭಾವಿಕವಾಗಿರುತ್ತದೆ. ಅಭಿಪ್ರಾಯದ ಏಕತೆಯನ್ನು ತಳೆಯದೇ 'ನಾವೆಲ್ಲ ಒಂದು' ಎಂದು ಘೋಷಿಸಿದರೆ, ಒಂದಾಗುವುದಿಲ್ಲವಷ್ಟೇ ? ಜನತೆಯಲ್ಲ ಒಂದೇ ನಿಲುವು ತಳೆದಾಗ ಒಂದೆನಿಸಬಹುದು. ಆದರೆ ಔಪಚಾರಿಕವಾದ ಈ ಏಕತೆ, ಪ್ರಕೃತಿಸಹಜವಾದ 'ಭೇದ'ವನ್ನು ನಿರಾಕರಿಸುವುದಿಲ್ಲವಷ್ಟೇ! ಈ ಹಿನ್ನೆಲೆಯಲ್ಲಿ ಭೇದ ಸತ್ಯ ಹಾಗೂ ಶಾಶ್ವತ.

ಅನಂತಗುಣಗಳ ಅಂತಿಮಧಾಮನಾದ ಪರಮಾತ್ಮನ ಅನುಗ್ರಹಕ್ಕೆ ಪ್ರಮುಖವಾದುದು ನಿರ್ವ್ಯಾಜ ಹಾಗೂ ಸರ್ವೋತ್ಕೃಷ್ಟವಾದ ಪ್ರೇಮ. ಕೇವಲ ಭಕ್ತಿಪಾಶದಿಂದ ಸಾಧಕನ ಹೃದಯದಲ್ಲಿ ನರ್ತಿಸುವ ಪರಮಾತ್ಮನ ಜ್ಞಾನಕ್ಕೆ ಸಾಧನವಾದುದು, ವೇದ ಹಾಗೂ ಬ್ರಹ್ಮಸೂತ್ರಗಳು. ಶುಷ್ಕ ತರ್ಕದಿಂದ ಪರಮಾತ್ಮನನ್ನು ಅರಿಯಲಾಗದು. ಏಕೆಂದರೆ ತರ್ಕದಿಂದ ಒಂದನ್ನು ಸಾಧಿಸಬಹುದಾದಂತೆ, ನಿರಾಕರಿಸಲೂಬಹುದು. ಈ ಹಿನ್ನೆಲೆಯಲ್ಲಿ ತರ್ಕಾತೀತವಾದ ಪರಶಕ್ತಿಯ ಸಾಕ್ಷಾತ್ಕಾರಕ್ಕಾಗಿ ಅಧ್ಯಯನರೂಪವಾದ ತಪಸ್ಸು ನಡೆಯಲಿ.

### ಸಿದ್ಧ ಕೆಲವರಿಗೆ

ಅಧ್ಯಯನಶೀಲನಾದವನು 'ಸತ್ಯ'ದ ಸಾಕ್ಷಾತ್ಕಾರ ಪಡೆಯುವನು. ಆದರೆ,

ಅಧ್ಯಯನ, ನಡೆಸಿದವರೆಲ್ಲ ಸಿದ್ಧಿ ಪಡೆಯಲಾರರು. ಕೆಲವರೇ ಸಿದ್ಧಿ ಪಡೆಯುವಂತೆ, ಹಲವರು ಕೈಸುಟ್ಟುಕೊಳ್ಳುವುದು ಅನಿವಾರ್ಯ. ನಿಂಬೆಯಲ್ಲಿ ಕಾಣುವ ಹುಳಿಯಂತೆ, ಹಾಲಿನಲ್ಲಿ ಕಾಣುವ ಮಾಧುರ್ಯದಂತೆ, ಪ್ರತಿಯೋರ್ವ ಆತ್ಮರೂ ತಮ್ಮದೇ ಆದ ವಿಶಿಷ್ಟವಾದ ಸ್ವಭಾವ, ವ್ಯಕ್ತಿತ್ವವನ್ನು ಪಡೆದಿದ್ದಾರೆ. ಅವರವರ ಸಾಧನೆ, ವಿಭಿನ್ನ ಸ್ವಭಾವ, ಮೊದಲಾದವನ್ನು ಅವಲಂಬಿಸಿ ಅವರವರು ಫಲ (ಸಿದ್ಧಿ) ಪಡೆಯುತ್ತಾರೆ. ಇದು ಅಪ್ರಿಯ ಹಾಗೂ ಅನಿವಾರ್ಯವಾದ ಸತ್ಯ. ನಮಗೆ ಪ್ರಿಯವಾದುದೇ ಸತ್ಯವಾಗಬೇಕೆಂದಾಗಲೀ ಸತ್ಯವೇ ಪ್ರಿಯವಾಗಬೇಕೆಂದಾಗಲೀ ಹಕ್ಕು ಚಲಾವಣೆ ಮಾಡಲಾಗದು. ಯೋಗ್ಯತೆಯನ್ನು ಮೀರಿ ಫಲ ದೊರಕದಿರುವಾಗ್ಯೂ, ಯೋಗ್ಯತೆಯ ಪರಿಚಯವಿಲ್ಲದಿರುವುದರಿಂದ ಶ್ರದ್ಧಾಯುತವಾದ ಪ್ರಯತ್ನ ನಿರಂತರ ನಡೆಯಬೇಕು.

**ಉಪಾಸನೆಯ ಆಂತರ್ಯ**

ಭಗವಂತನನ್ನು ಉಪಾಸನೆ ಮಾಡುವುದೆಂದರೆ, ಅನಂತ ಶುಭಗುಣನಾದ ಅವನನ್ನು ಹೃದಯದಲ್ಲಿ ಆಹ್ವಾನಿಸುವುದು ಮತ್ತು ದಯೆ, ಧರ್ಮ, ಔದಾರ್ಯಗಳಿಂದ ವರ್ತಿಸುವ ದೀಕ್ಷೆ ತೊಡುವುದೇ ಇದರ ತಾತ್ಪರ್ಯವಾಗಿದೆ. ಹೀಗೆ ಪರಮಾತ್ಮನನ್ನು ಪೂಜಿಸುವುದರ ಜೊತೆಗೆ, ಅವನ ಕಿಂಕರರಾದ ಭಕ್ತರನ್ನೂ, ಮಾತಾಪಿತೃ, ಗುರುಗಳನ್ನು ಪೂಜಿಸಬೇಕು. ಇದರಂತೆಯೇ ವಿಶ್ವದಲ್ಲಿ ಅಜ್ಞಾನದಿಂದ, ದಾಸ್ಯದಿಂದ ಹತ್ತಾರು ಸಮಸ್ಯೆಗಳಿಂದ ತೊಳಲಾಡುವ ದೀನಜನತೆಗೆ ಸಲ್ಲಿಸುವ ಸೇವೆಯೂ ಒಂದು ವಿಧವಾದ ಭಗವತ್ಪೂಜೆ. ಭಗವಂತನ ರಾಜ್ಯದ ಪ್ರಜೆಗಳಾದ ಎಲ್ಲಾ ಜ್ಞಾನಿಗಳಿಗೂ ಈ ಕಂದಾಯದ ನೀಡಿಕೆ ಅನಿವಾರ್ಯ- 'ನಾನಾಜನಸ್ಯ ಶುಶ್ರೂಷಾ ಕರ್ತವ್ಯಾ ಕರವನ್ಮಿತೇಃ ।' (ಭ.ಗೀ.ತಾ. 6-3) ಈ ಹಿನ್ನೆಲೆಯಲ್ಲಿ ನಾನಾವಿಧವಾದ ಜನತೆಯ ಸೇವೆ ಸಾಧಕನ ಉತ್ತಮ ಕರ್ತವ್ಯವಾಗಿದೆ.

ಒಂದನ್ನು ಅಂಗೀಕರಿಸಲು ಅನುಭವಕ್ಕಿಂತ ಮಿಗಿಲಾದ ಸಾಧನವಿಲ್ಲ. ಶಾಸ್ತ್ರಗಳು ಏನು ಪ್ರತಿಪಾದಿಸುತ್ತವೆ ಎಂದು ಗಿಳಿಪಾಠ ಮಾಡುವುದಕ್ಕಿಂತ, ಪ್ರತಿಪಾದಿಸಿದ ವಿಷಯಗಳು ಎಷ್ಟು ಅನುಭವಿಕವಾಗಿವೆ ಮತ್ತು ನಮ್ಮ ಜೀವನದಲ್ಲಿ ಎಷ್ಟು ಅಳವಡಿಸಿಕೊಂಡಿದ್ದೇವೆ ಎಂಬ ಚಿಂತನೆ ಮುಖ್ಯ. ಅನುಭವ ಉತ್ತಮ ಪಾಠವಾದರೂ ಅನುಭವ ಬಂದಮೇಲೆಯೇ ಅದು

ಸತ್ಯವೆಂಬ ಹಠ ಬೇಡ. ಜ್ಞಾನಿಗಳ ಅನುಭವ ಹೇಳಿಕೆಗಳಲ್ಲಿ ನಂಬಿಕೆ, ಶ್ರದ್ಧೆ ಇರಲಿ. ಶ್ರದ್ಧೆಯೇ ಮುಕುತಿಗೆ ದಾರಿ.

ಸತ್ಯ, ದಾನ, ಅಧ್ಯಯನಶೀಲತೆ, ಭಗವತ್‌ಕೈಂಕರ್ಯ ಮೊದಲಾದ ಉತ್ತಮ ಗುಣಗಳನ್ನು ಬೆಳೆಸಿಕೊಂಡು ಸಮಾಜಕ್ಕೆ ಹಿತಕಾರಿಯಾದವನೇ ಬ್ರಾಹ್ಮಣ. ಹುಟ್ಟು, ಮಾನವನ ಶ್ರೇಷ್ಠತೆಗೆ ಸಂಕೇತವಾಗಬಹುದಾದರೂ, ಉತ್ತಮ ಕುಲದಲ್ಲಿ ಜನಿಸಿದವರೆಲ್ಲ ಉತ್ತಮರೆಂದು ಪರಿಗಣಿಸಲಾಗದು. ಹುಟ್ಟಿಗಿಂತ, ಆತ್ಮನಲ್ಲಿರುವ ಸಹಜ ಮತ್ತು ಉತ್ತಮವಾದ ಸಂಸ್ಕೃತಿ, ಭಗವದ್ಭಕ್ತಿ, ಸತ್ಕರ್ಮಾನುಷ್ಠಾನರತಿಯೇ ಅವನ ಬ್ರಾಹ್ಮಣ್ಯದ ಅಳತೆಗೋಲು. ಶಮದಮಾದಿಗಳಿಲ್ಲದ ಬ್ರಾಹ್ಮಣ, ಹರಿಭಕ್ತನಾದ ಅಂತ್ಯಜನಿಗಿಂತ ಕೀಳು. ಗುಣಾಧಿಕನಾದ ಶೂದ್ರ, ಬ್ರಾಹ್ಮಣನೆನಿಸುವನು. ಈ ಹಿನ್ನೆಲೆಯಲ್ಲಿ ಹುಟ್ಟಿನ ಬ್ರಾಹ್ಮಣ್ಯಕ್ಕಿಂತ, ಗುಣದ ಮೂಲಕ ಬ್ರಾಹ್ಮಣ್ಯವನ್ನು ಪಡೆಯುವ ಯತ್ನ ನಡೆಸಬೇಕು.

ಆಚಾರ್ಯರು ನೀಡಿದ ಈ ವಿಶ್ವಮಾನ್ಯವಾದ ಸಂದೇಶ ಮಾಧ್ವರ ಗುತ್ತಿಗೆಯೇನೂ ಅಲ್ಲ. ವಿಚಾರಶೀಲರೆಲ್ಲರೂ ಅಧ್ಯಯನ ನಡೆಸಿ ಅನುಷ್ಠಾನಕ್ಕೆ ತರಬಹುದಾದ ಉತ್ತಮ ಮಾರ್ಗ. ಇಂತಹ ತತ್ವವಾದವನ್ನು ವಿಶ್ವದ ಎಲ್ಲಡೆಗೆ ಪ್ರಚಾರಗೊಳಿಸಲು ಆಚಾರ್ಯರು ನೀಡಿದ ದಿವ್ಯ ಸಂದೇಶವನ್ನು ಅವರ ಶಿಷ್ಯರು ಲಿಪಿಬದ್ಧಗೊಳಿಸಿದರು. ಇತ್ತೀಚೆಗೆ ಉಪಲಬ್ಧವಾದ ತಿಥಿನಿರ್ಣಯ, ನ್ಯಾಸಪದ್ಧತಿಗಳನ್ನು ಸೇರಿ, ಇಂದು ಆಚಾರ್ಯರ ನಲವತ್ತು ಗ್ರಂಥಗಳು ಉಪಲಬ್ಧವಾಗಿವೆ.

## II. ಪ್ರಮುಖ ಕೃತಿಕಾರರು

ಅನುವ್ಯಾಖ್ಯಾನದಲ್ಲಿ ಜಗದ್ಗುರು ಮಧ್ವಾಚಾರ್ಯರು ವರ್ಣಿಸುವಂತೆ ಎಲ್ಲ ಚಿಂತನೆಗಳೂ ಅನಾದಿಕಾಲದಿಂದ ಅಸ್ತಿತ್ವವನ್ನು ಪಡೆದುಕೊಂಡಿದ್ದಾವೆ-

**'ಅನಾದಿಕಾಲತೋ ವೃತ್ತಾಃ ಸಮಯಾ ಹಿ ಪ್ರವಾಹತಃ ।**

**ನ ಚೋಚ್ಛೇದೋಽಸ್ತಿ ॥** (ಬ್ರ.ಸೂ. ಅನು. 2-2, ಶ್ಲೋ. 3)

ವೇದಗಳಲ್ಲಿ ಉಪನಿಷತ್ತುಗಳಲ್ಲಿ ಪಾಂಚರಾತ್ರವೇ ಮೊದಲಾದ ಆಗಮಗ್ರಂಥಗಳಲ್ಲಿ ಅನಂತಕಲ್ಯಾಣಗುಣಪರಿಪೂರ್ಣನಾದ ಪರಮಾತ್ಮನ ಹಿರಿಮೆ-ಗರಿಮೆಗಳು ಹಾಗೂ ಜೀವ-ಬ್ರಹ್ಮರಲ್ಲಿ ಭೇದವು ಸುಸ್ಪಷ್ಟವಾಗಿ

ಉಪವರ್ಣಿತವಾಗಿವೆ. ಇಂತಹ ವೈದಿಕಪರಂಪರೆ ಆದಿಪೂರುಷನಾದ ಶ್ರೀಮನ್ನಾರಾಯಣನಿಂದ ಆರಂಭಗೊಂಡುದುದು ಚತುರ್ಮುಖ ಬ್ರಹ್ಮದೇವ, ದೂರ್ವಾಸರು, ಸನಕಾದಿಗಳು, ಪ್ರಾಜ್ಞತೀರ್ಥರು, ಪರತೀರ್ಥರೇ ಮೊದಲಾದ ಮಹಾತ್ಮರಿಂದ ಮುಂದುವರೆಸಲ್ಪಟ್ಟಿತು. ಹನ್ನೆರಡನೆಯ ಶತಮಾನದ ವೇಳೆಗೆ ಈ ಪರಂಪರೆಯಲ್ಲಿ ವಿಖ್ಯಾತರಾದ ಅಚ್ಯುತಪ್ರಜ್ಞರು ತತ್ವವಾದವನ್ನು ಸಾಧನೆಗಾಗಿ ಬಳಸಿಕೊಳ್ಳುತ್ತಿದ್ದರು. ಕಾಲದ ಬಲದಿಂದ ಅವರ ಮನಸ್ಸಿನಲ್ಲಿ ನಿರ್ಣಯಕ್ಕೆ ತಡೆಯೊಡ್ಡುವ ಕೆಲವು ವೈಚಾರಿಕ ಮಾಲಿನ್ಯಗಳಿದ್ದವು. ತತ್ವನಿಶ್ಚಯಕ್ಕಾಗಿ ಉಡುಪಿಯಲ್ಲಿ ಅನಂತೇಶ್ವರನನ್ನು ದೀರ್ಘವಾಗಿ ಸೇವೆಗೈದಾಗ, ಅನಂತೇಶ್ವರನ ಕರುಣೆಯಿಂದ ಶಿಷ್ಯನಾಗಿ ಬಂದ ವಾಸುದೇವ ನಂತರ ಗುರುವಾಗಿ ಜಗತ್ತಿಗೆ ತತ್ವವಾದವನ್ನು ನೀಡಿದ 'ಶ್ರೀಮಧ್ವಾಚಾರ್ಯ'ರೆನಿಸಿದರು.

### ಶ್ರೀಮಧ್ವಾಚಾರ್ಯರು (1238-1317)

ನಾರಾಯಣ ನಡ್ಡಿಲ್ಲಾಯ ಹಾಗೂ ವೇದವತೀದೇವಿಯ ಮಗನಾಗಿ ಪಾಜಕದಲ್ಲಿ ಜನಿಸಿದ ಈ ಮಗು ವಿಶ್ವವ್ಯಾಪಿಯಾದ ಸಿದ್ಧಾಂತವೊಂದನ್ನು ಜಿಜ್ಞಾಸುಗಳಿಗೆ ಕರುಣಿಸಿರುವುದು ಐತಿಹಾಸಿಕ ಸಂಗತಿ. ತಂದೆ ಮಗುವಿಗೆ 'ವಾಸುದೇವ' ಎಂದು ನಾಮಕರಣಗೈದಿದ್ದರು. ವಾಸುದೇವ ಐದು-ಆರರ ಎಳೆವರೆಯದಲ್ಲಿಯೇ ಸತ್ಯನಿಷ್ಠೆ ಹಾಗೂ ನಿರ್ಭೀತನಡೆಗಳ ಮೂಲಕ ಸಮಕಾಲೀನ ಸಮಾಜದಿಂದ ಆರಾಧ್ಯನಾದ. ತಂದೆ-ತಾಯಿಗಳ ಮನವೊಲಿಸಿ ಅಚ್ಯುತಪ್ರಜ್ಞರ ಬಳಿ ಬಂದು ಕೈಂಕರ್ಯನಿರತನಾದ. 32 ದಿವ್ಯ ಲಕ್ಷಣಗಳಿಂದ ಕಂಗೊಳಿಸುವ ತೇಜಸ್ಸಿನ ತಾಣನಾದ ವಾಸುದೇವನನ್ನು ಅಚ್ಯುತಪ್ರಜ್ಞರು ಶಿಷ್ಯನನ್ನಾಗಿ ಸ್ವೀಕರಿಸಿದರು. ಅವನ ಆಚಾರ-ವಿಚಾರಗಳಿಗೆ ಮನಸೋತು ಸನ್ಯಾಸದೀಕ್ಷೆ ನೀಡಿದರು. 'ಆನಂದತೀರ್ಥರು' ಎಂದು ಶುಭನಾಮವನ್ನು ಕರುಣಿಸಿದರು. ಆಶ್ರಮ ಸ್ವೀಕರಿಸಿದ ದಿನದಿಂದ ಪಾಠ-ಪ್ರವಚನದ ಮೂಲಕ ಗುರು ಹಾಗೂ ಜಿಜ್ಞಾಸುಗಳಿಗೆಲ್ಲ ಆಧ್ಯಾತ್ಮದ ಅಪೂರ್ವ ವ್ಯಾಖ್ಯಾನಪರಂಪರೆಯೊಂದನ್ನು ಶ್ರೀಮಧ್ವಾಚಾರ್ಯರು ಪರಿಚಯಿಸಿದರು. ಭೂಮಂಡಲದುದ್ದಕ್ಕೂ ಸಂಚರಿಸಿ ತತ್ವವಾದದ ಶ್ರೇಷ್ಠತೆಯನ್ನು ವಿದ್ವಾಂಸರಿಗೆ ಮನಗಾಣಿಸಿದರು.

13ನೆಯ ಶತಕದಲ್ಲಿ ನಡೆದ ಪ್ರಮುಖ ವಿದ್ವದ್‌ಗೋಷ್ಠಿಗಳಲ್ಲಿ ಭಾಗವನ್ನು

ಸ್ವೀಕರಿಸಿ ವಿದ್ವಾಂಸರು ಕೇಳಿದ ಪ್ರಶ್ನೆಗಳಿಗೆಲ್ಲ ಸಮರ್ಪಕ ಉತ್ತರ ನೀಡಿ 'ಸರ್ವಜ್ಞಸೂರಿ'ಗಳೆಂದು ವಿಖ್ಯಾತರಾದರು. ಯಾವುದೇ ವಿಷಯದ ಬಗ್ಗೆ ಅಸ್ಪಷ್ಟತೆ-ವಿಸ್ಪಷ್ಟತೆ ಇಲ್ಲದ ಪರಿಶುದ್ಧ ವ್ಯಾಖ್ಯಾನವನ್ನು ನೀಡಿರುವುದು ಶ್ರೀಮಧ್ವಾಚಾರ್ಯರ ವೈಶಿಷ್ಟ್ಯವಾಗಿದೆ. ವೇದಗಳಿಗೆ ಮೂರು ಅರ್ಥವಿದೆ. ಮಹಾಭಾರತದ ಪ್ರತಿ ಶ್ಲೋಕಕ್ಕೆ ಹತ್ತು ಅರ್ಥಗಳಿವೆ. ಸಹಸ್ರನಾಮದ ಪ್ರತಿಯೊಂದು ಪದಕ್ಕೆ ನೂರು ಅರ್ಥಗಳಿವೆ ಎಂದು ಸಾರಿದ ಅಸಾಧಾರಣ ವಿಭೂತಿಪುರುಷರಿವರು. ಕೇರಳದ ವಿದ್ವತ್ಸಭೆಯಲ್ಲಿ ವಿದ್ವಾಂಸರ ಪಂಥಾಹ್ವಾನದ ಮೇರೆಗೆ ವಿಶ್ವಪದದ ಮೂವತ್ತು-ನಲವತ್ತು ಅರ್ಥಗಳನ್ನು ನಿರೂಪಿಸಿದಾಗ ದಿಗ್ಭ್ರಮೆಗೊಂಡ ವಿದ್ವಾಂಸರು ಮೂಕವಿಸ್ಮಿತರಾದರು. ನ್ಯಾಯ, ವ್ಯಾಕರಣ, ಧರ್ಮಶಾಸ್ತ್ರ, ಜ್ಯೋತಿಷ, ಇತಿಹಾಸ, ಪುರಾಣ ಮೊದಲಾದ ಜ್ಞಾನದ ಎಲ್ಲ ಶಾಖೆಗಳಲ್ಲೂ ಅವರಿಗಿರುವ ಪ್ರಭುತ್ವ ಪೂರ್ಣತೆಗಳನ್ನು ಅನುಭವಿಸಿ ಅವರ ಕೈಂಕರ್ಯವನ್ನು ಬದುಕಿನ ಭಾಗ್ಯವೆಂದು ಬಗೆದರು, ಅಂದಿನ ಪಂಡಿತರು. ಶ್ರೀಮಧ್ವಾಚಾರ್ಯರ ಪರಂಪರೆಯನ್ನು ಬೆಳಗಿದ ಶ್ರೀವಿಜಯೀಂದ್ರತೀರ್ಥರು ಹಾಗೂ ಶ್ರೀನಿವಾಸತೀರ್ಥರು ನಾರಾಯಣಶಬ್ದಕ್ಕೆ ನೂರಕ್ಕೂ ಹೆಚ್ಚು ಅರ್ಥಗಳನ್ನು ವ್ಯಾಖ್ಯಾನಿಸಿರುವುದು ಮೂಲಗುರುಗಳ ವರ್ಣನಾತೀತ ವೈದುಷ್ಯದ ಕೋಟ್ಯಂಶದ ಪ್ರದರ್ಶನ ಮಾತ್ರ. 18ನೆಯ ಶತಕದ ಸತ್ಯಪರಾಯಣರು ಬರೆದ ರಾಮನಾಮದ ನೂರಾ ಅರವತ್ತಕ್ಕೂ ಹೆಚ್ಚು ಅರ್ಥಗಳು ಇಂದಿಗೂ ಮುದ್ರಿತವಾಗಿ ಉಪಲಬ್ಧವಾಗಿರುವುದು ಶ್ರೀಮಧ್ವಾಚಾರ್ಯರ ಪರಂಪರೆಯ ಆಳ-ವೈಶಾಲ್ಯಗಳಿಗೆ ಕನ್ನಡಿಯಂತಿದೆ.

ಶ್ರೀಮಧ್ವಾಚಾರ್ಯರು ಬ್ರಹ್ಮಸೂತ್ರಗಳ ಮೇಲೆ ನಾಲ್ಕು ಕೃತಿಗಳನ್ನು ರಚಿಸಿದ್ದಾರೆ. ಬ್ರಹ್ಮಸೂತ್ರಭಾಷ್ಯವು ಇವುಗಳಲ್ಲಿ ಸೂತ್ರಾರ್ಥವನ್ನು ಚಿಕ್ಕದಾಗಿ ವಿವರಿಸಿ ಅದರ ಹಿನ್ನೆಲೆಯಲ್ಲಿರುವ ಪ್ರಮಾಣಗಳನ್ನು ಸೂಚಿಸುವ ಕೃತಿಯಾಗಿದೆ. ಅಣುಭಾಷ್ಯ ಅಥವಾ ಸರ್ವಶಾಸ್ತ್ರಾರ್ಥಸಂಗ್ರಹವು 223 ಅಧಿಕರಣಗಳ ಸಾರಸಂಗ್ರಾಹಕವಾಗಿದೆ. ಬ್ರಹ್ಮಸೂತ್ರಭಾಷ್ಯದಲ್ಲಿರುವ ಸೂಕ್ಷ್ಮಪ್ರಮೇಯವಿವರಣೆಗಾಗಿ ರೂಪುತಳೆದ ವಿಸ್ತೃತ ಕೃತಿ ಅನುಭಾಷ್ಯ ಅಥವಾ ಅನುವ್ಯಾಖ್ಯಾನವೆನಿಸಿದೆ. ಇದರಲ್ಲಿ ಆಚಾರ್ಯರು ನೀಡಿದ ಸೂತ್ರಗಳ ಪೂರ್ವಪಕ್ಷ-ಸಿದ್ಧಾಂತಯುಕ್ತಿಗಳ ಸಂಗ್ರಹವೇ ವಿಸ್ತೃತವಾಗಿ ಮೈದಳೆದು ನ್ಯಾಯವಿವರಣವಾಗಿ ನಿಂದಿದೆ. ಉಪನಿಷತ್ಪ್ರಸ್ಥಾನದಲ್ಲಿ

ಪ್ರಸಿದ್ಧವಾದ ದಶೋಪನಿಷತ್‌ಗಳಿಗೆ ಶ್ರೀಮಧ್ವರು ಭಾಷ್ಯವನ್ನು ರಚಿಸಿದ್ದಾರೆ. ಬ್ರಹ್ಮಸೂತ್ರ ಹಾಗೂ ವೇದೋಪನಿಷತ್ತುಗಳಲ್ಲಿ ಅಡಗಿದ ಪ್ರಮೇಯಗಳನ್ನು ವಿವರಿಸಲು ತತ್ವನಿರ್ಣಯ, ತತ್ವೋದ್ಯೋತ, ಪ್ರಮಾಣಲಕ್ಷಣ, ಕಥಾಲಕ್ಷಣ, ತತ್ವಸಂಖ್ಯಾನ ಮೊದಲಾದ ಹತ್ತು ಪ್ರಕರಣಗ್ರಂಥಗಳನ್ನು ರಚಿಸಿದ್ದಾರೆ.

ಭಗವದ್ಗೀತೆಯ ಅರ್ಥವನ್ನು ವಿವರಿಸಲು ಗೀತಾಭಾಷ್ಯ-ಗೀತಾತಾತ್ಪರ್ಯ ಎಂಬ ಎರಡು ಕೃತಿಗಳನ್ನು ಕರುಣಿಸಿದ್ದಾರೆ. ಭಾಗವತಪುರಾಣದ ವ್ಯಾಖ್ಯಾನದ ನೆಪದಿಂದ 18 ಪುರಾಣಗಳಲ್ಲಿ ಬರುವ ಅಪ್ರತಿಪತ್ತಿ-ವಿಪ್ರತಿಪತ್ತಿಗಳನ್ನು ಪರಿಹರಿಸಲು ಭಾಗವತತಾತ್ಪರ್ಯನಿರ್ಣಯವನ್ನು ರಚಿಸಿದರು. ಶ್ರೀಕೃಷ್ಣ ದ್ವೈಪಾಯನರ ಮಹಾಭಾರತದ ಕಥೆಯ ಒಳಗಿರುವ ಅನುಸಂಧಾನ ಯೋಗ್ಯವಾದ ತತ್ವಗಳನ್ನು ನಿರೂಪಿಸಲು ಮಹಾಭಾರತತಾತ್ಪರ್ಯ ನಿರ್ಣಯವನ್ನು ರಚಿಸಿದರು. ಇತಿಹಾಸ-ಪುರಾಣಗಳ ಬಗ್ಗೆ ಶ್ರೀಮಧ್ವರು ನೀಡಿದ ಇವೆರಡು ಕೃತಿಗಳು ಅದ್ವಿತೀಯವಾಗಿದ್ದಾವೆ.

ಋಗ್ವೇದದ 40 ಸೂಕ್ತಗಳಿಗೆ ವ್ಯಾಖ್ಯಾನ ಮಾಡುವ ಮೂಲಕ ಸಮಗ್ರ ವೈದಿಕವಾಙ್ಮಯವನ್ನು ಅರ್ಥೈಸಿಕೊಳ್ಳಲು ಮಾರ್ಗದರ್ಶನವನ್ನು ನೀಡಿ ಋಗ್ಭಾಷ್ಯವನ್ನು ರಚಿಸಿದ್ದಾರೆ. ಶ್ರೌತಸ್ಮಾರ್ತಕರ್ಮಗಳ ಅನುಷ್ಠಾನಕ್ಕೆ ಅಗತ್ಯವಿರುವ ತಿಥಿನಿರ್ಣಯಕ್ಕಾಗಿ ತಿಥಿನಿರ್ಣಯ ಗ್ರಂಥವನ್ನು, ಕೃಷ್ಣ ಜಯಂತೀ ವ್ರತಾಚರಣೆಗಾಗಿ ಜಯಂತೀನಿರ್ಣಯ ಕೃತಿಯನ್ನೂ ರಚಿಸಿದ್ದಾರೆ. ಯತಿಗಳ ಬದುಕಿನ ನಿಯಮಾವಳಿಗಳನ್ನು ನಿರೂಪಿಸಲು ಯತಿಪ್ರಣವ ಕಲ್ಪವನ್ನು ಅನುಗ್ರಹಿಸಿದ್ದಾರೆ. ಸದಾಚಾರ ಹಾಗೂ ಅನುಸಂಧಾನದ ಬದುಕಿಗೆ ಸ್ಫೂರ್ತಿ ನೀಡುವ ಸದಾಚಾರಸ್ಮೃತಿ ಹಾಗೂ ಕೃಷ್ಣಾಮೃತಮಹಾರ್ಣವ ಗ್ರಂಥಗಳು ಆಚಾರಪ್ರಸ್ಥಾನಕ್ಕೆ ಕೊಡಮಾಡಿದ ಅಪೂರ್ವ ಕೃತಿಗಳು. ದೇಗುಲದ ವಾಸ್ತು, ಅಷ್ಟಾಂಗಯೋಗ, ಮಂತ್ರಗಳ ಜಪ, ಪ್ರತಿಮಾನಿರ್ಮಾಣ ಮೊದಲಾದ ಅಪೂರ್ವ ವಿಷಯಗಳನ್ನೊಳಗೊಂಡ ತಂತ್ರಸಾರಸಂಗ್ರಹ ಕೃತಿ ಶ್ರೀಮಧ್ವರ ಅಪೂರ್ವವ್ಯಕ್ತಿತ್ವದಂತಿದೆ. ಅವರ ಕೃತಿಗಳಿಗೆ ಲೆಕ್ಕವಿಲ್ಲ. ಸ್ಥೂಲವಾಗಿ 37, 40 ಎಂದೆಲ್ಲ ಕರೆಯುವುದಿದೆ-

**'ನಾನಾಸುಭಾಷಿತಸ್ತೋತ್ರಗಾಥಾದಿಕೃತಿಸತ್ಕೃತೀಃ ।**
**ತ್ವಯಿ ರತ್ನಾಕರೇ ರತ್ನಶ್ರೇಣೀರ್ವಾ ಗಣಯಂತಿ ಕೇ ॥'** (ಮ.ವಿ. 15-84)

ಎಂಬ ನಾರಾಯಣಪಂಡಿತಾಚಾರ್ಯರ ಮಾತು ಅತೀವ ಅನ್ವರ್ಥಕ ವಾಗಿದೆ.

ಶ್ರೀಮಧ್ವರಿಗೆ ನೂರಾರು ಯತಿಗಳು ಹಾಗೂ ಗೃಹಸ್ಥ ಶಿಷ್ಯರಿದ್ದರು. ಇವರಲ್ಲಿ ಶ್ರೀಪದ್ಮನಾಭತೀರ್ಥರು, ಶ್ರೀವಿಷ್ಣುತೀರ್ಥರು, ಶ್ರೀನರಹರಿ ತೀರ್ಥರು, ಶ್ರೀಮಾಧವತೀರ್ಥರು, ಶ್ರೀಅಕ್ಷೋಭ್ಯತೀರ್ಥರು, ಶ್ರೀಅಧೋಕ್ಷಜತೀರ್ಥರು ಮೊದಲಾದ ಅನೇಕ ಯತಿಸಾರ್ವಭೌಮರು ಪ್ರಾತಃಸ್ಮರಣೀಯರಾಗಿದ್ದಾರೆ. ತ್ರಿವಿಕ್ರಮಪಂಡಿತಾಚಾರ್ಯರು, ಈರ್ವರು ಶಂಕರಪಂಡಿತಾಚಾರ್ಯರು ಶ್ರೀಮದಾಚಾರ್ಯರ ಗೃಹಸ್ಥಶಿಷ್ಯಕೋಟಿಯಲ್ಲಿ ಅಗ್ರಮಾನ್ಯರಾಗಿದ್ದರು. ಶ್ರೀಪದ್ಮನಾಭತೀರ್ಥರು ಹಾಗೂ ತ್ರಿವಿಕ್ರಮ ಪಂಡಿತಾಚಾರ್ಯರು ಶ್ರೀಮದಾಚಾರ್ಯರ ಬ್ರಹ್ಮಸೂತ್ರಭಾಷ್ಯ ಹಾಗೂ ಅನುವ್ಯಾಖ್ಯಾನಗಳ ಮೇಲೆ ಹೃದಯಂಗಮವಾದ ವ್ಯಾಖ್ಯೆಯನ್ನು ರಚಿಸಿದ್ದಾರೆ. ಪದ್ಮನಾಭತೀರ್ಥರು ಗೀತಾಭಾಷ್ಯ ಹಾಗೂ ದಶಪ್ರಕರಣಗಳಿಗೂ ಚುಟುಕಾದ ವ್ಯಾಖ್ಯಾನವನ್ನು ಕರುಣಿಸಿದ್ದಾರೆ. ಇವರ ಟೀಕೆಯನ್ನು ಪ್ರಾಚೀನಟೀಕೆ ಎಂದು ಗೌರವಿಸಲಾಗಿದೆ. ಆಚಾರ್ಯರ ಸಾಕ್ಷಾತ್ ಶಿಷ್ಯರಾದ ನರಹರಿತೀರ್ಥರು ರಚಿಸಿದ ಯಮಕಭಾರತ ಟೀಕೆಯು ಇಂದು ಉಪಲಬ್ಧವಿದೆ. ಹೀಗೆ ಅನೇಕ ಶಿಷ್ಯರು ಸಾರಸ್ವತಸೇವೆಯನ್ನು ಮಾಡಿರುವುದು ಗಮನಾರ್ಹವಾಗಿದೆ.

**ಶ್ರೀ ಜಯತೀರ್ಥರು (1365-1388)**

ಭಾರತದೇಶವು ಕಂಡ ಮೂವರು ಷಡ್‌ದರ್ಶನಾಚಾರ್ಯರಲ್ಲಿ ಒಬ್ಬರು ಶ್ರೀ ಜಯತೀರ್ಥರು. ವಾಚಸ್ಪತಿಮಿಶ್ರರು ಹಾಗೂ ಶ್ರೀ ವೇದಾಂತದೇಶಿಕರು ಆಯಾ ದರ್ಶನಗಳಲ್ಲಿ ಅದ್ವಿತೀಯವಾದ ಗ್ರಾಂಥಿಕ ಕೊಡುಗೆ ನೀಡಿದ ಇಬ್ಬರು ಮಹನೀಯರು. ಶ್ರೀಜಯತೀರ್ಥರು ರಚಿಸಿದ ಟೀಕೆಯ ಗಾಂಭೀರ್ಯ, ಆಳ ಹಾಗೂ ವೈಶಾಲ್ಯಗಳನ್ನು ವ್ಯಾಸತೀರ್ಥರು, ಶ್ರೀರಘೂತ್ತಮತೀರ್ಥರೇ ಮೊದಲಾದ ಮಹನೀಯರು ಹೃದಯಂಗಮ ವಾಗಿ ವಿವರಿಸಿದ್ದಾರೆ. ಅನುವ್ಯಾಖ್ಯಾನಗ್ರಂಥಕ್ಕೆ ಶ್ರೀಜಯತೀರ್ಥರು ರಚಿಸಿದ ಟೀಕೆಯು ನ್ಯಾಯಸುಧೆ ಎಂದು ವಿಖ್ಯಾತವಾಗಿದ್ದು ದರ್ಶನಪ್ರಪಂಚದಲ್ಲಿ ಅಪಾರ ಹೆಗ್ಗಳಿಕೆಯನ್ನು ಗಳಿಸಿದೆ. ಷಡ್‌ದರ್ಶನಗಳ ಹಾಗೂ ಅದ್ವೈತ-ವಿಶಿಷ್ಟಾದ್ವೈತ ದರ್ಶನಗಳ ತಳಸ್ಪರ್ಶಿಯಾದ ಪಾಂಡಿತ್ಯದೊಡನೆ ಆಯಾ ಸಿದ್ಧಾಂತಗಳ ಚಿಂತನೆಗಳನ್ನು ಹೃದಯಂಗಮವಾಗಿ ವಿವರಿಸಿ

ವಿಮರ್ಶೆಗೆ ಒಳಪಡಿಸುವ ಜಯತೀರ್ಥರ ಶೈಲಿ ದರ್ಶನಕ್ಷೇತ್ರದಲ್ಲಿ ಅದ್ವಿತೀಯವಾದುದು. ತನ್ನ ಗುರು ಶ್ರೀಮಧ್ವಾಚಾರ್ಯರ ಶ್ಲೋಕಗಳಿಗೆ ಹತ್ತು-ಇಪ್ಪತ್ತು-ಐವತ್ತು ಬಗೆಯ ಅರ್ಥಗಳನ್ನು ತೆರೆದು ತೋರುವುದು ಅವರ ಅಸಾಧಾರಣ ಪ್ರತಿಭೆಗೆ ಕೈಗನ್ನಡಿಯಂತಿದೆ. ದ್ವೈತದರ್ಶನದ ಎರಡು ಕಂಗಳಂತೆ ಕಂಗೊಳಿಸುವವರು ಶ್ರೀ ಜಯತೀರ್ಥರು ಹಾಗೂ ಶ್ರೀ ವ್ಯಾಸತೀರ್ಥರು. ಜಯತೀರ್ಥರ ಸಮಗ್ರ ವಾಙ್ಮಯವನ್ನು ಅಭ್ಯಾಸ ಮಾಡದೆ ದ್ವೈತದರ್ಶನದ ಪಾಂಡಿತ್ಯವನ್ನು ಪಡೆದುಕೊಳ್ಳುವುದು ಕಲ್ಪನಾತೀತವಾದ ಸಂಗತಿಯೇ. ಇವರು ಸೂತ್ರಪ್ರಸ್ಥಾನದ ಮೇಲಿನ ಅನುವ್ಯಾಖ್ಯಾನ, ಬ್ರಹ್ಮಸೂತ್ರಭಾಷ್ಯ ಹಾಗೂ ನ್ಯಾಯವಿವರಣಗಳಿಗೆ ಟೀಕೆಯನ್ನು ರಚಿಸಿರುವುದಲ್ಲದೇ, ಗೀತಾಭಾಷ್ಯ, ಗೀತಾತಾತ್ಪರ್ಯನಿರ್ಣಯಗಳಿಗೆ ಬಹುಸುಂದರವಾದ ವ್ಯಾಖ್ಯೆಯನ್ನು ನೀಡಿದ್ದಾರೆ. ಋಗ್ಭಾಷ್ಯಕ್ಕೆ ಹಾಗೂ ಯಾಜ್ಞೀಯೋಪನಿಷತ್ ಹಾಗೂ ಷಟ್‌ಪ್ರಶ್ನೋಪನಿಷತ್ತುಗಳಿಗೆ ಇವರ ಟೀಕೆಯು ಉಪಲಬ್ಧವಿದೆ. ಶ್ರೀಮಧ್ವರ ದಶಪ್ರಕರಣಗಳಿಗೆ ಇವರು ರಚಿಸಿದ ಟೀಕೆಯು ಅಭೂತಪೂರ್ವವಾಗಿದೆ. ಇವರ ಸ್ವತಂತ್ರಕೃತಿಗಳಾದ ಪ್ರಮಾಣಪದ್ಧತಿ ಹಾಗೂ ವಾದಾವಲಿಗಳು ದ್ವೈತವೇದಾಂತದ ಅಧ್ಯಯನಶೀಲರಿಗೆ ದರ್ಶನದ ವಿರಾಟ್‌ರೂಪವನ್ನು ಪರಿಚಯಿಸುವ ಮಹೋನ್ನತ ಕೃತಿಗಳು.

## ಶ್ರೀ ವ್ಯಾಸತೀರ್ಥರು (1478-1539)

ಶ್ರೀಕೃಷ್ಣದೇವರಾಯನ ಕುಹಯೋಗವನ್ನು ಪರಿಹರಿಸಿ ಕರ್ನಾಟಕ ವಿದ್ಯಾಸಿಂಹಾಸನಾಧೀಶ್ವರ ಎಂಬುದಾಗಿ ವಿಖ್ಯಾತರಾದ ಶ್ರೀ ವ್ಯಾಸರಾಜರು ದರ್ಶನಕ್ಷೇತ್ರದಲ್ಲಿ ಅವಿಸ್ಮರಣೀಯಮಹಿಮರು. ದ್ವೈತದಾರ್ಶನಿಕರ ಚಿಂತನೆಗಳನ್ನು ವ್ಯಾಕರಣ ಹಾಗೂ ಮೀಮಾಂಸಾಶಾಸ್ತ್ರಗಳ ಒರೆಗೆ ಹಚ್ಚಿ ಅವುಗಳಲ್ಲಿ ದೋಷಗಳನ್ನು ತೋರಿಸಿದಾಗ ಶ್ರೀವ್ಯಾಸತೀರ್ಥರು ಅವುಗಳ ನಿರ್ದುಷ್ಟತೆಯನ್ನು ಸಮರ್ಥಿಸಿದ 15ನೆಯ ಶತಕದ ವಿಭೂತಿಪುರುಷರು. ನ್ಯಾಯ-ವೈಶೇಷಿಕಶಾಸ್ತ್ರಗಳ ವಿಮರ್ಶೆಗಾಗಿ ಅವರು ರಚಿಸಿದ ತರ್ಕತಾಂಡವ, ತತ್ವಪ್ರಕಾಶಿಕೆಯ ವ್ಯಾಖ್ಯಾನದ ನೆಪದಿಂದ ವಿಸ್ತೃತವಾಗಿ ನೀಡಿದ ಸೂತ್ರಪ್ರಸ್ಥಾನದ ಮೇಲಿನ ವ್ಯಾಖ್ಯಾನಾಂತರಗಳನ್ನು ವಿಮರ್ಶಿಸುವ ತಾತ್ಪರ್ಯಚಂದ್ರಿಕೆ, ಅದ್ವೈತದ ಪ್ರಕ್ರಿಯೆಗಳನ್ನು ವಿಮರ್ಶಿಸುವ

ನ್ಯಾಯಾಮೃತ ಗ್ರಂಥ ಇತಿಹಾಸದಲ್ಲಿ ಎಲ್ಲ ವಿದ್ವಾಂಸರ ಮಾನ್ಯತೆ ಗಳಿಸಿದಂತಹವು. ಉಪಾಧಿಖಂಡನ, ಮಾಯಾವಾದಖಂಡನ ಮೊದಲಾದ ಪ್ರಕರಣಗ್ರಂಥಗಳಿಗೆ ಇವರು ರಚಿಸಿದ ಮಂದಾರಮಂಜರೀ, ನವ್ಯನ್ಯಾಯದ ಸೊಗಡನ್ನು ಒಳಗೊಂಡ ವೇದಾಂತದ ಶ್ರೇಷ್ಠ ಕೃತಿಗಳೆನಿಸಿದ್ದಾವೆ. ನೂರಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ ಶ್ರೀ ವಿಜಯೀಂದ್ರತೀರ್ಥರು ಇವರ ಶಿಷ್ಯಕೋಟಿಯಲ್ಲಿ ಅಗ್ರಮಾನ್ಯರು. ಸ್ವಯಂ ದರ್ಶನಕ್ಷೇತ್ರದಲ್ಲಿ ವಿಶಾರದರಾಗಿದ್ದರೂ ಜನಸಾಮಾನ್ಯರಿಗೆ ತತ್ವವನ್ನು ತಿಳಿಸುವ ಅವರ ಕಾರುಣ್ಯದ ಫಲವೇ ಹರಿದಾಸವಾಙ್ಮಯದ ವಿಸ್ತಾರ. ಅಂದು ಶ್ರೀ ವ್ಯಾಸತೀರ್ಥರು ಶ್ರೀನಿವಾಸನಾಯಕರಿಗೆ ಕನ್ನಡದಲ್ಲಿ ಪದಪದ್ಯಸುಳಾದಿಗಳನ್ನು ರಚಿಸುವ ದೀಕ್ಷೆಯನ್ನು ನೀಡದಿದ್ದಲ್ಲಿ ಇಂದು ವಿಜಯದಾಸರು, ಗೋಪಾಲದಾಸರು, ಜಗನ್ನಾಥದಾಸರೇ ಮೊದಲಾದ ನೂರಾರು ಹರಿದಾಸರನ್ನು ಕರ್ನಾಟಕದ ಪುಣ್ಯಭೂಮಿ ಕಳೆದುಕೊಳ್ಳುತ್ತಿತ್ತು. ಪುರಂದರದಾಸರ ವಾಙ್ಮಯವನ್ನು ಉಪನಿಷತ್ತು ಎಂಬುದಾಗಿ ಗೌರವಿಸಿದ ಶ್ರೀವ್ಯಾಸತೀರ್ಥರು ಶ್ರೀಮಧ್ವರ ಭಕ್ತಿಸಿದ್ಧಾಂತದ ಪ್ರಸಾರಕ್ಕಾಗಿ ವೇದಾಂತದ ಹಾಲೆರೆದು ವಾಙ್ಮಯವನ್ನು ಸಿರಿವಂತಗೊಳಿಸಿದರು. ಶ್ರೀವ್ಯಾಸರಾಜರು ಕನಕದಾಸರಿಗೆ ಮಾಡಿದ ಅನುಗ್ರಹವು ಅವಿಸ್ಮರಣೀಯವಾಗಿದೆ. ಸಂಸ್ಕೃತ ಹಾಗೂ ಕನ್ನಡ ಭಾಷೆಯ ಮೂಲಕ ದ್ವೈತವೇದಾಂತದ ತತ್ವಗಳನ್ನು ಪಂಡಿತರಿಂದ ಪಾಮರರ ತನಕ ಬಿತ್ತರಿಸುವಂತೆ ಮಾಡಿದ ಶ್ರೀವ್ಯಾಸತೀರ್ಥರ ವ್ಯಕ್ತಿತ್ವ ಅನುಕರಣೀಯವಾದುದು.

**ಶ್ರೀವಿಜಯೀಂದ್ರತೀರ್ಥರು (1539-1595)**

'ಚತುರಧಿಕಶತಗ್ರಂಥರತ್ನಪ್ರಣೇತಾ' ಎಂಬುದಾಗಿ 104 ಕೃತಿಗಳ ರಚಯಿತೃಗಳಾದ ಶ್ರೀ ವಿಜಯೀಂದ್ರತೀರ್ಥರು ಅಪ್ಪಯ್ಯದೀಕ್ಷಿತರ ಸಮಕಾಲೀನರು. ಶ್ರೀವ್ಯಾಸತೀರ್ಥರ ವದನಾರವಿಂದದಿಂದ ಆರುಬಾರಿಗೆ ಸರ್ವಮೂಲ ಕೃತಿಗಳಲ್ಲಿ ಹೊಸ ಹೊಸ ಅರ್ಥಗಳನ್ನು ಕೇಳಿದ ಹಿರಿಮೆ ಇವರದು. ಏಳು ಬಾರಿಗೆ ಶ್ರೀವ್ಯಾಸತೀರ್ಥರು ಶ್ರೀಮನ್ನ್ಯಾಯಸುಧೆಯ ಪಾಠವನ್ನು ಅಪೂರ್ವ ಕ್ರಮದಿಂದ ನೀಡಿದ್ದರೆಂಬುದು ಐತಿಹಾಸಿಕ ದಾಖಲೆ. ನ್ಯಾಯಾಮೃತಗ್ರಂಥಕ್ಕೆ ಇವರು ರಚಿಸಿದ ಆಮೋದ ಹಾಗೂ ಕೆಲವು ಪ್ರಕರಣಗ್ರಂಥಗಳಿಗೆ ರಚಿಸಿದ ಟೀಕೆಗಳು ವಿದ್ವಾಂಸರ ಹೃದಯದಲ್ಲಿ

ವಿರಾಜಮಾನವಾಗಿವೆ. ಭಗವಂತನ ವಿಭೂತಿರೂಪಗಳಂತೆ ವಿಶಿಷ್ಟ ಬೆಳಕು ನೀಡುವ ಇವರ ಸ್ವತಂತ್ರಕೃತಿಗಳು ವಿದ್ವಾಂಸರ ಆದರಪಾತ್ರವಾಗಿವೆ. ಅಧಿಕರಣಮಾಲಾ, ಚಂದ್ರಿಕೋದಾಹೃತ ನ್ಯಾಯವಿವರಣ, ಮಧ್ವಾಧ್ವ ಕಂಟಕೋದ್ಧಾರ, ಚಕ್ರಮೀಮಾಂಸಾ, ಭೇದವಿದ್ಯಾವಿಲಾಸ, ಪರತತ್ತ್ವ ಪ್ರಕಾಶಿಕಾ, ಸಿದ್ಧಾಂತಸಾರಾಸಾರವಿವೇಕ, ನ್ಯಾಯಾಧ್ವದೀಪಿಕಾ, ಉಪಸಂಹಾರ ವಿಜಯ, ವಾಗ್ವೈಖರೀ, ಪಿಷ್ಟಪಶುಮೀಮಾಂಸಾ, ಕುಚೋದ್ಯಕುಠಾರ, ಶ್ರುತ್ಯರ್ಥಸಾರ ಮೊದಲಾದ ಗ್ರಂಥಗಳು ವಿದ್ವಾಂಸರ ಬುದ್ಧಿಗೆ ಸಾಣೆ ಹಿಡಿಯುತ್ತವೆ. ಸುಭದ್ರಾಧನಂಜಯ, ಉಭಯಗ್ರಸ್ತರಾಹೂದಯ ಮೊದಲಾದ ಇವರ ಕಾವ್ಯನಾಟಕಗಳು ಕೂಡಾ ಪರಮಾನಂದ ವನ್ನು ಓದುಗರಿಗೆ ನೀಡುತ್ತವೆ. ಅರವತ್ನಾಲ್ಕು ಕಲೆಗಳಲ್ಲಿ ಇವರು ವಿಖ್ಯಾತರಾಗಿದ್ದ ರೆಂದು ಇತಿಹಾಸದ ಪುಟಗಳು ದಾಖಲಿಸುತ್ತವೆ. ಶ್ರೀವೈಷ್ಣವ ಸಂಪ್ರದಾಯದ ತಾತಾಚಾರ್ಯರು ಹಾಗೂ ಅದ್ವೈತಸಂಪ್ರದಾಯದ ಅಪ್ಪಯ್ಯದೀಕ್ಷಿತರು ಇವರ ಸಮಕಾಲೀನರು ಹಾಗೂ ಆತ್ಮೀಯರೂ ಕೂಡ. ತತ್ವಗಳಲ್ಲಿ ಭಿನ್ನತೆ ಯಿದ್ದರೂ, ವಿದ್ವತ್ಪ್ರಿಯತೆಯಿಂದ ಈ ಮೂವರಲ್ಲಿ ಗಾಢವಾದ ಅನುಬಂಧ ವಿತ್ತು. ಇವರ ನಿರ್ವ್ಯಾಜ ಸ್ನೇಹಬಂಧವನ್ನು ದಾಖಲಿಸುವ ಪ್ರಾಚೀನಕೃತಿಗಳು ಇಂದಿಗೂ ದರ್ಶನಕ್ಷೇತ್ರದಲ್ಲಿ ವಿದ್ವಾಂಸರು ಹೇಗೆ ಜೀವಿಸಬೇಕೆಂಬ ಬಗ್ಗೆ ಆದರ್ಶ ದಾಖಲೆಗಳಾಗಿದ್ದಾವೆ.

## ಶ್ರೀ ವಾದಿರಾಜತೀರ್ಥರು (1480-1600)

120 ವರ್ಷಗಳ ಕಾಲ ಭಗವಂತನ ಆರಾಧನೆಯಲ್ಲಿ ತೊಡಗಿದ 5 ಬಾರಿಗೆ ಶ್ರೀಕೃಷ್ಣಪೂಜೆಯನ್ನು ನೆರವೇರಿಸಿದ ಮಹಿಮಾಶಾಲಿಗಳು ಶ್ರೀವಾದಿರಾಜ ತೀರ್ಥರು. ತತ್ವಪ್ರಕಾಶಿಕಾ ಹಾಗೂ ನ್ಯಾಯಸುಧಾಗ್ರಂಥಗಳಿಗೆ ಇವರು ರಚಿಸಿದ ಟಿಪ್ಪಣಿಗಳು ವಿದ್ವಾಂಸರ ಚೇತೋಹಾರಿಯಾಗಿವೆ. ಸುಮಾರು ಐದು ಸಾವಿರ ಶ್ಲೋಕಗಳನ್ನೊಳಗೊಂಡ ಸ್ವತಂತ್ರಕೃತಿಯಾದ ಯುಕ್ತಿಮಲ್ಲಿಕಾ ದ್ವೈತವಾಙ್ಮಯದಲ್ಲಿ ವಿದ್ವನ್ಮಾನ್ಯವಾಗಿದೆ. ಶ್ರೀವಾದಿರಾಜರು ಈ ಕೃತಿಯಲ್ಲಿ ಎಲ್ಲ ದರ್ಶನಗಳ ಗಂಭೀರ ವಿಮರ್ಶೆಯನ್ನು ಮಾಡುವುದರ ಜೊತೆಗೆ ತತ್ವವಾದದ ನಿರ್ದುಷ್ಟತೆಯನ್ನು ಸರಳ ಸುಂದರ ಶ್ಲೋಕಗಳಲ್ಲಿ ನಿರೂಪಿಸಿ ದ್ದಾರೆ. ಅವರ ಶ್ರುತಿತತ್ವಪ್ರಕಾಶಿಕಾ, ಹರಿಭಕ್ತಿಲತಾ, ಮಹಾಭಾರತ ಲಕ್ಷಾಲಂಕಾರ, ಸರಸಭಾರತೀವಿಲಾಸ ಮೊದಲಾದ ಕೃತಿಗಳು ಸದಾ ವಿದ್ವಾಂಸ

ರಿಂದ ಪಾಠಪ್ರವಚನದಲ್ಲಿ ಅಳವಡಿಸಿಕೊಳ್ಳಲ್ಪಟ್ಟಿವೆ. ರುಗ್ಮಿಣೀಶವಿಜಯ ಹಾಗೂ ತೀರ್ಥಪ್ರಬಂಧಗಳು ಶ್ರೀಕೃಷ್ಣಕಥೆ ಹಾಗೂ ತೀರ್ಥಯಾತ್ರೆಯ ಅನುಸಂಧಾನವನ್ನು ತಿಳಿಸುವ ಅಮೂಲ್ಯ ಕೃತಿಗಳಾಗಿದ್ದಾವೆ. ವೇದಾಂತದಲ್ಲಿ ಅದ್ವಿತೀಯಗ್ರಂಥಗಳನ್ನು ರಚಿಸುವುದರ ಜೊತೆಗೆ ಶ್ರೀವಾದಿರಾಜತೀರ್ಥರು ಕನ್ನಡದಲ್ಲಿಯೂ ಕೂಡ ಅನೇಕ ಪದ-ಪದ್ಯ-ಸುಳಾದಿಗಳನ್ನು ರಚಿಸಿ ಕನ್ನಡಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ. ದಕ್ಷಿಣಕನ್ನಡದಲ್ಲಿ ಹಿಂದುಳಿದ ವರ್ಗದ ಸಜ್ಜನರ ಉದ್ಧಾರಕ್ಕಾಗಿ ಅವರ ಆಡುಭಾಷೆಯಾದ ತುಳುವಿನಲ್ಲಿ ದಶಾವತಾರಚರಿತ್ರೆಗಳನ್ನು ರಚಿಸಿಕೊಟ್ಟು ಅವರ ಉದ್ಧಾರಕ್ಕೆ ದಾರಿ ತೋರಿದ ಮಹಾತ್ಮರು ಶ್ರೀವಾದಿರಾಜರು.

### ಶ್ರೀರಘೂತ್ತಮತೀರ್ಥರು (1556-1596)

ಮಾಧ್ವವಾಙ್ಮಯಪ್ರಪಂಚದಲ್ಲಿ ನೂರಾರು ಟಿಪ್ಪಣೀಗ್ರಂಥಗಳ ಗಂಗಾನದಿ ಪ್ರವಹಿಸಲು ಹಿಮಾಲಯದಂತಿರುವ ಮಹಾತ್ಮರು ಶ್ರೀರಘೂತ್ತಮ ತೀರ್ಥರು. ಇವರ ಶಿಷ್ಯರು ಶ್ರೀವೇದವ್ಯಾಸತೀರ್ಥರು ಹಾಗೂ ಶ್ರೀವೇದೇಶ ತೀರ್ಥರು. ನ್ಯಾಯಾಮೃತಗ್ರಂಥದ ಮೇಲೆ ರಚಿತವಾದ ಕಂಟಕೋದ್ಧಾರ, ತರಂಗಿಣೀ ಮೊದಲಾದ ಕೃತಿಗಳ ಲೇಖಕರಾದ ಆನಂದಭಟ್ಟಾರಕರು ಹಾಗೂ ರಾಮಾಚಾರ್ಯರು ಶ್ರೀರಘೂತ್ತಮಸ್ವಾಮಿಗಳವರ ವಿದ್ಯಾಶಿಷ್ಯರು. ವೇದೇಶತೀರ್ಥರ ಶಿಷ್ಯರಾದ ಶ್ರೀಯಾದವಾರ್ಯರಿಗೆ ಎಂಟು ಜನ ಪ್ರಸಿದ್ಧ ಟಿಪ್ಪಣೀಕಾರರಾದ ಶಿಷ್ಯರಿದ್ದರು. ಒಟ್ಟಾರೆ ಶ್ರೀರಘೂತ್ತಮತೀರ್ಥರ ಶಿಷ್ಯ-ಪ್ರಶಿಷ್ಯ ಪರಂಪರೆ ಮಾಧ್ವವಾಙ್ಮಯದಲ್ಲಿ ಅವಿಸ್ಮರಣೀಯ ವ್ಯಾಖ್ಯಾಗ್ರಂಥಗಳನ್ನು ನೀಡಿದೆ. ಶ್ರೀರಘೂತ್ತಮತೀರ್ಥರು ತತ್ವನಿರ್ಣಯ, ತತ್ವಪ್ರಕಾಶಿಕಾ, ನ್ಯಾಯವಿವರಣ, ಬೃಹದಾರಣ್ಯಕಭಾಷ್ಯ, ಗೀತಾಭಾಷ್ಯಪ್ರಮೇಯದೀಪಿಕಾ ಗ್ರಂಥಗಳಿಗೆ ಭಾವಬೋಧವೆಂಬುದಾಗಿ ವ್ಯಾಖ್ಯಾನವನ್ನು ರಚಿಸಿದ್ದಾರೆ.

### ಶ್ರೀವಿದ್ಯಾಧೀಶತೀರ್ಥರು (1619-1631)

ಶ್ರೀಮನ್ನ್ಯಾಯಸುಧೆಗೆ ವಾಕ್ಯಾರ್ಥಚಂದ್ರಿಕಾ ಎಂಬ ಅಪೂರ್ವ ಟಿಪ್ಪಣಿಯನ್ನು ರಚಿಸಿದ ವಿದ್ಯಾಧೀಶತೀರ್ಥರು ಶ್ರೇಷ್ಠ ಗ್ರಂಥಕಾರರು. ಪ್ರಮಾಣಲಕ್ಷಣ ಟೀಕಾ-ಟಿಪ್ಪಣಿ, ವಿಷ್ಣುತತ್ವನಿರ್ಣಯ ಟಿಪ್ಪಣಿ, ತಲವಕಾರ ಭಾಷ್ಯ ಟಿಪ್ಪಣಿ, ದ್ವಿತ್ವವಾದಾರ್ಥ, ವಿಷ್ಣುಪಂಚಕವ್ರತ ನಿರ್ಣಯ,

ಜನ್ಮಾಷ್ಟಮೀನಿರ್ಣಯ, ಓಂಕಾರವಾದಾರ್ಥ ಮೊದಲಾದವು ಇವರ ಇತರ ಕೃತಿಗಳು.

## ಶ್ರೀರಾಘವೇಂದ್ರತೀರ್ಥರು (1623-1771)

ಕಲಿಯುಗದ ಕಲ್ಪವೃಕ್ಷ ಕಾಮಧೇನುವೆಂದು ವಿಖ್ಯಾತರಾದ ಶ್ರೀರಾಘವೇಂದ್ರ ಗುರುಸಾರ್ವಭೌಮರು ಗುರುಗಳಾದ ಶ್ರೀಸುಧೀಂದ್ರ ತೀರ್ಥರಂತೆ ವಾಕ್ಯಾರ್ಥಕೋವಿದರೂ, ಪರಮಗುರುಗಳಾದ ಶ್ರೀವಿಜಯೀಂದ್ರತೀರ್ಥರಂತೆ ಅನೇಕ ಗ್ರಂಥರತ್ನಗಳ ಅನುಗ್ರಾಹಕರೂ, ಪರಮೇಷ್ಠಿಗುರುಗಳಾದ ಶ್ರೀ ಸುರೇಂದ್ರತೀರ್ಥರಂತೆ ವಿಶ್ವಪಾವನರೂ ಆಗಿದ್ದರು. ಇಂದಿಗೂ ದೇಶಾದ್ಯಂತದಲ್ಲಿ ಇರುವ ಅವರ ಸಾವಿರಾರು ಮೃತ್ತಿಕಾಬೃಂದಾವನಗಳು ವೈದಿಕಧರ್ಮಾನುಷ್ಠಾನದ ಕೇಂದ್ರವಾಗಿ ತತ್ವಜ್ಞಾನದ ಪ್ರಸಾರದ ಆಧಾರಸ್ತಂಭವಾಗಿ ಬೆಳಗುತ್ತಿವೆ. ಸಾರಸ್ವತಪ್ರಪಂಚಕ್ಕೆ ಶ್ರೀರಾಘವೇಂದ್ರಸ್ವಾಮಿಗಳವರು ನೀಡಿದ ಕಾಣಿಕೆ ಅಗಾಧವಾದುದು. ಮೂಲಗುರು ಶ್ರೀಮಧ್ವಾಚಾರ್ಯರಂತೆ ಇವರು ವೇದ, ಉಪನಿಷತ್ತು, ಬ್ರಹ್ಮಸೂತ್ರಗಳು, ದಶಪ್ರಕರಣಗಳು, ಇತಿಹಾಸ-ಪುರಾಣಪ್ರಸ್ಥಾನ ಮತ್ತು ಆಚಾರಪ್ರಸ್ಥಾನಕ್ಕೆ ಸಂಬಂಧಿಸಿದಂತೆ ಕೃತಿ ರಚಿಸಿದ ಮಹಿತಾತ್ಮರು. ಶ್ರೀಮದಾಚಾರ್ಯರ ವಾಕ್ಯಗಳ ವಿಶ್ವತೋಮುಖತೆಯನ್ನು ತಮ್ಮ ತತ್ವಮಂಜರೀ ಮೊದಲಾದ ಗ್ರಂಥಗಳ ಮೂಲಕ ಪರಿಚಯಿಸಿದವರು. 50ಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ ಶ್ರೀರಾಘವೇಂದ್ರತೀರ್ಥರ ಗ್ರಾಂಥಿಕ ಕೊಡುಗೆ ಹಾಗೂ ಭಕ್ತವಾತ್ಸಲ್ಯಗಳು ಸಜ್ಜನರ ಮನೆಮಾತಾಗಿವೆ. ಸಮಗ್ರ ಭಾರತದೇಶದ ಸುಜನಬಂಧುಗಳ ಬೆಸುಗೆಯ ಕೇಂದ್ರವಾಗಿವೆ- ಶ್ರೀ ರಾಘವೇಂದ್ರಮಠಗಳು.

ಶ್ರೀರಾಯರ ಪರಿಮಳಗ್ರಂಥವು ನ್ಯಾಯಸುಧೆಗೆ ರಚಿತವಾದ ವಿದ್ವನ್ಮಾನ್ಯಕೃತಿಯಾಗಿದೆ. ಎಲ್ಲ ವಿದ್ವಾಂಸರಿಂದ ಗೌರವಾದರದಿಂದ ಪಾಠಪ್ರವಚನದಲ್ಲಿ ಸ್ವೀಕೃತವಾಗಿದೆ. ಪರಿಮಳದ ಸಹಾಯವಿಲ್ಲದೆ ನ್ಯಾಯಸುಧೆಯ ಪಾಠವು ದುಃಸಾಧ್ಯವೆನಿಸಿದೆ. ತಮ್ಮ ಟಿಪ್ಪಣಿಯಲ್ಲಿ ಶ್ರೀರಾಯರು ಎಲ್ಲ ಸಿದ್ಧಾಂತಗಳ ಸೂಕ್ಷ್ಮ ಪ್ರಮೇಯಗಳನ್ನು ವಿವರಿಸಿ ಅನುಗ್ರಹಿಸಿರುವುದು ಅವರ ಉತ್ಕೃಷ್ಟ ಪಾಂಡಿತ್ಯ ಹಾಗೂ ಶಿಷ್ಯವಾತ್ಸಲ್ಯದ ಸಾಕ್ಷಿಯಾಗಿದೆ.

**ಶ್ರೀ ಕಂಬಾಲೂರು ರಾಮಚಂದ್ರತೀರ್ಥರು (1627-1635)**

ಶ್ರೀ ವ್ಯಾಸರಾಜ ಮಠದ ಪರಂಪರೆಯಲ್ಲಿ ಪ್ರಸಿದ್ಧರಾದ ಯತಿಗಳು ಕಂಬಾಲೂರು ರಾಮಚಂದ್ರತೀರ್ಥರು. ಇವರ ನ್ಯಾಯಸುಧಾಟಿಪ್ಪಣಿ ವಿದ್ವಾಂಸರಿಗೆ ಪರಮಾನಂದವನ್ನು ನೀಡುತ್ತದೆ. ಇಮ್ಮಡಿ ಕೆಂಪೇಗೌಡನೇ ಮೊದಲಾದ ಆ ಕಾಲದ ಸಾಮಂತರಿಂದ ವಿಶಿಷ್ಟ ಗೌರವವನ್ನು ಪಡೆದ ಶ್ರೀ ರಾಮಚಂದ್ರತೀರ್ಥರು ವಿಜಯನಗರ ಸಾಮ್ರಾಜ್ಯದ ನಿಕಟ ಸಂಪರ್ಕ ಹೊಂದಿದ್ದರು. ಶ್ರೀಮಟ್ಟೀಕಾಕೃತ್ಪಾದರ ಋಗ್ಭಾಷ್ಯಟೀಕಾ ಇವರ ಇನ್ನೊಂದು ಪ್ರಸಿದ್ಧ ಕೃತಿ. ಐತರೇಯ ಹಾಗೂ ತತ್ವವಿವೇಕಗಳಿಗೆ ಟೀಕೆಯನ್ನು ಬರೆದಿದ್ದಾರೆಂಬ ಪ್ರತೀತಿ ಇದೆ.

**ಶ್ರೀ ರಘುನಾಥತೀರ್ಥರು (1700-1755)**

'ದಶಮೋ ಮತ್ಸಮೋ ಭವೇತ್' ಎಂಬುದಾಗಿ ಶ್ರೀವ್ಯಾಸರಾಜ ಮಠದಲ್ಲಿ ಪರಂಪರೆ ಉಲ್ಲೇಖಿಸುವಂತೆ ಶ್ರೀವ್ಯಾಸತೀರ್ಥರಂತಹ ಪಾಂಡಿತ್ಯವನ್ನು ಪಡೆದವರು ಶ್ರೀ ರಘುನಾಥತೀರ್ಥರು. ಪ್ರಾಚೀನ ಟೀಕಾ ಹಾಗೂ ಅರ್ವಾಚೀನ ಟೀಕೆ, ಸರ್ವಮೂಲಗ್ರಂಥಗಳಲ್ಲಿ ಏಕವಾಕ್ಯತೆಯನ್ನು ತೋರುವುದರ ಜೊತೆಗೆ ಪರಕೀಯ ವ್ಯಾಖ್ಯಾನಗಳ ಅಕೌಶಲವನ್ನು ಪ್ರದರ್ಶಿಸುವ ವ್ಯಾಸರಾಜರ ಶೈಲಿಯಲ್ಲಿಯೇ ರಚಿಸಿದ ಇವರ ತತ್ವಪ್ರಕಾಶಿಕೆಯ ಮೂರು ಹಾಗೂ ನಾಲ್ಕನೆಯ ಅಧ್ಯಾಯದ ವ್ಯಾಖ್ಯಾನವೇ ಶೇಷತಾತ್ಪರ್ಯಚಂದ್ರಿಕೆ ಎನಿಸಿದೆ. ತಂತ್ರಸಾರಸಂಗ್ರಹದ ಮೇಲೆ ಇವರು ರಚಿಸಿದ ಬಹುಸುಂದರವಾದ ವ್ಯಾಖ್ಯಾನ ತತ್ವಕಣಿಕಾ. ತಂತ್ರಶಾಸ್ತ್ರ ಹಾಗೂ ಯೋಗಶಾಸ್ತ್ರಗಳಲ್ಲಿ ಅವರಿಗಿದ್ದ ನೈಪುಣ್ಯವನ್ನು ಕಾಣಬಹುದಾದ ಅದ್ವಿತೀಯ ಕೃತಿ ಇದಾಗಿದೆ. ಪ್ರಾಯಃ ತಂತ್ರಸಾರಸಂಗ್ರಹಕ್ಕೆ ಉಪಲಬ್ಧವಾದ ಯಾವ ವ್ಯಾಖ್ಯಾನಗಳಲ್ಲಿಯೂ ದೊರಕದ ಅಪೂರ್ವ ಪ್ರಮೇಯಗಳನ್ನು ಇವರ ವ್ಯಾಖ್ಯಾನದಲ್ಲಿ ಕಾಣಬಹುದಾಗಿದೆ. ಇದರಂತೆ, ಬೃಹತೀಸಹಸ್ರ ಹಾಗೂ ಈಶಾವಾಸ್ಯೋಪನಿಷದ್ ಭಾಷ್ಯ ವ್ಯಾಖ್ಯಾನಗಳೂ ವಿದ್ವಾಂಸರ ಪಾಠ-ಪ್ರವಚನದಲ್ಲಿ ಜಾಗೃತವಾಗಿವೆ. ವ್ಯಾಸತೀರ್ಥರಂತೆ ವಿಶಿಷ್ಟ ವ್ಯಕ್ತಿತ್ವವನ್ನು ಪಡೆದ ಶ್ರೀ ರಘುನಾಥತೀರ್ಥರು ಈ ಪರಂಪರೆಯನ್ನು ಬೆಳಗಿದ ವಿಭೂತಿಪುರುಷರು.

## ಶ್ರೀಸುಮತೀಂದ್ರತೀರ್ಥರು (1692-1725)

ಶ್ರೀರಾಘವೇಂದ್ರ ಮಠದ ಪರಂಪರೆಯಲ್ಲಿ ಅದ್ವಿತೀಯ ಮೇಧಾವಿಗಳಾದ ಶ್ರೀಸುಮತೀಂದ್ರತೀರ್ಥರು ರಾಯರಿಂದ ಮೂರನೆಯವರು. ಸಾಹಿತ್ಯ, ವ್ಯಾಕರಣ, ತರ್ಕ, ತಂತ್ರಗ್ರಂಥಗಳು, ಯೋಗಶಾಸ್ತ್ರ, ವೇದಾಂಗಗಳು, ವೇದಾಂತ ಈ ಎಲ್ಲ ವಿಷಯಗಳಲ್ಲಿಯೂ ಅಪೂರ್ವವಾದ ಪಾಂಡಿತ್ಯವನ್ನು ಪಡೆದವರು ಶ್ರೀ ಸುಮತೀಂದ್ರತೀರ್ಥರು. ಇವರ ಗೀತಾಭಾಷ್ಯಪ್ರಮೇಯದೀಪಿಕೆಯ ಮೇಲೆ ರಚಿಸಿದ ಭಾವರತ್ನಕೋಶ ಗ್ರಂಥವು ಎಲ್ಲ ವಿದ್ವಾಂಸರಿಂದ ಆರಾಧ್ಯವಾಗಿದೆ. ಸರ್ವಮೂಲಗ್ರಂಥಗಳು ಹಾಗೂ ಟೀಕಾಕಾರರ ಅನೇಕ ಗ್ರಂಥಗಳನ್ನು ಆಧರಿಸಿ ತಮ್ಮ ಅಪೂರ್ವ ಪ್ರತಿಭೆಯಿಂದ ಶ್ರೀ ಶ್ರೀಪಾದರು ಗೀತಾಭಾಷ್ಯ ಪ್ರಮೇಯದೀಪಿಕೆ ಎಂಬ ವಿಶಿಷ್ಟ ವ್ಯಾಖ್ಯಾನವನ್ನು ನೀಡಿದ್ದಾರೆ. ಶ್ರೀರಾಘವೇಂದ್ರ ಗುರುಸಾರ್ವಭೌಮರ ಕೃತಿಗಳ ಆಂತರ್ಯವನ್ನು ಅಭಿವ್ಯಕ್ತಿಗೊಳಿಸುವಲ್ಲಿ ಇವರ ಪ್ರತಿಭೆ ಅಸಾಧಾರಣವಾದುದು. ಶ್ರೀ ಗುರುಸಾರ್ವಭೌಮರು ಇವರ ಜ್ಞಾನದ ಹಸಿವು ಹರವುಗಳನ್ನು ಕಂಡೇ ಅನೇಕ ಕೃತಿಗಳನ್ನು ರಚಿಸಿದರೆಂದು ವಿದ್ವಾಂಸರ ದೃಢ ನಂಬಿಕೆ. ಇವರ ಬ್ರಹ್ಮಸೂತ್ರಭಾಷ್ಯ ತತ್ವಪ್ರಕಾಶಿಕೆಯ ಭಾವರತ್ನಕೋಶವು ಅಮುದ್ರಿತವಾಗಿದ್ದು ಅಪೂರ್ವ ಪರಿಷ್ಕಾರಗಳನ್ನು ಒಳಗೊಂಡಿದೆ. ರಾಮತಾರಾವಲೀ- ರಾಮದಂಡಕ- ಯೋಗೀಂದ್ರತಾರಾವಲೀ ಮೊದಲಾದ ಇವರ ಕೃತಿಗಳಲ್ಲಿ ಕವಿಪ್ರತಿಭೆ ಅಚ್ಚರಿಗೊಳಿಸುತ್ತದೆ. ಉಷಾಹರಣಕ್ಕೆ ಇವರು ರಚಿಸಿದ ವ್ಯಾಖ್ಯಾನವು ವಿದ್ವಾಂಸರಿಗೆ ರಸದೌತಣವೀಯುತ್ತದೆ. ಶ್ರೀವಾದೀಂದ್ರತೀರ್ಥರು, ಶ್ರೀಧೀರೇಂದ್ರತೀರ್ಥರೇ ಮೊದಲಾದವರು ಈ ಪರಂಪರೆಯನ್ನು ಬೆಳಗಿದ, ನಂತರದ ಮಹಾತಪಸ್ವಿಗಳು, ಗ್ರಂಥಕಾರರೂ ಆಗಿದ್ದು ಅವಿಸ್ಮರಣೀಯರಾಗಿದ್ದಾರೆ.

## ಶ್ರೀ ಜಗನ್ನಾಥತೀರ್ಥರು (1755-1770)

ಶೇಷಚಂದ್ರಿಕಾಚಾರ್ಯರ ಶಿಷ್ಯರಾದ ಶ್ರೀ ಜಗನ್ನಾಥತೀರ್ಥರು ಬ್ರಹ್ಮಸೂತ್ರಭಾಷ್ಯದ ಸರಳ ಸುಂದರ ವ್ಯಾಖ್ಯಾನವನ್ನು ಮಾಡಿದ ಮಹಾಮನೀಷಿಗಳು. ಬ್ರಹ್ಮಸೂತ್ರಭಾಷ್ಯದಲ್ಲಿ ಉದಾಹರಿಸಿದ ಶ್ರುತಿಗಳ ಹಾಗೂ ಪ್ರಮಾಣವಚನಗಳ ಹಿನ್ನೆಲೆಯನ್ನು ವಿವರಿಸಿ ಸಂಪೂರ್ಣವಾಗಿ ವ್ಯಾಖ್ಯಾನ ಮಾಡುವ ಏಕೈಕ ಕೃತಿ ಭಾಷ್ಯದೀಪಿಕೆಯಾಗಿದೆ. ಇದಲ್ಲದೆ,

ಸಂದರ್ಭೋಚಿತವಾಗಿ ತತ್ತ್ವಪ್ರದೀಪ, ಸತ್ತರ್ಕದೀಪಾವಲೀ ಮೊದಲಾದ ಅನೇಕ ಪ್ರಾಚೀನ ಟೀಕೆಗಳನ್ನು ಹಾಗೂ ಶ್ರೀವಾದಿರಾಜರು, ಶ್ರೀ ರಘೂತ್ತಮತೀರ್ಥರೇ ಮೊದಲಾದ ಯತಿಗಳ ವಿಷಯಗಳನ್ನು ಉಲ್ಲೇಖಿಸಿ ವಿಮರ್ಶಿಸುವ ಇವರ ಕೃತಿ ವಿದ್ವಾಂಸರಿಗೆ ಮುದ ನೀಡುತ್ತದೆ.

**ಶ್ರೀ ಸತ್ಯಧರ್ಮತೀರ್ಥರು (1798-1830)**

ಶ್ರೀಮದುತ್ತರಾದಿ ಮಠದ ಪರಂಪರೆಯಲ್ಲಿ ಬಂದ ಶ್ರೀ ಸತ್ಯಧರ್ಮತೀರ್ಥರು ರಾಮಾಯಣ, ಸುಂದರಕಾಂಡ, ಮತ್ತು ಮಹಾಭಾರತದ ಕೆಲವು ಪರ್ವಗಳಿಗೆ ತಮ್ಮದೇ ಆದ ವಿಶಿಷ್ಟ ವ್ಯಾಖ್ಯಾನವನ್ನು ನೀಡಿದವರು. ಭಾಗವತತಾತ್ಪರ್ಯನಿರ್ಣಯದ ಆರು, ಏಳು, ಎಂಟು, ಒಂಭತ್ತು, ಹತ್ತು ಹಾಗೂ ಹನ್ನೆರಡನೆಯ ಸ್ಕಂದಗಳಿಗೆ ಅವರು ನೀಡಿರುವ ವ್ಯಾಖ್ಯಾನವು ಭಾಗವತ ಹಾಗೂ ತಾತ್ಪರ್ಯವನ್ನು ಅರ್ಥ ಮಾಡಿಕೊಳ್ಳುವ ವಿದ್ವಾಂಸರಿಗೆ ಮಹೋಪಕಾರಿಯಾಗಿದೆ. ಶ್ರೀ ಶ್ರೀಪಾದರ ವ್ಯಾಕರಣವೈದುಷ್ಯವು ಅಸಾಧಾರಣವಾದುದು. ಶಬ್ದಗಳನ್ನು ಒಡೆದು ಹೊಸ ಹೊಸ ಅರ್ಥಗಳನ್ನು ಹೇಳುವಲ್ಲಿ ಅವರು ಅತ್ಯಂತ ಚತುರರು. ಶ್ರೀಸತ್ಯಧರ್ಮತೀರ್ಥರ ನಮಕಚಮಕವ್ಯಾಖ್ಯಾನ, ಗಂಗಾಲಹರೀ ಮೊದಲಾದ ಕೃತಿಗಳು ಅತ್ಯಂತ ಪ್ರಸಿದ್ಧವಾಗಿವೆ. ಶ್ರೀ ಶ್ರೀಪಾದರ ಭಾಗಶಃ ಉಪಲಬ್ಧವಾದ ಮಹಾಭಾರತತಾತ್ಪರ್ಯನಿರ್ಣಯ ವ್ಯಾಖ್ಯೆ ಹಾಗೂ ಶ್ರೀಸುಧಾವ್ಯಾಖ್ಯಾನಗಳು ವಿದ್ವಾಂಸರಿಗೆ ಆನಂದದಾಯಕವಾಗಿವೆ.

**ಶ್ರೀ ಚೈತನ್ಯರು (16ನೇ ಶತಕ)**

ಶ್ರೀಮಧ್ವಾಚಾರ್ಯರ ಪರಂಪರೆಯನ್ನು ಬೆಳಗಿದ ಶ್ರೀವ್ಯಾಸತೀರ್ಥರ ಪರಂಪರೆಯಲ್ಲಿ ಲಕ್ಷ್ಮೀಪತಿತೀರ್ಥರು, ಮಾಧವೇಂದ್ರಪುರಿಗಳು, ಈಶ್ವರಪುರಿಗಳ ನಂತರದಲ್ಲಿ ಚೈತನ್ಯರು ಪೀಠವನ್ನು ಅಲಂಕರಿಸಿದ್ದಾರೆ. ಚೈತನ್ಯರು ಶ್ರೀಮಧ್ವರ ಪರಂಪರೆಯಲ್ಲಿ ಸೇರಿದವರೆಂದು ಕವಿಕರ್ಣಪೂರನ ಚೈತನ್ಯಚಂದ್ರೋದಯ ಗ್ರಂಥವು ಸ್ಫುಟಪಡಿಸುತ್ತದೆ. ಚೈತನ್ಯರ ನಂತರದ ರಾಧಾದಾಮೋದರ ಹಾಗೂ ಬಲದೇವ ವಿದ್ಯಾಭೂಷಣರ ಗ್ರಂಥಗಳು ರೂಪಗೋಸ್ವಾಮಿ ಹಾಗೂ ಜೀವಗೋಸ್ವಾಮಿ ಮೊದಲಾದವರ ಕೃತಿಗಳು ಮಾಧ್ವವೇದಾಂತದ ಕೃತಿಗಳನ್ನು ಉಲ್ಲೇಖಿಸುವುದರ ಜೊತೆಗೆ ಅಲ್ಲಿಯ

ವಾಕ್ಯಗಳನ್ನು ವ್ಯಾಖ್ಯಾನಿಸಿ ತಮ್ಮ ಸಿದ್ಧಾಂತವನ್ನು ಸಮರ್ಥಿಸಿರುವುದನ್ನು ಎಲ್ಲೆಡೆ ನೋಡಬಹುದಾಗಿದೆ.

### ಶ್ರೀ ಯಾದವಾರ್ಯರು (1541-1646)

ಶ್ರೀ ವೇದೇಶತೀರ್ಥರ ಶಿಷ್ಯರಾದ ಶ್ರೀ ಯಾದವಾರ್ಯರು ಗೃಹಸ್ಥರಾಗಿದ್ದು ಅನೇಕ ಗ್ರಂಥಗಳನ್ನು ರಚಿಸಿದ ಮಹಾನುಭಾವರಾಗಿದ್ದಾರೆ. ನ್ಯಾಯಸುಧಾ ಗ್ರಂಥಕ್ಕೆ ಇವರು ರಚಿಸಿದ ಅದ್ವಿತೀಯ ಟಿಪ್ಪಣಿಯು ವಿದ್ವಾಂಸರಿಗೆ ಚೇತೋಹಾರಿಯಾಗಿದೆ. ಭಾಗವತತಾತ್ಪರ್ಯದ ಮೊದಲೈದು ಸ್ಕಂದ ಹಾಗೂ ಯಮಕಭಾರತಕ್ಕೆ ರಚಿಸಿದ ಇವರ ಟಿಪ್ಪಣಿಯು ವಿದ್ವಾಂಸರಿಗೆ ರಸದೌತಣ ನೀಡುತ್ತವೆ. ಕೆಲವು ಪ್ರಕರಣಗ್ರಂಥಗಳಿಗೆ ವ್ಯಾಖ್ಯಾನ ರಚಿಸಿದ ಯಾದವಾರ್ಯರು ಎಂಟು ಜನ ಟಿಪ್ಪಣಿಕಾರರಾದ ಶಿಷ್ಯರನ್ನು ಪಡೆದಿದ್ದರು. ಬಿದರಹಳ್ಳಿ, ಲಿಂಗೇರಿ, ಕೋನೇರಿ, ಆಯಿ, ಉಮರ್ಜಿ ಮೊದಲಾದ ಉಪನಾಮಗಳನ್ನು ಹೊಂದಿದ ಪಂಡಿತಪ್ರವರರ ವಿದ್ಯಾಗುರುಗಳು ಯಾದವಾರ್ಯರಾಗಿದ್ದರು. ಇವರ ಶಿಷ್ಯರಲ್ಲಿ 50ಕ್ಕಿಂತ ಹೆಚ್ಚು ಗ್ರಂಥಗಳನ್ನು ರಚಿಸಿದ ಶ್ರೀನಿವಾಸತೀರ್ಥರು ಶ್ರೇಷ್ಠರೆನಿಸಿದ್ದಾರೆ. ಅವರ ತತ್ವನಿರ್ಣಯ ಹಾಗೂ ನ್ಯಾಯಾಮೃತ ಟಿಪ್ಪಣಿಗಳು ವಿದ್ಯಾರ್ಥಿಗಳು ಹಾಗೂ ವಿದ್ವಾಂಸರಿಗೆ ತೋಷದಾಯಕವಾಗಿವೆ.

### ಶ್ರೀ ಹುಲಗಿ ಶ್ರೀನಾಥಾಚಾರ್ಯರು (18ನೇ ಶತಕದ ಕೊನೆಯ ಭಾಗ)

ಶ್ರೀ ವ್ಯಾಸತೀರ್ಥರ ನ್ಯಾಯಾಮೃತ ಗ್ರಂಥದ ವಿಮರ್ಶೆಗಾಗಿ ಮಧುಸೂದನ ಸರಸ್ವತಿಗಳು ರಚಿಸಿದ ಅದ್ವೈತಸಿದ್ಧಿ ಗ್ರಂಥವನ್ನು ವಿಮರ್ಶಿಸಿ ಮಾಧ್ವರಲ್ಲಿ ಹಾಗೂ ಮಾಧ್ವಗ್ರಂಥಗಳನ್ನು ವಿಮರ್ಶಿಸಿ ಅದ್ವೈತಿಗಳಲ್ಲಿ ಅನೇಕ ಪ್ರಬುದ್ಧ ಪ್ರಬಂಧಗಳು ಹುಟ್ಟಿಕೊಂಡವು. ಕೇವಲ ವಿದ್ವಾಂಸರಿಗೆ ಮುದ ನೀಡುವ ಇಂತಹ ಪರಂಪರೆಯು 19ನೆಯ ಶತಮಾನದ ವರೆಗೆ ಗಂಭೀರವಾಗಿ ಮುಂದುವರೆದಿದೆ. ಅದ್ವೈತಸಿದ್ಧಿ, ಲಘುಚಂದ್ರಿಕಾ ಇತ್ಯಾದಿ ಗ್ರಂಥಗಳನ್ನು ವಿಮರ್ಶಿಸಿದ ಶ್ರೀನಾಥಾಚಾರ್ಯರ ಮಹಾಪ್ರಬಂಧವೇ ದ್ವೈತದ್ಯುಮಣಿ. ತತ್ತ್ವೋದ್ಯೋತಟೀಕೆಯ ವ್ಯಾಖ್ಯಾನದ ನೆಪದಿಂದ ಸಮಗ್ರ ಅದ್ವೈತ ವೇದಾಂತದ ಸೂಕ್ಷ್ಮ ಪ್ರಕ್ರಿಯೆಗಳನ್ನು ವಿಮರ್ಶಿಸುವ ಈ ಕೃತಿ ವೇದಾಂತ ವಾಙ್ಮಯದಲ್ಲಿ ಅತ್ಯಂತ ಶ್ರೇಷ್ಠ ಸ್ಥಾನವನ್ನು ಪಡೆದಿದೆ.

ಶ್ರೀಹರಿದಾಸರು

ಶ್ರೀಮದಾಚಾರ್ಯರ ಶಿಷ್ಯರಾದ ಶ್ರೀನರಹರಿತೀರ್ಥರಿಂದ ಆರಂಭಗೊಂಡ ಕನ್ನಡ ಭಾಷೆಯ ದಾಸಸಾಹಿತ್ಯವು ಇಂದೂ ಮುಂದೂ ಹರಿಯುವ ಜೀವನದಿಯಾಗಿದೆ. ತರ್ಕ ವೇದಾಂತ ಶಾಸ್ತ್ರಗಳಲ್ಲಿ ಅಪ್ರತಿಮ ಪಂಡಿತರೂ, ಪರಮಹಂಸಪರಿವ್ರಾಜಕರೂ ಆದ ಶ್ರೀ ಶ್ರೀಪಾದರಾಜರು, ಶ್ರೀವ್ಯಾಸರಾಜರು, ಶ್ರೀವಾದಿರಾಜರು ಕನ್ನಡದಲ್ಲಿ ಭಕ್ತಿಗೀತೆಗಳನ್ನು ರಚಿಸಿ ವಾಗ್ಗೇಯಕಾರರಾಗಿದ್ದು ಕನ್ನಡ ಸಾಹಿತ್ಯದ ಭಾಗ್ಯ. ಶ್ರೀವ್ಯಾಸತೀರ್ಥರಿಂದ ಅಂಕಿತ ಪಡೆದ ಪುರಂದರದಾಸರು ಹಾಗೂ ವ್ಯಾಸತೀರ್ಥರ ಪ್ರೀತಿ ಅಭಿಮಾನಗಳಿಗೆ ಪಾತ್ರರಾದ ಕನಕದಾಸರು ಹರಿಪಾರಮ್ಯವನ್ನು ತಿಳಿಸುವುದರ ಜೊತೆಜೊತೆಗೆ ಲೋಕದ ಡೊಂಕ ತಿದ್ದುವ ಹರಿದಾಸ ಸಾಹಿತ್ಯ ಗಂಗೆಯು ಮಾಧ್ವ ವಾಙ್ಮಯದ ಕವಲಾಗಿ ಹರಿದು ಬಂದಿದೆ. ಅನಂತರ ಶ್ರೀವಿಜಯದಾಸರು, ಗೋಪಾಲದಾಸರು, ಜಗನ್ನಾಥದಾಸರೇ ಮೊದಲಾದ ದಾಸವರ್ಯರು ತಮ್ಮ ಕೃತಿಗಳಿಂದ ಅಪೂರ್ವ ಪ್ರಮೇಯಗಳ ಆವಿಷ್ಕಾರದೊಂದಿಗೆ ಹರಿದಾಸ ಸಾಹಿತ್ಯವನ್ನು ಶ್ರೀಮಂತಗೊಳಿಸಿದರು. ಈ ಹರಿದಾಸ ಸಾಹಿತ್ಯವು ಜನಸಾಮಾನ್ಯರಲ್ಲಿ ಭಕ್ತಿಯನ್ನು ಬಿತ್ತರಿಸುವ ಮೂಲಕ ಸುಸಂಸ್ಕೃತರನ್ನಾಗಿ ಮಾಡುವಲ್ಲಿ ವಿಶಿಷ್ಟ ಕೊಡುಗೆಯನ್ನು ನೀಡಿದೆ. ಸರಳತೆ, ಪ್ರಾಮಾಣಿಕತೆ, ಮಾನವೀಯತೆ, ಸೌಜನ್ಯಗಳ ಮೇಲ್ಮೆಯಿಂದ ಜನಸಾಮಾನ್ಯರ ನಡುವೆ ನಡೆದಾಡಿದ ಹರಿದಾಸರು ಸರಳ ಸುಂದರವಾದ ಉಪಮಾನಗಳನ್ನು ನೀಡಿ ತತ್ವಗಳನ್ನು ತಿಳಿಸಿದರು. ಶಂಕರನ ಜಟಾಜೂಟದಲ್ಲಿ ಬಂದಿಯಾದ ಗಂಗೆಯನ್ನು ಭಗೀರಥ ಭುವಿಗಿಳಿಸಿದಂತೆ ಸಂಸ್ಕೃತವಾಙ್ಮಯದ ಸಂಪತ್ತಿಯನ್ನು ಸಾಮಾನ್ಯರ ತನಕ ಕೊಂಡೊಯ್ದ ಕೀರ್ತಿ ಹರಿದಾಸರಿಗೆ ಸಲ್ಲುತ್ತದೆ. ಕನ್ನಡನುಡಿ ಹಾಗೂ ಅಧ್ಯಾತ್ಮಪ್ರಪಂಚಕ್ಕೆ ಹರಿದಾಸರು ನೀಡಿದ ಈ ಕೊಡುಗೆ ಅವಿಸ್ಮರಣೀಯವಾದುದು.

## III. ಪ್ರಮಾಣಗಳು

ಪ್ರಮೇಯಸ್ವರೂಪದ ಅರಿವಿಗೆ ಪ್ರಮಾಣಗಳ ವಿಜ್ಞಾನವು ಆವಶ್ಯಕ ವೆಂಬುದನ್ನು ಪ್ರತ್ಯೇಕವಾಗಿ ವರ್ಣಿಸುವ ಆವಶ್ಯಕತೆ ಇಲ್ಲ. ಇದರ ಬಗ್ಗೆ ಶ್ರೀಮಧ್ವಾಚಾರ್ಯರ ವಿಚಾರಧಾರೆ ಹೀಗಿದೆ. ವಸ್ತು ಇರುವಂತೆಯೇ

ಅದನ್ನು ಗುರುತಿಸುವುದು ಪ್ರಮಾಣವೆನಿಸಿದೆ- **'ಯಥಾರ್ಥಂ ಪ್ರಮಾಣಂ'** (ಪ್ರ.ಲ.). ಇಂತಹ ಪ್ರಮಾಣವು ಕೇವಲಪ್ರಮಾಣ, ಅನುಪ್ರಮಾಣ ಎಂಬುದಾಗಿ ಎರಡು ಬಗೆಯಾಗಿದೆ. ಸರಿಯಾದ ತಿಳುವಳಿಕೆ 'ಕೇವಲ ಪ್ರಮಾಣ' ಎನಿಸಿದೆ. ಜ್ಞಾನಸಾಧನವಾದ ಇಂದ್ರಿಯ-ಯುಕ್ತಿ-ಆಗಮಗಳು 'ಅನುಪ್ರಮಾಣ' ಎನಿಸಿವೆ. ಒಟ್ಟಾರೆ ವಸ್ತುವನ್ನು ಇರುವಂತೆ ವಿಷಯೀಕರಿಸುವ ಹಿನ್ನೆಲೆಯಲ್ಲಿ ಜ್ಞಾನ ಹಾಗೂ ಜ್ಞಾನಸಾಧನಗಳು ಪ್ರಮಾಣವೆನಿಸುವವು.

**ಕೇವಲಪ್ರಮಾಣ**

ಯಥಾರ್ಥಜ್ಞಾನವು 'ಕೇವಲಪ್ರಮಾಣ'ವೆನಿಸಿದೆ. ಈಶ್ವರಜ್ಞಾನ-ಲಕ್ಷ್ಮೀಜ್ಞಾನ-ಯೋಗಿಜ್ಞಾನ-ಅಯೋಗಿಜ್ಞಾನ ಎಂಬುದಾಗಿ ಈ ಕೇವಲ ಪ್ರಮಾಣವು ನಾಲ್ಕುಬಗೆಯಾಗಿದೆ-

**'ಯಥಾರ್ಥಂ ಪ್ರಮಾಣಮ್ । ತದ್ ದ್ವಿವಿಧಮ್ । ಕೇವಲಮನುಪ್ರಮಾಣಂ ಚ । ಯಥಾರ್ಥಜ್ಞಾನಂ ಕೇವಲಮ್ । ತತ್ಸಾಧನಮನುಪ್ರಮಾಣಮ್ । ಕೇವಲಂ ಚತುರ್ವಿಧಮ್ । ಈಶಲಕ್ಷ್ಮೀಯೋಗ್ಯಯೋಗಿಭೇದೇನ ।'.** (ಪ್ರ.ಲ.)

**ಈಶ್ವರಜ್ಞಾನ ಹಾಗೂ ಲಕ್ಷ್ಮೀಜ್ಞಾನ**

ಈಶ್ವರಜ್ಞಾನ ಹಾಗೂ ಲಕ್ಷ್ಮೀಜ್ಞಾನಗಳು ಅನಾದಿನಿತ್ಯವಾಗಿವೆ. ಈಶಜ್ಞಾನವು ಸ್ವತಂತ್ರವಾದರೆ, ಲಕ್ಷ್ಮೀಜ್ಞಾನವು ಪರತಂತ್ರವಾಗಿದೆ. ನಾರಾಯಣನ ಜ್ಞಾನವು ತನ್ನೊಳಗಿರುವ ಹಾಗೂ ಹೊರಗಿನ ಎಲ್ಲವನ್ನೂ ಗ್ರಹಿಸುವುದಾಗಿದೆ. ಲಕ್ಷ್ಮೀಜ್ಞಾನವು ಉಳಿದ ದೇವತೆಗಳಿಗಿಂತ ಪರಮಾತ್ಮನ ವಿಷಯದಲ್ಲಿ ಹೆಚ್ಚಳವನ್ನು ಹೊಂದಿದರೂ ಪರಿಪೂರ್ಣವಲ್ಲ. ಪರಮಾತ್ಮನನ್ನು ಹೊರತುಪಡಿಸಿದ ಜೀವಜಡಾತ್ಮಕ ವಿಶ್ವದ ಬಗ್ಗೆ ಆಲೋಚನೆ ಇಲ್ಲದೆಯೇ ಎಲ್ಲವನ್ನೂ ಗ್ರಹಿಸಬಲ್ಲ ಸಾಮರ್ಥ್ಯವು ಲಕ್ಷ್ಮೀಜ್ಞಾನಕ್ಕಿದೆ. ಲಕ್ಷ್ಮಿಯ ಜ್ಞಾನವು ನಾರಾಯಣನ ಜ್ಞಾನದ ಸ್ಫುಟತೆಯನ್ನು ಪಡೆದಿರುವುದಿಲ್ಲ.

**'ನಿತ್ಯಮೇಕಪ್ರಕಾರಾ ಚ ನಾರಾಯಣಮತಿಃ ಪರಾ ।**
**ಸೂರ್ಯಪ್ರಭಾವಾದಖಿಲಂ ಭಾಸಯಂತೀ ನಿರಂತರಾ ।**
**ನಿರ್ಲೇಪಾ ವೀತದೋಷಾ ಚ ನಿತ್ಯಮೇವಾವಿಕಾರಿಣೀ ।**

**ವಿಶೇಷಾಂಸ್ತದ್ಗತಾಂಸ್ತ್ಯಕ್ತ್ವಾ ಪ್ರಾಯಸ್ತಲ್ಲಕ್ಷಣಾ ಶ್ರಿಯಃ ।**
**ತಥೈವ ಸ್ಪಷ್ಟತಾಭಾವಾತ್ ತತ್ತಂತ್ರತ್ವಾತ್ತು ಕೇವಲಮ್ ।'**

(ಬ್ರ.ಸೂ. ಅನು. 4.2.19-23)

### ಯೋಗಿಜ್ಞಾನ

ಯೋಗದ ಪ್ರಭಾವದಿಂದ ಹೆಚ್ಚಳವನ್ನು ಪಡೆದ ಜ್ಞಾನವು 'ಯೋಗಿಜ್ಞಾನ'ವೆನಿಸಿದೆ. ಈಶ್ವರನಲ್ಲಿ ಮನಸ್ಸನ್ನು ದೃಢವಾಗಿ ನಿಲ್ಲಿಸುವುದೇ 'ಯೋಗ'ವೆನಿಸಿದೆ. ಇದರಿಂದ ಜ್ಞಾನದಲ್ಲಿ ದೃಢತೆ ಹಾಗೂ ಸ್ಪಷ್ಟತೆ ಮೊದಲಾದ ಅತಿಶಯವು ಗೋಚರವಾಗುತ್ತದೆ. ಇಂತಹ ಯೋಗಿಜ್ಞಾನವು ಋಜುಯೋಗಿಜ್ಞಾನ, ತಾತ್ವಿಕಯೋಗಿಜ್ಞಾನ, ಅತಾತ್ವಿಕಯೋಗಿಜ್ಞಾನ ಎಂಬುದಾಗಿ ಮೂರುಬಗೆಯಾಗಿದೆ.

### ಋಜುಯೋಗಿಗಳು

ಬ್ರಹ್ಮಪದವಿಗೆ ಯೋಗ್ಯರಾದ ಜೀವರು 'ಋಜು'ಗಳೆನಿಸಿದ್ದಾರೆ. ಪರಮಾತ್ಮ ಹಾಗೂ ಲಕ್ಷ್ಮೀದೇವಿಯನ್ನು ಹೊರತುಪಡಿಸಿ ಉಳಿದ ವಿಷಯದಲ್ಲಿ ಆಲೋಚನೆ ಮಾಡಿದರೆ ಅವರ ಬುದ್ಧಿಯು ಎಲ್ಲವನ್ನೂ ಗುರುತಿಸಬಲ್ಲದು. ಋಜುಯೋಗಿಗಳ ಜ್ಞಾನವು ಸ್ವರೂಪ ಹಾಗೂ ಮನೋವೃತ್ತಿರೂಪ ಎಂಬುದಾಗಿ ಎರಡುಬಗೆಯಾಗಿದೆ. ಆತ್ಮಸ್ವರೂಪಕ್ಕಿಂತ ಬೇರೆಯಲ್ಲದ ಸಾಕ್ಷಿರೂಪಜ್ಞಾನವನ್ನೇ 'ಸ್ವರೂಪಜ್ಞಾನ' ಎನ್ನಲಾಗಿದೆ. ಕಣ್ಣು-ಕಿವಿ ಮೊದಲಾದ ಜ್ಞಾನೇಂದ್ರಿಯಗಳಿಂದ ಮನಃಪರಿಣಾಮರೂಪವಾಗಿ ಜನಿಸುವ ಜ್ಞಾನವನ್ನು 'ವೃತ್ತಿಜ್ಞಾನ' ಎಂದು ಕರೆಯಲಾಗಿದೆ. ಪರಮಾತ್ಮ ಹಾಗೂ ಧರ್ಮಾಧರ್ಮಾದಿಗಳ ವಿಷಯಕ್ಕೆ ಸಂಬಂಧಿಸಿದ ಸ್ವರೂಪಜ್ಞಾನವು ಅನಾದಿಕಾಲದಿಂದ ಅಭಿವ್ಯಕ್ತವೂ ನಿತ್ಯವೂ ಆಗಿದೆ. ಇದೇ ವಿಷಯಕ್ಕೆ ಸಂಬಂಧಿಸಿದ ಮಾನಸಜ್ಞಾನವು ಯೋಗದ ಬಲವುಳ್ಳ ಪ್ರತ್ಯಕ್ಷದಿಂದ ಜನ್ಯವಾದರೂ ಪ್ರವಾಹರೂಪವಾಗಿದ್ದು ಅನಾದಿಯೆನಿಸಿದೆ. ಪ್ರಳಯಕಾಲದಲ್ಲಿಯೂ ಮುಖ್ಯಪ್ರಾಣನು ಪರಮಾತ್ಮನ ಅರಿವಿನ ಜಾಗೃತಿಯನ್ನು ಉಳಿಸಿಕೊಂಡಿರುತ್ತಾನೆ. ಮುಕ್ತಿಯಲ್ಲಿ ಜಡವಾದ ಮನಸ್ಸು ಇಲ್ಲದ ಕಾರಣ ಮಾನಸಜ್ಞಾನವು ಅಸ್ತಿತ್ವವನ್ನು ಕಳೆದುಕೊಳ್ಳುತ್ತದೆ. ಋಜುಯೋಗಿಗಳ ಸ್ವರೂಪಜ್ಞಾನ ಹಾಗೂ ವೃತ್ತಿಜ್ಞಾನಗಳೆರಡೂ ಯಥಾರ್ಥವೆನಿಸಿವೆ.

'ಬ್ರಹ್ಮತ್ವಯೋಗ್ಯಾ ಹಿ ಜೀವಾ ಋಜವಃ । ತೇಷಾಂ ಜ್ಞಾನಂ ದ್ವಿವಿಧಂ ಸ್ವರೂಪಂ ಮನೋವೃತ್ತಿರೂಪಂ ಚೇತಿ । ತತ್ರ ವೈದಿಕೇಶ್ವರಾದಿವಿಷಯಂ ಸ್ವರೂಪಜ್ಞಾನಮನಾದಿತೋಽಭಿವ್ಯಕ್ತಂ ನಿತ್ಯಂ ಚ । ವೈದಿಕೇಶ್ವರಾದಿವಿಷಯಂ ಮನೋವೃತ್ತಿರೂಪಜ್ಞಾನಂ ಯೋಗಾನುಗೃಹೀತಪ್ರತ್ಯಕ್ಷಾದಿನಾ ಸ್ವರೂಪೇಣ ಜನ್ಯಮಪಿ ಪ್ರವಾಹತೋಽನಾದಿ ।

''ಏವಂ ಪ್ರಲಯಕಾಲೇಽಪಿ ಪ್ರತಿಭಾತಪರಾವರಃ । ಮುಖ್ಯವಾಯುಃ ।''

ಇತಿ ವಚನಾತ್ ಪ್ರಲಯೇ ವೃತ್ತಿಪ್ರವಾಹೋ ನೋಚ್ಛಿದ್ಯತೇ । ಮುಕ್ತೌ ತು ಉಚ್ಛಿದ್ಯತ ಇತ್ಯನಿತ್ಯಂ । ದ್ವಯಮಪಿ ನಿಯಮೇನ ಯಥಾರ್ಥಮಿತಿ ದ್ರಷ್ಟವ್ಯಮ್ ।' (ಪ್ರ.ಲ., ಶ್ರೀ.ಟಿ.)

### ತಾತ್ತ್ವಿಕಯೋಗಿಗಳು

ತತ್ವಾಭಿಮಾನಿಗಳಾದ ದೇವತೆಗಳು ತಾತ್ವಿಕರೆನಿಸಿದ್ದಾರೆ. ಇವರ ಜ್ಞಾನವು ತಾತ್ವಿಕಯೋಗಿಜ್ಞಾನವೆನಿಸಿದೆ. ತತ್ವಗಳನ್ನು 24 ಎಂಬುದಾಗಿ ಶಾಸ್ತ್ರಗಳು ವಿವರಿಸಿದ್ದಾವೆ-

'ಪಂಚಭಿಃ ಪಂಚಭಿರ್ಬ್ರಹ್ಮ ಚತುರ್ಭಿರ್ದಶಭಿಸ್ತಥಾ ।
ಏತಚ್ಚತುರ್ವಿಂಶತಿಕಂ ಗಣಂ ಪ್ರಾಧಾನಿಕಂ ವಿದುಃ ॥' (ಭಾಗ. 3-27-12)

ಇವುಗಳಲ್ಲಿ ಅಸಂಸೃಷ್ಟ ಹಾಗೂ ಸಂಸೃಷ್ಟ ಎಂಬುದಾಗಿ ಎರಡು ಬಗೆಯಿದೆ. ಮಹತ್ತತ್ವ ಹಾಗೂ ಅಹಂಕಾರತತ್ವಗಳು ಬುದ್ಧಿ, ಮನಸ್ಸು, ಹತ್ತು ಇಂದ್ರಿಯಗಳು, ಪಂಚ ತನ್ಮಾತ್ರೆಗಳು (ರೂಪ-ರಸ-ಗಂಧ-ಶಬ್ದ-ಸ್ಪರ್ಶಗಳು), ಪಂಚ ಮಹಾಭೂತಗಳು. ಇವಿಷ್ಟು ಅಸಂಸೃಷ್ಟವೆನಿಸಿವೆ. ಇವುಗಳನ್ನು ಬಳಸಿಕೊಂಡು ಹುಟ್ಟಿದ ಬ್ರಹ್ಮಾಂಡ ಹಾಗೂ ಅದರೊಳಗಿನ ಸಮಸ್ತ ವಿಶ್ವವು ಸಂಸೃಷ್ಟವೆನಿಸಿದೆ. ಮಹದಾದಿಗಳು ಸೂಕ್ಷ್ಮರೂಪದಿಂದ ನಿತ್ಯವಾಗಿದ್ದು ಪ್ರಕೃತಿಯ ಅಂಶಗಳಿಂದ ಸ್ಥೂಲತೆಯನ್ನು ಪಡೆಯುವ ಹಿನ್ನೆಲೆಯಲ್ಲಿ ಅಸಂಸೃಷ್ಟವೆನಿಸಿವೆ. ಮಹದಾದಿತತ್ವಗಳಿಂದಲೇ ಬ್ರಹ್ಮಾಂಡದ ಹಾಗೂ ಒಳಗಿನ ವಸ್ತುಗಳ ನಿರ್ಮಾಣವಿರುವ ಕಾರಣ ಅವುಗಳು ಸಂಸೃಷ್ಟವೆನಿಸಿವೆ-

'ಅಸಂಸೃಷ್ಟಂ ಮಹಾನಹಮ್ । ಬುದ್ಧಿರ್ಮನಃಖಾನಿ ದಶಮಾತ್ರಾಭೂತಾನಿ ಪಂಚ ।

**ಸಂಸ್ಪೃಷ್ಟಮಂಡಂ ತದ್ಗಂ ಚ ಸಮಸ್ತಂ ಸಂಪ್ರಕೀರ್ತಿತಮ್ ॥'** (ತ.ಸಂ.)

ಈ ತಾತ್ವಿಕ ಯೋಗಿಗಳ ಜ್ಞಾನವು ಅನಾದಿಯಾಗಿದೆ. ಪರಮಾತ್ಮನನ್ನು ಹೊರತುಪಡಿಸಿದ ವಿಶ್ವದ ಬಗ್ಗೆ ಆಲೋಚಿಸಿದರೂ ಸರ್ವವನ್ನೂ ಗ್ರಹಿಸುವ ಸಾಮರ್ಥ್ಯವನ್ನು ಹೊಂದಿರುವುದಿಲ್ಲ.

**ಅತಾತ್ತ್ವಿಕಯೋಗಿಗಳು**

ಋಜು ಹಾಗೂ ತಾತ್ವಿಕರಿಗಿಂತ ಭಿನ್ನರಾದ ದೇವತೆಗಳು, 'ಅತಾತ್ವಿಕಯೋಗಿ'ಗಳೆನಿಸಿದ್ದಾರೆ. ತಾತ್ತ್ವಿಕಯೋಗಿಗಳ ಸ್ವರೂಪಜ್ಞಾನವು ಅನಾದಿ. ವೃತ್ತಿಜ್ಞಾನವು ಪ್ರವಾಹದಂತೆ ಅವಿಚ್ಛಿನ್ನವಾಗಿದೆ. ಇವರಿಗೆ ಋಜುಗಳಂತೆ ಎಲ್ಲ ವಸ್ತುಗಳ ಜ್ಞಾನ ಇರುವುದಿಲ್ಲ. ಇವರಿಗೆ ತಿಳಿಯದ ವಿಷಯಗಳೂ ಇರುತ್ತವೆ.

ಅತಾತ್ತ್ವಿಕಯೋಗಿಗಳ ಸ್ವರೂಪಜ್ಞಾನವು ಅನಾದಿಯಾದರೂ ಯೋಗಸಿದ್ಧಿಯ ನಂತರವೇ ತನ್ನ ಯೋಗ್ಯತಾನುಗುಣದ ವಸ್ತುಗಳ ಗ್ರಹಣ ಸಾಮರ್ಥ್ಯವನ್ನು ಅಭಿವ್ಯಕ್ತಿಗೊಳಿಸಿಕೊಳ್ಳುವುದರಿಂದ 'ಸಾದಿ' ಎಂದು ಕರೆಸಿಕೊಳ್ಳಲ್ಪಡುತ್ತದೆ. ವೃತ್ತಿಜ್ಞಾನವು ಉತ್ಪನ್ನವಾಗುವುದರ ಜೊತೆಗೆ ಅಯಥಾರ್ಥವೂ ಸಂಭಾವಿತವಾಗಿದೆ.

**ಅಯೋಗಿಜ್ಞಾನ**

ಯೋಗಿಗಳಿಗಿಂತ ಭಿನ್ನರಾದವರು ಅಯೋಗಿಗಳೆನಿಸಿರುವರು. ಮುಕ್ತಿಯೋಗ್ಯರು, ನಿತ್ಯಸಂಸಾರಿಗಳು, ತಮೋಯೋಗ್ಯರು ಎಂಬುದಾಗಿ ಇವರು ಮೂರು ಬಗೆಯಾಗಿದ್ದಾರೆ.

ಇವರಲ್ಲಿ ಮುಕ್ತಿಯೋಗ್ಯರ ಸ್ವರೂಪಜ್ಞಾನವು ಯಥಾರ್ಥವಾಗಿದೆ. ನಿತ್ಯಸಂಸಾರಿಗಳ ಸ್ವರೂಪಜ್ಞಾನವು ಮಿಶ್ರವೂ ತಮೋಯೋಗ್ಯರ ಸ್ವರೂಪಜ್ಞಾನವು ಅಯಥಾರ್ಥವೂ ಆಗಿದೆ. ವೃತ್ತಿಜ್ಞಾನವು ಎಲ್ಲರದ್ದು ಸಂದರ್ಭೋಚಿತವಾಗಿ ಯಥಾರ್ಥವೂ ಅಯಥಾರ್ಥವೂ ಆಗಿದೆ-

**'ಅಯೋಗಿನೋಽಪಿ ತ್ರಿವಿಧಾಃ । ಮುಕ್ತಿಯೋಗ್ಯಾ ನಿತ್ಯಸಂಸಾರಿಣಸ್ತಮೋ-ಯೋಗ್ಯಾಶ್ಚೇತಿ । ತತ್ರ ಮುಕ್ತಿಯೋಗ್ಯಾನಾಂ ಸ್ವರೂಪಜ್ಞಾನಂ ಯಥಾರ್ಥ-ಮೇವ । ನಿತ್ಯಸಂಸಾರಿಣಾಂ ತು ಮಿಶ್ರಮ್ । ಅನ್ಯೇಷಾಮಯಥಾರ್ಥಮೇವ । ಬಾಹ್ಯಂ ತು ತ್ರಯಾಣಾಮಪ್ಯುಭಯವಿಧಮಿತಿ ।** (ಪ್ರ.ಪ. ಪುಟ 111)

ತಾಮಸರ ಸ್ವರೂಪಜ್ಞಾನವು ದುಃಖವನ್ನು ದುಃಖವೆಂದೇ ಗ್ರಹಿಸುವುದು. ತಮಸ್ಸಿನಲ್ಲಿ ನಿತ್ಯದುಃಖವನ್ನು ಅನುಭವಿಸುತ್ತಿದ್ದರೂ ಇದು ಅನಿತ್ಯವೆಂದು ತಿಳಿಯುವರು. ಹೀಗೆ ಪ್ರಕಾರಾಂಶದಲ್ಲಿ ಮಾತ್ರ ಅಯಥಾರ್ಥವೆನಿಸಿದೆ-

**'ಇದಂ ಚ ಪ್ರಕಾರಾಂಶಮಭಿಪ್ರೇತ್ಯ । ತದಪಿ ಚ ಸ್ವಸ್ವರೂಪದುಃಖ-ವ್ಯತಿರಿಕ್ತವಿಷಯ ಏವೇತಿ ಬೋಧ್ಯಮ್ । ಸ್ವರೂಪದುಃಖವಿಷಯೇಽಪ್ಯ-ಯಥಾರ್ಥತ್ವೇ ತೇಷಾಂ ದುಃಕಾತ್ಮಕತ್ವಾಭಾವಪ್ರಸಂಗಾತ್ । ಸರ್ವಂ ಜ್ಞಾನಂ ಧರ್ಮಿಣ್ಯಭ್ರಾಂತಮಿತ್ಯನಭ್ಯುಪಗಮಾದ್ವೇದಮುಕ್ತಮ್ ।**

(ಪ್ರ.ಪ., ಪಿ.ಟಿ. ಪುಟ 112)

## ಪ್ರತ್ಯಕ್ಷ

ಅನುಪ್ರಮಾಣವು ಪ್ರತ್ಯಕ್ಷ-ಅನುಮಾನ-ಆಗಮ ಎಂಬುದಾಗಿ ಮೂರು ಬಗೆಯಾಗಿದೆ. ದೋಷವಿಲ್ಲದ ಅರ್ಥ ಹಾಗೂ ಇಂದ್ರಿಯಗಳ ಸಂಪರ್ಕವು ಪ್ರತ್ಯಕ್ಷವೆನಿಸಿದೆ. ದೂರದಲ್ಲಿರುವುದು, ಅತಿ ಸಮೀಪದಲ್ಲಿರುವುದು, ಸೂಕ್ಷ್ಮವಾಗಿರುವುದು, ವಸ್ತುಗಳಲ್ಲಿರುವ ದೋಷವಾದರೆ ಕಾಮಾಲೆ ಮೊದಲಾದ ದೋಷಗಳು ಆಯಾಯ ಇಂದ್ರಿಯಗಳ ಗ್ರಹಣಶಕ್ತಿಯನ್ನು ಕುಗ್ಗಿಸುವ ದೋಷಗಳೆನಿಸಿವೆ. ವಸ್ತು ಅಥವಾ ಇಂದ್ರಿಯಗಳಲ್ಲಿ ದೋಷವಿರುವಾಗ ಯಥಾರ್ಥವಾದ ಜ್ಞಾನವು ಹುಟ್ಟಲಾರದು. ಈ ಹಿನ್ನೆಲೆಯಲ್ಲಿ ನಿರ್ದುಷ್ಟವಾದ ಅರ್ಥ ಹಾಗೂ ಇಂದ್ರಿಯಗಳಿಂದ ಜನಿಸುವ ಜ್ಞಾನವು ಪ್ರತ್ಯಕ್ಷಜ್ಞಾನವೆನಿಸಿದೆ. ಇದಕ್ಕೆ ಸಾಧನವಾದ ಸನ್ನಿಕರ್ಷವು ಪ್ರಮಾಣವೆನಿಸಿದೆ.

**'ನಿರ್ದೋಷಾರ್ಥೇಂದ್ರಿಯಸನ್ನಿಕರ್ಷಃ ಪ್ರತ್ಯಕ್ಷಮ್'** (ಪ್ರ.ಪ. ಪುಟ 124).

ಇಂದ್ರಿಯಶಬ್ದದಿಂದ ಜ್ಞಾನೇಂದ್ರಿಯಗಳನ್ನು ತೆಗೆದುಕೊಳ್ಳಬೇಕು. ಜ್ಞಾನೇಂದ್ರಿಯವು ಪ್ರಮಾತೃಸ್ವರೂಪ ಹಾಗೂ ಪ್ರಾಕೃತ ಎಂಬುದಾಗಿ ಎರಡು ಬಗೆಯಾಗಿದೆ. ಪ್ರಕೃತಿಯ ಪರಿಣಾಮವಾದ ಮಹತ್ತತ್ವ ಅಹಂಕಾರತತ್ವ ಪಂಚಭೂತಗಳಿಂದ ಸ್ಥೂಲತೆಯನ್ನು ಪಡೆದ ಕಣ್ಣು ಕಿವಿ ಮೊದಲಾದ ಇಂದ್ರಿಯಗಳು ಪ್ರಾಕೃತ ಜ್ಞಾನೇಂದ್ರಿಯ ಎನಿಸಿದ್ದಾವೆ. ಆತ್ಮನಿಗಿಂತ ಭಿನ್ನವಲ್ಲದ ಇಂದ್ರಿಯವು ಸಾಕ್ಷಿ ಎನಿಸಿದೆ. ಆತ್ಮಸ್ವರೂಪ ಹಾಗೂ ಆತ್ಮನ ಧರ್ಮವಾದ ಸುಖಾದಿಗಳು, ಅವಿದ್ಯೆ, ಮನಸ್ಸು, ಮನಸ್ಸಿನ ವಿಕಾರವಾದ ಜ್ಞಾನಗಳು, ಕಾಲ, ದಿಕ್ ಹಾಗೂ ಜ್ಞಾನದ ಪ್ರಾಮಾಣ್ಯವು ಸಾಕ್ಷೀಂದ್ರಿಯದಿಂದ ಗ್ರಾಹ್ಯವೆನಿಸಿವೆ-

**'ಇಂದ್ರಿಯಶಬ್ದೇನ ಜ್ಞಾನೇಂದ್ರಿಯಂ ಗೃಹ್ಯತೇ । ತದ್ ದ್ವಿವಿಧಮ್ । ಪ್ರಮಾತೃಸ್ವರೂಪಂ ಪ್ರಾಕೃತಂ ಚೇತಿ । ತತ್ರ ಸ್ವರೂಪೇಂದ್ರಿಯಂ ಸಾಕ್ಷೀತ್ಯುಚ್ಯತೇ। ತಸ್ಯ ವಿಷಯಾ ಆತ್ಮಸ್ವರೂಪಂ ತದ್ಧರ್ಮಾ ಅವಿದ್ಯಾ ಮನಸ್ತದ್ವೃತ್ತಯೋ ಬಾಹ್ಯೇಂದ್ರಿಯಜ್ಞಾನಸುಖಾದ್ಯಾಃ ಕಾಲೋಽವ್ಯಾಕೃತಾಕಾಶಶ್ಚೇತ್ಯಾದ್ಯಾಃ । ಸ ಚ ಸ್ವರೂಪಜ್ಞಾನಮಭಿವ್ಯನಕ್ತಿ ।** (ಪ್ರ.ಪ. ಪುಟ 126)

ಇಲ್ಲಿ ಇನ್ನೊಂದು ಸಂಗತಿಯನ್ನು ಅರಿಯಬೇಕು-

**ಸ್ವರೂಪೇಂದ್ರಿಯ ಆರು ಬಗೆ**

ಸ್ವರೂಪೇಂದ್ರಿಯವು ಕಣ್ಣು-ಕಿವಿ-ಮೂಗು ಇತ್ಯಾದಿಯಾಗಿ ಆರು ಬಗೆಯಾಗಿದ್ದು, ಲಿಂಗಶರೀರದಲ್ಲಿರುವ ಇಂದ್ರಿಯಗಳೊಡನೆ ಹಾಲು-ನೀರು ಬೆರತಂತೆ ಸಂಪರ್ಕ ಹೊಂದಿದೆ. ಚರ್ಮವು (ತ್ವಗಿಂದ್ರಿಯವು) ಸಮಗ್ರ ದೇಹವ್ಯಾಪಿಯಾಗಿದೆ. ಕಣ್ಣು ಮೊದಲಾದ ನಾಲ್ಕೂ ಇಂದ್ರಿಯಗಳು ತಮ್ಮ ತಮ್ಮ 'ಗೋಲಕ' (ಸೂಕ್ಷ್ಮವಾದ ಇಂದ್ರಿಯಕ್ಕೆ ಆಸರೆಯಾದ ಭಾಗ)ದಲ್ಲಿ ಇವೆ. ಮನಸ್ಸು ಎಲ್ಲ ಇಂದ್ರಿಯಗಳಿಗೆ ಆಸರೆ ಎನಿಸಿ ಸಮಗ್ರ ಶರೀರದಲ್ಲಿ ವ್ಯಾಪಿಯಾಗಿದ್ದರೂ ಹೃದಯ ಹಾಗೂ ಕಂಠದೇಶದಲ್ಲಿ ಇರುತ್ತದೆ. ಇದು ಚಿತ್ತ-ಚೇತನಾ-ಅಹಂಕಾರ-ಬುದ್ಧಿ-ಅಂತಃಕರಣ ಎಂಬುದಾಗಿ ಐದು ಬಗೆಯಾಗಿದೆ-

**'ಸ್ವರೂಪೇಂದ್ರಿಯಮಪಿ ಘ್ರಾಣಾದಿಭೇದೇನ ಷಡ್ವಿಧಂ ಸತ್ ಲಿಂಗದೇಹಸ್ಥಸೂಕ್ಷ್ಮಷಡಿಂದ್ರಿಯೈಃ ಸ್ಥೂಲಶರೀರಸ್ಥಸ್ಥೂಲೇಂದ್ರಿಯೈಶ್ಚ ಮಿಶ್ರಂ ತಿಷ್ಠತಿ ಕ್ಷೀರನೀರವತ್ । ತತ್ರ ಸ್ಪರ್ಶೇಂದ್ರಿಯಂ ಸ್ಥೂಲಶರೀರೇ ಸರ್ವತ್ರ ವ್ಯಾಪ್ತಂ ಚಕ್ಷುರಾದಿಚತುಷ್ಟಯಂ ಸ್ವಸ್ವಗೋಲಕವೃತ್ತಿ । ಮನಸ್ತು ಸರ್ವೇಂದ್ರಿಯಾಧಿಷ್ಠಾತೃ ಸರ್ವಶರೀರಸಂಚಾರಿ ಪ್ರಾಯೋ ಹೃತ್ಕಂಠವೃತ್ತಿ । ತತ್ ಪಂಚವಿಧಮ್ । ಚಿತ್ತಂ ಚೇತನಾಽಹಂಕಾರೋ ಬುದ್ಧಿರಂತಃಕರಣಮಿತಿ ।'** (ಪ್ರ.ಪ. ಶ್ರೀ.ಟಿ. ಪುಟ 127)

ಇದು ಬಾಹ್ಯವಾದ ಕಣ್ಣು-ಕಿವಿ ಮೊದಲಾದ ಇಂದ್ರಿಯಗಳ ಮೂಲಕ ಹೊರಗಿನ ವಸ್ತುಗಳ ಅರಿವನ್ನು ತಂದುಕೊಡುತ್ತದೆ. ಸ್ವತಂತ್ರವಾಗಿ ಸ್ಮರಣಸಾಧನವೂ ಅಹುದು. ಎರಡು ಬಗೆಯ ಇಂದ್ರಿಯಗಳು ಮುಕ್ತಿಯ ತನಕ ಇರುತ್ತವೆ. ಮುಕ್ತಿಯಲ್ಲಿ ಎಲ್ಲವೂ ಅಪ್ರಾಕೃತವಾದ ಆತ್ಮಸ್ವರೂಪನಾದ ಇಂದ್ರಿಯಗಳೇ ಇರುವುದು-

'ಮನಶ್ಚ ದ್ವಿವಿಧಂ ಸ್ಮೃತಮ್ ।
ಚೇತನಂ ಚ ಜಡಂ ಚೇತಿ ಚಕ್ಷುರಾದ್ಯಂ ತಥೈವ ಚ ।
ಚೇತನಂ ತ್ವಿಂದ್ರಿಯಂ ಹ್ಯಾತ್ಮಸ್ವರೂಪಾನ್ನಾಪರಂ ಸ್ಮೃತಮ್ ।
ಮುಕ್ತಾನಾಂ ಚೇತನಂ ತ್ವೇವ ಬದ್ಧಾನಾಮುಭಯಂ ತಥಾ ॥'

(ಬೃ.ಭಾ., ಅ.3 - ಅ.ಬ್ರಾ.)

## ಅನುಮಾನ

ದೋಷವಿಲ್ಲದ ಯುಕ್ತಿಯು ಅನುಮಾನವೆನಿಸಿದೆ. ಹೊಗೆಯನ್ನು ಕಂಡು ಬೆಂಕಿ ಇದೆ ಎಂಬುದಾಗಿ ಊಹಿಸುತ್ತೇವೆ. ಮಂಜನ್ನು ಕಂಡು ಹೊಗೆ ಎಂದು ಭ್ರಮಿಸಿ ಅದನ್ನು ಆಧರಿಸಿ ಅಲ್ಲಿ ಬೆಂಕಿ ಇದೆ ಎಂಬುದಾಗಿ ತೀರ್ಮಾನಿಸಲು ಸಾಧ್ಯವಾಗದು. ಈ ಹಿನ್ನೆಲೆಯಲ್ಲಿ ದೋಷವಿಲ್ಲದ ಯುಕ್ತಿ ಮಾತ್ರವೇ ನಿರ್ದಿಷ್ಟವಾದ ಸಾಧ್ಯವನ್ನು ಸಾಧಿಸಬಲ್ಲದು.

ಅರ್ಥಾಪತ್ತಿ ಹಾಗೂ ಉಪಮಾನಗಳು ಅನುಮಾನವೇ ಆಗಿದ್ದಾವೆ. ಇದರಂತೆ ಅಭಾವವೂ ಕೆಲವೊಮ್ಮೆ ಅನುಮಾನದಲ್ಲಿ, ಕೆಲವು ಪ್ರಸಂಗದಲ್ಲಿ ಪ್ರತ್ಯಕ್ಷದಲ್ಲಿ ಅಂತರ್ಭಾವ ಹೊಂದುವುದು. ಸಂಭವ ಹಾಗೂ ಪರಿಶೇಷಗಳು ಅನುಮಾನವೇ ಆಗಿವೆ. ಆತ್ಮಾಶ್ರಯ, ಅನ್ಯೋನ್ಯಾಶ್ರಯ, ಚಕ್ರಕ, ಅನವಸ್ಥಾ, ಕಲ್ಪನಾಗೌರವ, ಶ್ರುತಹಾನಿ, ದೃಷ್ಟಹಾನಿ ಮೊದಲಾದ ದೋಷಗಳ ಆಪಾದನಾರೂಪವಾದ ತರ್ಕವು ದೂಷಣಾನುಮಾನವೆನಿಸಿದೆ. ಅನುಮಾನವು ಸ್ವಾರ್ಥ ಪರಾರ್ಥ ಎಂಬುದಾಗಿ ಎರಡು ಬಗೆಯಾಗಿದೆ. ಪರೋಪದೇಶದ ಅಗತ್ಯವಿಲ್ಲದೆಯೇ ತನ್ನ ಅರಿವಿಗಾಗಿ ಮಾಡುವ ಯುಕ್ತ್ಯನುಸಂಧಾನವು ಸ್ವಾರ್ಥಾನುಮಾನ ಎನಿಸಿದೆ. ಇನ್ನೊಬ್ಬರಿಗೆ ತಿಳಿಸಲೊಸುಗ ಬಳಸುವ ಯುಕ್ತಿ ಪರಾರ್ಥಾನುಮಾನ ಎನಿಸಿದೆ. ಪರೋಪದೇಶಕ್ಕಾಗಿ ಪ್ರತಿಜ್ಞಾ, ಹೇತು, ಉದಾಹರಣ, ಉಪನಯ, ನಿಗಮನಗಳೆಂಬ ಐದು ಅವಯವಗಳ ಆವಶ್ಯಕತೆ ಇದೆ ಎಂದು ನ್ಯಾಯವಿದರ ಆಶಯವಾಗಿದೆ. ಆದರೆ, ಸಂದರ್ಭಕ್ಕೆ ಉಚಿತ ವಾಗಿ ಮೂರು, ಎರಡು, ಒಂದು ಅವಯವದಿಂದಲೂ ಅನುಮಿತಿಯು ಬರುವುದು ಕಂಡಿರುವುದರಿಂದ ಅವಯವನಿಯಮವು ಯುಕ್ತವಲ್ಲ. ವಿರೋಧ ಮತ್ತು ಅಸಂಗತಿ ಎರಡು ಅನುಮಾನ ದೋಷಗಳು.

## ಆಗಮ

ನಿರ್ದೋಷವಾದ ಶಬ್ದವು ಆಗಮವೆನಿಸಿದೆ. ಶಬ್ದಗಳಿಂದ ಕಾಣಬರುವ

ದೋಷಗಳನ್ನು ಹೀಗೆ ಸಂಗ್ರಹಿಸಬಹುದು- ಶಬ್ದ ತಿಳಿಸುವ ವಸ್ತು ಇಲ್ಲದಿರುವುದು, ಪರಸ್ಪರ ಪದಗಳಲ್ಲಿ ಅನ್ವಯವಿಲ್ಲದಿರುವುದು, ಅರಿವನ್ನು ಮೂಡಿಸದಿರುವುದು, ವಿಪರೀತಾರ್ಥವನ್ನು ನೀಡುವುದು, ಪ್ರಯೋಜನ ವಿಲ್ಲದ ವಿಷಯಗಳನ್ನು ಬೋಧಿಸುವುದು, ಅನಭಿಮತ ವಿಷಯವನ್ನು ಬೋಧಿಸುವುದು ಇತ್ಯಾದಿ. ಇಂತಹ ದೋಷಗಳಿಲ್ಲದ ಶಬ್ದ ಅಥವಾ ವಾಕ್ಯಗಳು ಪ್ರಮಾಣವೆನಿಸಿವೆ. ಆಕಾಂಕ್ಷಾ-ಯೋಗ್ಯತಾ-ಸನ್ನಿಧಿಯನ್ನು ಒಳಗೊಂಡ ಪದಗಳ ಸಮೂಹವು ವಾಕ್ಯವೆನಿಸಿದೆ. ಇಂತಹ ವಾಕ್ಯವು ಪೌರುಷೇಯ-ಅಪೌರುಷೇಯ ಎಂಬುದಾಗಿ ಎರಡು ಬಗೆಯಾಗಿದೆ. ಅನಾದಿಕಾಲದಿಂದ ಕರ್ತೃಪ್ರಸಿದ್ಧಿ ಇಲ್ಲದ ದೈಹಿಕಶುಭಲಕ್ಷಣ ವುಳ್ಳ ಜ್ಞಾನಿಗಳ ಬುದ್ಧಿಗೋಚರವಾದ ವಾಙ್ಮಯವು ಅಪೌರುಷೇಯವೆನಿಸಿದೆ. ಮಾನವಬುದ್ಧಿಯಿಂದ ಸಂಯೋಜಿಸಲ್ಪಟ್ಟ ವಾಕ್ಯಗಳು ಪೌರುಷೇಯವೆನಿಸಿವೆ.

### ಪ್ರಾಬಲ್ಯ-ದೌರ್ಬಲ್ಯ

ಪ್ರಮಾಣಗಳಲ್ಲಿ ಎರಡು ರೀತಿಯಿಂದ ಪ್ರಾಬಲ್ಯವನ್ನು ಅರಿಯ ಬಹುದಾಗಿದೆ-

**1.** ಒಂದು ವಿಷಯದಲ್ಲಿ ಅನೇಕ ಪ್ರಮಾಣಗಳಿದ್ದಾಗ ಆ ಪ್ರಮಾಣಗಳಲ್ಲಿ ಪ್ರಾಬಲ್ಯ ಬರಬಹುದು.

**2.** ಯಾವ ಪ್ರಮಾಣವು ತನ್ನ ವಿಷಯಸಿದ್ಧಿಗೆ ಯಾವುದೊಂದು ಪ್ರಮಾಣವನ್ನು ಉಪಜೀವಿಸಿ (ಆಶ್ರಯಿಸಿ) ಪ್ರವೃತ್ತವಾಗುವುದೋ ಅಂತಹ ಮೂಲಪ್ರಮಾಣವು ಉಪಜೀವ್ಯವೆನಿಸಿ ಸ್ವಾಭಾವಿಕ ಪ್ರಾಬಲ್ಯವನ್ನು ಪಡೆದಿರುತ್ತದೆ. ಇದರ ವಿರೋಧ ಹೊಂದಿದ ಪ್ರತ್ಯಕ್ಷವಾಗಲೀ ಯುಕ್ತಿ ಯಾಗಲೀ ಪ್ರಮಾಣವೆನಿಸದು. ವಿಷ್ಣುವಿನ ಅವತಾರವಾದ ರಾಮ-ಕೃಷ್ಣರಲ್ಲಿ ಮೇಲುನೋಟಕ್ಕೆ ದೋಷಗಳು ಕಾಣಬಹುದು. ಆದರೆ, ವೇದಗಳು ಅವರನ್ನು ಪರಿಚಯಿಸುವಾಗಲೇ ದೋಷವಿದೂರರೆಂದು ಪರಿಚಯಿಸುವ ಕಾರಣ ಪ್ರತ್ಯಕ್ಷವು ಈ ವಿಷಯದಲ್ಲಿ ದುರ್ಬಲವೆನಿಸುವುದು. ವೇದವು, 'ಯಜಮಾನನು ದರ್ಭಮುಷ್ಟಿ' (**ಯಜಮಾನಃ ಪ್ರಸ್ತರಃ**) ಎಂದಾಗ ಪ್ರತ್ಯಕ್ಷಸಿದ್ಧನಾದ ಯಜಮಾನನು ದರ್ಭಮುಷ್ಟಿಯಲ್ಲವೆಂದು ನಮಗೆ ಸ್ಫುಟವಾಗಿ ತಿಳಿದ ಕಾರಣ ಇಂತಹ ಪ್ರಸಂಗದಲ್ಲಿ ಉಪಜೀವ್ಯವಾದ ಪ್ರತ್ಯಕ್ಷಕ್ಕೆ ವಿರೋಧ ಬಾರದಂತೆ ವೇದಕ್ಕೆ ಗೌಣಾರ್ಥವನ್ನು ವರ್ಣಿಸಬೇಕು.

# IV. ಜೀವ

**ದುಃಖದ ಮೂಲವೇನು ?**

ವೇದ-ಪುರಾಣಗಳನ್ನು ಅನುಸರಿಸಿ ಶ್ರೀಮಧ್ವಾಚಾರ್ಯರು ಜೀವ ಸ್ವರೂಪವನ್ನು ನಿರೂಪಿಸಿದ್ದಾರೆ. ಶ್ರೀಮದ್ಭಾಗವತವು ಅನೇಕ ಪರಮಾತ್ಮನ ರೂಪಗಳನ್ನು ಉಪವರ್ಣಿಸಿ ಅನಂತರ ಜೀವಸ್ವರೂಪದ ಬಗ್ಗೆ ಬೆಳಕನ್ನು ನೀಡಿದೆ.

**'ಅತಃ ಪರಂ ಯದವ್ಯಕ್ತಮವ್ಯೂಢಗುಣಬೃಂಹಿತಮ್ ।**
**ಅದೃಷ್ಟಾಶ್ರುತವಸ್ತುತ್ವಾತ್ ಸ ಜೀವೋ ಯಃ ಪುನರ್ಭವಃ ॥'**

(ಭಾಗ. 1-3-72)

ಈ ಶ್ಲೋಕದ ಆಶಯ ಹೀಗಿದೆ- ಹಿಂದೆ ವರ್ಣಿಸಿದ ಅನಂತಗುಣನೂ, ಅನಂತರೂಪನೂ ಆದ ಶ್ರೀಹರಿಗಿಂತ ಭಿನ್ನನೂ ಅತ್ಯಂತ ಸೂಕ್ಷ್ಮನೂ ಆಗಿರುವವನು ಜೀವನೆನಿಸಿದ್ದಾನೆ. ಇವನೊಳಗೆ ಜ್ಞಾನಾನಂದಾದಿ ಮಂಗಲ ಗುಣಗಳಿದ್ದರೂ ಇಂದು ಅವುಗಳ ಅನುಭವ ಸ್ಫುಟವಾಗಿ ಆಗುತ್ತಿಲ್ಲ. ಇದಕ್ಕೆ ಕಾರಣ ತನ್ನ ಬಿಂಬರೂಪಿಯಾದ ಭಗವಂತನ ಬಗ್ಗೆ ಸರಿಯಾದ ಅರಿವನ್ನು ಸಂಪಾದಿಸದಿರುವುದು ಹಾಗೂ ಅವನನ್ನು ನೋಡಲು ಪ್ರಯತ್ನಿಸ ದಿರುವುದು ಪ್ರಧಾನಕಾರಣವಾಗಿದೆ. ಈ ಹಿನ್ನೆಲೆಯಲ್ಲಿ ಮತ್ತೆ ಮತ್ತೆ ಜನನ- ಮರಣಚಕ್ರಕ್ಕೆ ಇವನು ಸಿಲುಕಿದ್ದಾನೆ. ಚತುರ್ಥಸ್ಕಂದ ಭಾಗವತವು ಇದರ ಬಗ್ಗೆ ಇನ್ನಷ್ಟು ಸ್ಪುಟವಾದ ಮಾಹಿತಿಯನ್ನುನೀಡುತ್ತದೆ- 'ಜೀವನೆಂದರೆ ಸಹಜವಾದ ಜ್ಞಾನಾನಂದಾದಿಗುಣಗಳಿಗೆ ಆಸರೆಯಾದವನು. ಇಂದು ಇಂತಹ ವ್ಯಕ್ತಿತ್ವದ ಅನುಭವ ಯಾವ ಜೀವರಿಗೂ ಕಾಣಬರುವುದಿಲ್ಲ. ಜೀವ ಶಬ್ದವು ಈಗ ಲಿಂಗದೇಹದ ಹೊದಿಕೆಯಿಂದ ಕೂಡಿದ ನಾನಾಬಗೆಯಾದ ವಿಕಾರಗಳ ತಾಣನಾದ ವ್ಯಕ್ತಿಯಲ್ಲಿ ಬಳಕೆಯಾಗುತ್ತಿದೆ. ಪಂಚ ಜ್ಞಾನೇಂದ್ರಿಯ, ಪಂಚ ಕರ್ಮೇಂದ್ರಿಯ, ಪಂಚ ಮಹಾಭೂತಗಳು ಹಾಗೂ ಮನಸ್ಸಿನಿಂದ ಕೂಡಿದ ಹದಿನಾರು ಅಂಶಗಳನ್ನು ಒಳಗೊಂಡ ವಸ್ತುವು ಲಿಂಗಶರೀರವಾಗಿದೆ. ಇದರೊಳಗೆ ಚಿದಾನಂದಮಯನಾದ ಜೀವನು ಬಂದಿಯಾಗಿದ್ದಾನೆ. ಇದರಿಂದ ಬಿಡುಗಡೆಯೇ ಮುಕ್ತಿಯೆನಿಸುವುದು-

**'ಏಕಂ ಪಂಚವಿಧಂ ಲಿಂಗಂ ತ್ರಿವೃತ್ಷೋಡಶವಿಸ್ತರಂ ।**
**ಏಷ ಚೇತನಯಾ ಯುಕ್ತಃ ಜೀವ ಇತ್ಯಭಿಧೀಯತೇ ॥'** (ಭಾಗ. 4-29-76)

## ಜೀವರಲ್ಲಿ ವೈವಿಧ್ಯ

ಶ್ರೀಮದಾಚಾರ್ಯರು ಜೀವಸ್ವರೂಪದ ಬಗ್ಗೆ ತಮ್ಮ ತತ್ವಸಂಖ್ಯಾನ ಮೊದಲಾದ ಕೃತಿಗಳಲ್ಲಿ ಬೆಳಕು ನೀಡಿದ್ದಾರೆ. ದುಃಖದ ಸಂಪರ್ಕವುಳ್ಳದ್ದು ಹಾಗೂ ಎಂದಿಗೂ ದುಃಖದ ಲೇಪವಿಲ್ಲದ್ದು ಎಂಬುದಾಗಿ ಚೇತನವು ಎರಡುಬಗೆಯಾಗಿದೆ. ರಮಾದೇವಿಯು ಎಂದೆಂದಿಗೂ ದುಃಖ ಸ್ಪರ್ಶವಿಲ್ಲದ ಚೇತನ ಎನಿಸಿದ್ದಾಳೆ. ಉಳಿದ ಜೀವರು ದುಃಖದ ಸ್ಪರ್ಶವನ್ನು ಹೊಂದಿದ್ದಾರೆ.

**'ದುಃಖಸ್ಪೃಷ್ಟಂ ತದಸ್ಪೃಷ್ಟಮ್ ಇತಿ ದ್ವೇಧೈವ ಚೇತನಮ್ ।**
**ದುಃಖಾಸ್ಪೃಷ್ಟಾ ರಮಾ ಅನ್ಯೇ ಸ್ಪೃಷ್ಟದುಃಖಾಃ ಸಮಸ್ತಶಃ ॥'** (ತ.ಸಂ.)

ಇಲ್ಲಿಯೂ ಒಂದು ಸಂಗತಿಯನ್ನು ನಾವು ಗಮನಿಸಬೇಕು. ಅಜ್ಞಾನದ ವಿಕಾರವನ್ನು ಮುಟ್ಟದ ವಾಯುದೇವರು ಹರಿಪ್ರೀತಿಗಾಗಿ ಮಾತ್ರವೇ ದುಃಖವನ್ನು ಕೆಲವು ಬಾರಿ ಪ್ರದರ್ಶನ ಮಾಡಿದ್ದಿದೆ. ದುಃಖಕ್ಕೆ ಕಾರಣವಾದ ಪ್ರಾಕೃತದೇಹ ಇರುವ ಕಾರಣ ಅವರನ್ನು ದುಃಖಸ್ಪೃಷ್ಟರು ಎನ್ನಲಾಗಿದೆ. ರುದ್ರಾದಿದೇವತೆಗಳಿಗೆ ದುಃಖದ ಭೋಗವಿದೆ-

**'ದುಃಖಾಸಂಪೀಡನತ್ವಾತ್ ಮಧ್ಯಮೋ ವಾಯುರುಚ್ಯತೇ ।**
**ದುಃಖಸ್ಯ ಯೋಗತೋ ಭೋಗಾತ್ ರುದ್ರವೀಂದ್ರಾದಯೋಽಧಮಾಃ ॥'**
(ತ.ಸಂ.ವಿ.ಟಿ.)

ದುಃಖದ ಭೋಗವುಳ್ಳವರು ವಿಮುಕ್ತರು ಹಾಗೂ ಪ್ರಸಕ್ತದುಃಖಾನುಭವ ವುಳ್ಳವರು ಎಂಬುದಾಗಿ ಎರಡು ಬಗೆಯಾಗಿದ್ದಾರೆ. ದುಃಖದ ಅನುಭವ ವುಳ್ಳವರಲ್ಲಿ ಮುಕ್ತಿಯೋಗ್ಯರು ಅಯೋಗ್ಯರು ಎಂಬುದಾಗಿ ಎರಡು ಬಗೆಯಿದೆ. ಮುಕ್ತಿಯೋಗ್ಯರು ದೇವತೆಗಳು, ಋಷಿಗಳು, ಪಿತೃಗಳು, ಚಕ್ರವರ್ತಿಗಳು, ಮಾನುಷೋತ್ತಮರು ಎಂಬುದಾಗಿ ಐದು ಬಗೆಯಾಗಿದ್ದಾರೆ. ಮುಕ್ತಿಗೆ ಯೋಗ್ಯರಲ್ಲದವರು ತಮೋಯೋಗ್ಯರು, ನಿತ್ಯಸಂಸಾರಿಗಳು ಎಂಬುದಾಗಿ ಎರಡು ಬಗೆಯಾಗಿದ್ದಾರೆ. ದೈತ್ಯರು, ರಾಕ್ಷಸರು, ಪಿಶಾಚಿಗಳು, ಮನುಷ್ಯಾಧಮರು ತಮೋಯೋಗ್ಯರೆನಿಸಿದ್ದಾರೆ. ನಿತ್ಯಸಂಸಾರಿಗಳು ಯಾವಾಗಲೂ ಸುಖ-ದುಃಖಗಳ ಅನುಭವವನ್ನು ಪಡೆಯುತ್ತಾರೆ-

**'ಸಾತ್ವಿಕಾ ರಾಜಸಾಶ್ಚೈವ ತಾಮಸಾಸ್ತ್ರಿವಿಧಾಃ ಜನಾಃ ।**
**ಸಾತ್ವಿಕಾಸ್ತತ್ರ ದೇವಾದ್ಯಾಃ ರಾಜಸಾಃ ಸೃಷ್ಟಿಗಾಸ್ತಥಾ ।**

**ಮರ್ತ್ಯಾಧಮಾಸ್ತಾಮಸಾಸ್ತು ದೈತ್ಯರಕ್ಷಃಪಿಶಾಚಕಾಃ ।**
**ಸ್ವರೂಪಭೂತವಿದ್ವೇಷಾ ಅಧೋ ಗಚ್ಛಂತಿ ತೇ ತಮಃ ॥'**

(ತ.ಸಂ.ಕಾಶಿಕಾ.ಟಿ.)

ಮೇಲಿನ ಪ್ರಮಾಣವಚನವನ್ನು ಗಮನಿಸಿದಾಗ ಸಾತ್ವಿಕರು ರಾಜಸರು ತಾಮಸರು ಎಂಬುದಾಗಿ ಜೀವರಲ್ಲಿ ತ್ರೈವಿಧ್ಯವಿದೆ ಎಂಬುದು ಸ್ಫುಟವಾಗುವುದು. ಸಾತ್ವಿಕರು ಮುಕ್ತಿಯನ್ನು, ತಾಮಸರು ನಿತ್ಯನರಕವನ್ನು, ರಾಜಸರು ನಿತ್ಯಸಂಸಾರವನ್ನು ಪಡೆಯುತ್ತಾರೆ- **'ಶೃಣ್ವೇ ವೀರ ಉಗ್ರಮುಗ್ರಂ ದಮಾಯನ್ನನ್ಯಮನ್ಯಮತಿನೇನೀಯಮಾನಃ ಏಧಮಾನದ್ವಿಡುಭಯಸ್ಯ ರಾಜಾ ಚೋಷ್ಕೂಯತೇ ವಿಶ ಇಂದ್ರೋ ಮನುಷ್ಯಾನ್'** (ಋ.ಸಂ. 6-47-16) ಇತ್ಯಾದಿ ಶ್ರುತಿಗಳು ಮೇಲಿನ ಪ್ರಮೇಯವನ್ನು ಪೋಷಿಸುತ್ತವೆ. ನಾಲ್ಕು ಬಗೆಯ ತಮೋಯೋಗ್ಯರಲ್ಲಿ ಕೆಲವರು ಈಗಾಗಲೇ ನಿತ್ಯನರಕದಲ್ಲಿರುವವರು, ಮತ್ತೆ ಕೆಲವರು ನರಕವನ್ನು ಪಡೆವ ಸಾಧನೆಯಲ್ಲಿರುವವರು ಎಂಬುದಾಗಿ ಎರಡು ಬಗೆಯಾಗಿದ್ದಾರೆ. ಇಂತಹ ಜೀವತ್ರೈವಿಧ್ಯವನ್ನು ಶ್ರೀಕೃಷ್ಣನು ಭಗವದ್ಗೀತೆಯಲ್ಲಿ ಅತ್ಯಂತ ವಿಸ್ತೃತವಾಗಿ ಪ್ರತಿಪಾದಿಸಿದ್ದಾನೆ. ಜೀವಸ್ವರೂಪದ ಬಗ್ಗೆ ಶ್ರೀಮದಾಚಾರ್ಯರು ಗೀತಾತಾತ್ಪರ್ಯದಲ್ಲಿ ಅಪೂರ್ವ ವಿವರವನ್ನು ನೀಡಿದ್ದಾರೆ.

**'ಅಲ್ಪಶಕ್ತಿರಸಾರ್ವಜ್ಞ್ಯಂ ಪಾರತಂತ್ರ್ಯಮಪೂರ್ಣತಾ ।**
**ಉಪಜೀವಕತ್ವಂ ಜೀವತ್ವಂ ಈಶತ್ವಂ ತದ್ವಿಪರ್ಯಯಃ ॥**
**ಸ್ವಾಭಾವಿಕಂ ತಯೋರೇತತ್ ನಾನ್ಯಥಾ ಸ್ಯಾತ್ ಕಥಂಚನ ।**
**ವದಂತಿ ಶಾಶ್ವತಾವೇತೌ ಅತ ಏವ ಮಹಾಜನಾಃ ॥'** (ಗೀತಾ.ತಾ. 2-21)

ಇದರ ಆಶಯವು ಹೀಗಿದೆ- ಅಲ್ಪಶಕ್ತಿಯನ್ನು ಹೊಂದಿರುವುದು, ಅಲ್ಪಜ್ಞಾನವನ್ನು ಹೊಂದಿರುವುದು, ಪರಾಧೀನತೆ, ಅಪೂರ್ಣತೆ ಇವುಗಳನ್ನುಹೊಂದಿರುವುದೇ ಜೀವಶಬ್ದಾರ್ಥವಾಗಿದೆ. ಈ ವಿಕಾರಗಳಿಲ್ಲದಿರುವವನೇ ಪರಮಾತ್ಮನೆನಿಸಿದ್ದಾನೆ. ಈ ಪ್ರಮಾಣವಚನವನ್ನು ಗಮನಿಸಿದಾಗ ಜೀವ-ಪರಮಾತ್ಮರ ನಿಜರೂಪದ ಪರಿಕಲ್ಪನೆ ಸ್ಫುಟವಾಗಿ ಗೋಚರವಾಗುವುದು. ಜೀವರಲ್ಲಿ ನೈಸರ್ಗಿಕಭೇದವಿರುವಂತೆ ತಾರತಮ್ಯವೂ ಶ್ರುತಿಸ್ಮೃತಿಗಳಲ್ಲಿ ಕಂಡುಬರುತ್ತದೆ. ತೈತ್ತಿರೀಯ ಉಪನಿಷತ್ತಿನ ಬ್ರಹ್ಮವಲ್ಲಿಯು ಜೀವರಲ್ಲಿ ಆನಂದತಾರತಮ್ಯವನ್ನು ನಿರೂಪಿಸಿದೆ. ಸಾಧನೆಯ

ತಾರತಮ್ಯದ ಹಿನ್ನೆಲೆಯಲ್ಲಿ ಇಂತಹ ಫಲತಾರತಮ್ಯವು ಸಮಂಜಸವಾಗಿದೆ. ಇದರ ಬಗ್ಗೆ 'ಇತರ ಪ್ರಮೇಯಗಳು' ಎಂಬ ವಿಭಾಗದಲ್ಲಿ ಹೆಚ್ಚಿನ ವಿವರವನ್ನು ತಿಳಿಯೋಣ.

# V. ಪರಮಾತ್ಮ

**ವಿಶ್ವಕಾರಣ-ಅನಂತಗುಣ**

ಅನಂತ ಜೀವಜಡಗಳನ್ನು ಒಳಗೊಂಡ ಈ ವಿಶ್ವವು ಆಕಸ್ಮಿಕವಲ್ಲ. ವ್ಯವಸ್ಥಿತವಾದ ಕಾರ್ಯ-ಕಾರಣಭಾವಪ್ರಕ್ರಿಯೆ ಒಪ್ಪದೇ ವಿಶ್ವದ ಸೃಷ್ಟಿಯನ್ನು ನಿರೂಪಿಸುವುದು ಅಸಾಧ್ಯವಾದ ಸಂಗತಿ. ಕಾರಣವಿಲ್ಲದೆ ಸೃಷ್ಟಿಯಾಗಿದೆ ಎಂಬುದು ವ್ಯಾಹತವಾದ ಭಾಷಣವಾಗಬಲ್ಲದು. ಈ ದೃಷ್ಟಿಯಿಂದ ಅನಂತ ವಾದ ವಿಶ್ವವನ್ನು ಅನ್ವೇಷಣಾತ್ಮಕ ದೃಷ್ಟಿಯಿಂದ ನೋಡುವ ಪ್ರತಿಯೊಬ್ಬ ಬುದ್ಧಿಜೀವಿಯು ಇದರ ಹಿಂದಿರುವ ಕಾರಣವನ್ನು ವಿಮರ್ಶಿಸುವುದು ಅನಿವಾರ್ಯವಿದೆ. ಒಂದು ಮಡಿಕೆಯ ನಿರ್ಮಾಣದಲ್ಲಿ ಪರಿವರ್ತನಾತ್ಮಕ ಗುಣವುಳ್ಳ ಮಣ್ಣು ಮತ್ತು ತನ್ನ ಆಲೋಚನೆಗೆ ತಕ್ಕಂತೆ ಆಕಾರವನ್ನು ನೀಡುವ ಬುದ್ಧಿಜೀವಿಯ ಪಾತ್ರವಿದೆ ಎಂಬುದನ್ನು ನಾವು ಅರಿತಿದ್ದೇವೆ. ಪರಿವರ್ತನಾತ್ಮಕ ಗುಣವನ್ನು ಹೊಂದಿದ ಮೂಲವಸ್ತುವನ್ನು ದರ್ಶನ ಭಾಷೆಯಲ್ಲಿ 'ಸಮವಾಯಿಕಾರಣ' ಅಥವಾ 'ಉಪಾದಾನಕಾರಣ' ಎನ್ನುತ್ತಾರೆ. ಬುದ್ಧಿಜೀವಿಯಾದ ಸೂತ್ರಧಾರಿಯನ್ನು 'ನಿಮಿತ್ತಕಾರಣ' ಎನ್ನುತ್ತಾರೆ. ಈ ತಾರ್ಕಿಕನಿರ್ಣಯವು ವಿಶ್ವಕ್ಕೂ ಅನ್ವಯಿಸುವಂತಹದು. ಈ ವಿಶ್ವದ ಸೃಷ್ಟಿಯ ಹಿನ್ನೆಲೆಯಲ್ಲಿ ಎರಡು ಅಂಶಗಳನ್ನು ವೇದಾಂತಿಗಳು ಗುರುತಿಸಿದ್ದಾರೆ. ಪರಿವರ್ತನಾತ್ಮಕ ಗುಣವನ್ನು ಹೊಂದಿದ ಪ್ರಕೃತಿಯು ಉಪಾದಾನಕಾರಣವೆನ್ನಿಸಿದರೆ, ಇದನ್ನು ಬಳಸಿಕೊಂಡು ಪ್ರಪಂಚದ ವಿಕಾಸವನ್ನು ನಡೆಸುವ ಪರಮಾತ್ಮನು ನಿಮಿತ್ತಕಾರಣನೆನಿಸಿದ್ದಾನೆ. ಈ ವಿಚಿತ್ರ ವಿಶ್ವದ ಸ್ರಷ್ಟಾರನೇ ಪರಮಾತ್ಮನೆಂದು ಶ್ರುತಿಗಳು ಉದ್ಘೋಷಿಸುತ್ತಿವೆ- **'ಯೋ ನಃ ಪಿತಾ ಜನಿತಾ ಯೋ ವಿಧಾತಾ', 'ಯತೋ ವಾ ಇಮಾನಿ ಭೂತಾನಿ ಜಾಯಂತೇ, ಯೇನ ಜಾತಾನಿ ಜೀವಂತಿ, ಯತ್ ಪ್ರಯಂತಿ ಅಭಿಸಂವಿಶಂತಿ ತದ್ ವಿಜಿಜ್ಞಾಸಸ್ವ ತದ್ ಬ್ರಹ್ಮ'** (ತೈ.ಬ್ರ.ವ.) ಇತ್ಯಾದಿ. ಇಂತಹ ಶ್ರುತಿಗಳನ್ನು ಗಮನಿಸಿದಾಗ ವಿಶ್ವದ ಮೂಲಕಾರಣನಾದ ಪರಮಾತ್ಮನ ಒಡಂಬಡಿಕೆ ಅಪರಿಹಾರ್ಯವಾಗುವುದು.

ಇಂತಹ ಪರಮಾತ್ಮನ ಸ್ವರೂಪನಿರೂಪಣೆಯ ಬಗ್ಗೆ ದಾರ್ಶನಿಕರಲ್ಲಿ ವಿಭಿನ್ನ ಚಿಂತನೆಗಳಿದ್ದಾವೆ. ಯೋಗದರ್ಶನವು ವಿಕಾರವಿಲ್ಲದ ವಸ್ತುವನ್ನು ದೇವರೆಂದು ಕರೆಯಿತು. ನ್ಯಾಯಶಾಸ್ತ್ರವಿದರು ಲೆಕ್ಕ ಮಾಡಿ ಎಂಟು ಗುಣಗಳನ್ನು ಪರಮಾತ್ಮನಲ್ಲಿ ಗುರುತಿಸಿದರು. ವೇದಾಂತಿಗಳಲ್ಲೂ ಕೆಲವರು ಮಾಯೆಯಿಂದ ಸಗುಣ ಎಂದು, ವಾಸ್ತವದಲ್ಲಿ ನಿರ್ಗುಣನೆಂದು ಬ್ರಹ್ಮಸ್ವರೂಪವನ್ನು ಪರಿಚಯಿಸಿದರು. ಜಗದ್ಗುರು ಮಧ್ವಾಚಾರ್ಯರು ನೀಡಿದ ಪರಮಾತ್ಮನ ಸ್ವರೂಪದ ವಿವರಣೆ ಹೀಗಿದೆ- ಅಪ್ರಾಕೃತವಾದ ಜ್ಞಾನ, ಆನಂದ, ಔದಾರ್ಯ, ಕಾರುಣ್ಯ ಮೊದಲಾದ ಅನಂತ ಗುಣಗಳ ಅಂತಿಮ ನೆಲೆಯೇ ಭಗವಂತನೆನಿಸಿದ್ದಾನೆ. ಈ ವಿಶ್ವದಲ್ಲಿ ಕಾಣುವ ಚಿಂತೆ, ಸಂತಾಪ, ಹುಟ್ಟು-ಸಾವುಗಳೇ ಮೊದಲಾದ ಯಾವ ವಿಕಾರಗಳಿಗೂ ಅವನಲ್ಲಿ ಆಸ್ಪದವಿಲ್ಲ. ಒಟ್ಟಾರೆ ಎಂದೆಂದಿಗೂ ದೋಷಗಳಿಗೆ ಆಸರೆಯಾಗದ ಅನಂತಗುಣಧಾಮನಾದ ವಸ್ತುವೇ ಪರಮಾತ್ಮ-

**'ಅತೋಽಶೇಷಗುಣೋನ್ನದ್ಧಂ ನಿರ್ದೋಷಂ ಯಾವದೇವ ಹಿ ।**
**ತಾವದೇವ ಈಶ್ವರೋ ನಾಮ ತತ್ರ ಭೇದೋಽಪಿ ನ ಕ್ವಚಿತ್ ॥'**

(ಬ್ರ.ಸೂ. ಅನು.)

ಇಂತಹ ಪರಮಾತ್ಮನ ಸ್ವರೂಪದ ಬಗ್ಗೆ ಹೆಚ್ಚಿನ ಮಾಹಿತಿಯನ್ನು ಶ್ರೀಮದಾಚಾರ್ಯರು ಅನುವ್ಯಾಖ್ಯಾನ-ಜನ್ಮಾಧಿಕರಣದಲ್ಲಿ ನೀಡಿದ್ದಾರೆ- ವಿಶ್ವದಲ್ಲಿ ನಾವು ಎಂಟು ಬಗೆಯ ಕ್ರಿಯೆಗಳನ್ನು ಕಾಣುತ್ತೇವೆ. ಹುಟ್ಟು, ಇರವು, ಕೊನೆ (ವಿನಾಶ), ನಿಯಮನ, ಜ್ಞಾನ, ಅಜ್ಞಾನ, ಬಂಧ ಹಾಗೂ ಮುಕ್ತಿ. ಈ ಎಂಟು ಬಗೆಯ ಕ್ರಿಯೆಗಳಲ್ಲಿ ಮೊದಲ ನಾಲ್ಕು ಜಡಗಳಲ್ಲೂ ಗೋಚರವಾಗುವುದು. ಈ ಎಂಟೂ ಬಗೆಯ ಕ್ರಿಯೆಗಳನ್ನು ಒಳಗೊಂಡವ ಜೀವನೆನಿಸಿದ್ದಾನೆ. ಅನಂತ ಜೀವರ ಸೃಷ್ಟಿ ಮೊದಲಾದ ಎಂಟು ಬಗೆಯ ಕ್ರಿಯೆಗಳಿಗೆ ಕಾರಣನಾದವನೇ ಪರಮಾತ್ಮನೆನಿಸಿದ್ದಾನೆ. ಕೆಲವರು ಪರಬ್ರಹ್ಮಸ್ವರೂಪವನ್ನು ವಿವರಿಸುವಾಗ ಸೃಷ್ಟಿ-ಸ್ಥಿತಿ-ಲಯಗಳಿಗೆ ಕಾರಣನೆಂದು ವಿವರಿಸಿದ್ದಾರೆ. ಶ್ರೀಮಧ್ವಾಚಾರ್ಯರು ಉಪನಿಷತ್ತುಗಳಲ್ಲಿ ಅಡಕವಾದ ಜೀವರಿಗೆ ಸಂಬಂಧಿಸಿದ ಇತರ ಮಹಿಮೆಗಳನ್ನೂ ಪರಿಗಣಿಸಿ ಸಮಷ್ಟಿಯಾಗಿ ಜನ್ಮಾದಿ ಅಷ್ಟಕಾರಣತ್ವವನ್ನು ಪರಮಾತ್ಮನ ಲಕ್ಷಣವೆಂದು ವಿವರಿಸಿದ್ದಾರೆ. ಬೃಹದಾರಣ್ಯಕೋಪನಿಷತ್ತಿನ ಸಮಗ್ರ ಅಂತರ್ಯಾಮಿ

ಬ್ರಾಹ್ಮಣವು ಚೇತನಾಚೇತನಾತ್ಮಕ ವಿಶ್ವದ ನಿಯಾಮಕತ್ವವನ್ನು ಪರಮಾತ್ಮನಿಗೆ ವರ್ಣಿಸುತ್ತಿದೆ. ಪರಮಾತ್ಮನಿಂದಲೇ ಜೀವರಾಶಿಗಳಿಗೆ ಜ್ಞಾನ-ಅಜ್ಞಾನ-ಬಂಧ-ಮೋಕ್ಷಗಳನ್ನು ವರ್ಣಿಸುವ

**'ತ್ವಂ ಮುಕ್ತಿದೋ ಬಂಧದೋಽತೋ ಮತೋ ನಃ ।**
**ತ್ವಂ ಜ್ಞಾನದೋ ಅಜ್ಞಾನದಶ್ಚಾಸಿ ವಿಷ್ಣೋ ॥'** (ನ್ಯಾ.ಸು.ಪ.ಉ. 1-1-2)

ಇತ್ಯಾದಿ ಶ್ರುತಿಗಳ ಹಿನ್ನೆಲೆಯಲ್ಲಿ ಪರಮಾತ್ಮನು ಎಂಟಕ್ಕೂ ಕಾರಣನೆಂದು ಒಪ್ಪುವುದು ಶ್ರುತಿಗಳಿಗೆ ಸಂಪೂರ್ಣ ನ್ಯಾಯವನ್ನು ಒದಗಿಸಿದಂತಾಗುವುದು. ಉಪನಿಷತ್ತು ಹಾಗೂ ಬ್ರಹ್ಮಸೂತ್ರಗಳು ವರ್ಣಿಸುವ ಸೃಷ್ಟ್ಯಾದಿ ಅಷ್ಟಕಾರಣತ್ವವು ಶಕ್ತಿರೂಪವಾಗಿದ್ದು ಶ್ರೀಹರಿಯಲ್ಲಿ ಎಲ್ಲ ಕಾಲದಲ್ಲೂ ಇದೆ-

**'ಶಕ್ತಯಃ ಸರ್ವಭಾವಾನಾಂ ಅಚಿಂತ್ಯಜ್ಞಾನಗೋಚರಾಃ ।**
**ಯತೋಽತೋ ಬ್ರಹ್ಮಣಸ್ತಾಸ್ತು ಸರ್ಗಾದ್ಯಾ ಭಾವಶಕ್ತಯಃ ॥'**
(ತಾ.ಚಂ.ಉ.ಶ್ರು. 1-71-2)

ಎಂಬ ಶ್ರುತಿಯು ಈ ಅಂಶವನ್ನು ಸ್ಫುಟಪಡಿಸುತ್ತಿದೆ. ಇದಲ್ಲದೆ, ಸೃಷ್ಟಿಕಾರಣತ್ವ, ಸ್ಥಿತಿಕಾರಣತ್ವ ಮೊದಲಾದವುಗಳು ಜೀವಜಡಾತ್ಮಕ ವಿಶ್ವದಿಂದ ಪರಮಾತ್ಮನಲ್ಲಿ ಭಿನ್ನತೆ ಹಾಗೂ ಅಗಣಿತ ಮಾಹಾತ್ಮ್ಯವನ್ನು ಉಪವರ್ಣಿಸುವ ಹಿನ್ನೆಲೆಯಲ್ಲಿ ಪ್ರತ್ಯೇಕ ಲಕ್ಷಣಗಳೆಂದು ಶ್ರೀಮಧ್ವಾಚಾರ್ಯರು ನಿರೂಪಿಸಿದ್ದಾರೆ. ಈ ವಿವರಣೆಯಂತೆ ಭಗವಂತನ ಅಪರಿಮಿತ ಮಹಿಮೆಯ ಪರಿಚಯವು ಸಾಧಕನಿಗೆ ಹೆಚ್ಚು ಹೆಚ್ಚು ಗೋಚರವಾಗುವುದು.

### ಶಬ್ದಗಳು ಯಾರನ್ನು ವರ್ಣಿಸುತ್ತವೆ ?

ವೇದ ಹಾಗೂ ಉಪನಿಷತ್ತುಗಳನ್ನು ನೋಡುವಾಗ ಎಲ್ಲ ಶಬ್ದಗಳಿಂದ ಕರೆಸಿಕೊಳ್ಳಲ್ಪಡುವ ವಸ್ತು ಒಂದಿದೆ ಎಂಬುದು ಗೋಚರವಾಗದಿರದು. **'ಯೋ ದೇವಾನಾಂ ನಾಮಧಾ ಏಕ ಏವ'** (ಋ. 8-10-823), **'ಸರ್ವೇ ವೇದಾಃ ಯತ್ಪದಮಾಮನಂತಿ'** (ಕಾಠಕ. 6-1), **'ಸರ್ವೇ ವೇದಾಃ ಸರ್ವೇ ಘೋಷಾಃ'** (ಐ.ಆ. 2-1-12) ಇತ್ಯಾದಿ ಶ್ರುತಿಗಳು ಎಲ್ಲ ಶಬ್ದಗಳೂ ಒಬ್ಬನೇ ಪರದೇವತೆಯ ಮಹಿಮೆಯನ್ನು ಬಣ್ಣಿಸುತ್ತವೆ ಎಂದು ಸಾರಿದ್ದಾವೆ. ಎಲ್ಲ ಶಬ್ದಗಳಿಂದ ವಾಚ್ಯನಾದ ದೇವತೆ ಯಾರು ? ಎಂಬ ಪ್ರಶ್ನೆ ಇಲ್ಲಿ ಸಹಜವಾಗಿ ಮೂಡುವುದು. ಶ್ರೀಮಧ್ವಾಚಾರ್ಯರು ಇದರ ಬಗ್ಗೆ ತಮ್ಮದೇ ಆದ ಸುಂದರ

ವಿವರಣೆಯನ್ನು ನೀಡಿದ್ದಾರೆ. ಬ್ರಹ್ಮ-ವಿಷ್ಣು-ಮಹೇಶ್ವರರಲ್ಲಿ ವಿಷ್ಣು ನಾರಾಯಣ ಮೊದಲಾದ ಶಬ್ದಗಳಿಂದ ವಾಚ್ಯನಾದ ಲಕ್ಷ್ಮೀಪತಿಯೇ ಎಲ್ಲ ಶಬ್ದಗಳಿಂದ ಕರೆಸಿಕೊಳ್ಳಲ್ಪಡುವ ಪರಿಪೂರ್ಣ ದೇವತೆ ಎನಿಸಿದ್ದಾನೆ. ಮಹಾನಾರಾಯಣೋಪನಿಷತ್ತು **'ಯೋ ವೇದಾದೌ ಸ್ವರಃ ಪ್ರೋಕ್ತಃ'** (12-17), **'ನಾರಾಯಣಃ ಪರೋ ಜ್ಯೋತಿಃ ಆತ್ಮಾ ನಾರಾಯಣಃ ಪರಃ ನಾರಾಯಣಂ ಪರಂ ಬ್ರಹ್ಮ ತತ್ವಂ ನಾರಾಯಣಃ ಪರಃ'**, **'ಯಚ್ಚ ಕಿಂಚಿಜ್ಜಗತ್ಸರ್ವಂ ದೃಶ್ಯತೇ ಶ್ರೂಯತೇಽಪಿ ವಾ । ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ'**, **'ತದ್ವಿಷ್ಣೋಃ ಪರಮಂ ಪದಮ್'** (ಕಾ.ಉ. 7-9), **'ಮಮ ಯೋನಿರಪ್ಸು ಅಂತಃ ಸಮುದ್ರೇ'** (ಋ.ಸಂ. 10-125-5) ಇತ್ಯಾದಿ ಶ್ರುತಿಗಳನ್ನು ಗಮನಿಸಿದಾಗ ಅನಂತ ವಿಶ್ವದಲ್ಲಿ ವ್ಯಾಪ್ತನೂ, ವೇದದ ಸ್ವರ-ವರ್ಣಗಳಿಂದ ಪ್ರತಿಪಾದ್ಯನೂ ನಾರಾಯಣನೆಂದು ತಿಳಿದು ಬರುವುದು. ಮಹಾನಾರಾಯಣೋಪನಿಷತ್ತು **'ಸ ಬ್ರಹ್ಮ ಸ ಶಿವಃ ಸ ಹರಿಃ ಸೇಂದ್ರಃ ಸೋಽಕ್ಷರಃ ಪರಮಃ ಸ್ವರಾಟ್'** ಎಂಬುದಾಗಿ ಬ್ರಹ್ಮ, ಶಿವ, ಇಂದ್ರ ಮೊದಲಾದ ಶಬ್ದಗಳು ನಾರಾಯಣನನ್ನೇ ಬಣ್ಣಿಸುತ್ತವೆ ಎಂದು ಸ್ಫುಟಪಡಿಸಿದೆ. ಈ ಹಿನ್ನೆಲೆಯಲ್ಲಿ ಶ್ರೀಮಧ್ವಾಚಾರ್ಯರು **'ಬ್ರಹ್ಮಶಬ್ದಶ್ಚ ವಿಷ್ಣಾವೇವ'** (ಬ್ರ.ಸೂ.ಭಾ. 1-1-1) ಎಂದಿದ್ದಾರೆ.

ದರ್ಶನಕ್ಷೇತ್ರದಲ್ಲಿ ವಿಷ್ಣುವಿಗೆ ಸಕಲಶಬ್ದವಾಚ್ಯತ್ವವನ್ನು ಉಪವರ್ಣಿಸಿದ ಬೆರಳೆಣಿಕೆಯ ದಾರ್ಶನಿಕರು ಶ್ರೀಮಧ್ವರಿಗಿಂತ ಪೂರ್ವದಲ್ಲಿಯೂ ಇದ್ದರು. ಆದರೆ, ಪರಮಾತ್ಮನು ವಿಶ್ವದ ಅಂತರ್ಯಾಮಿಯಾಗಿರುವ ಹಿನ್ನೆಲೆಯಲ್ಲಿ ಸಕಲಶಬ್ದವಾಚ್ಯನಾಗಿರುವನು ಎಂದು ಅವರ ಪ್ರತಿಪಾದನೆಯಾಗಿತ್ತು. ಶ್ರೀಮಧ್ವಾಚಾರ್ಯರು ಈ ವಿಷಯಕ್ಕೆ ಸಂಬಂಧಿಸಿದಂತೆ ಅಪೂರ್ವವಾದ ಬೆಳಕು ನೀಡಿದ್ದಾರೆ. ಪರಮಾತ್ಮನಲ್ಲಿ ಶಬ್ದಗಳನ್ನು ಸಮನ್ವಯಮಾಡುವ ಹಿನ್ನೆಲೆ ಅವನ ಗುಣಪೂರ್ಣತ್ವದ ಅನುಸಂಧಾನವೇ ಆಗಿದೆ. ಅವನು ಎಲ್ಲ ಶಬ್ದಗಳಿಂದ ಮುಖ್ಯವೃತ್ತಿಯಿಂದ ಪ್ರತಿಪಾದ್ಯನಾದಾಗ ಮಾತ್ರವೇ ಗುಣಪರಿಪೂರ್ಣನಾಗಬಲ್ಲ. ಈ ಹಿನ್ನೆಲೆಯಲ್ಲಿ ಎಲ್ಲ ಶಬ್ದಗಳ ಸಮನ್ವಯ ಮಾಡಿ ತೋರಿಸುವ ಬಾಧ್ಯತೆ ವೈದಿಕರಿಗಿದೆ. ಉಪನಿಷತ್ತುಗಳು ವಿಶ್ವಾಮಿತ್ರ, ಗೃತ್ಸಮದ, ವಸಿಷ್ಠ, ಇಂದ್ರ, ಅಗ್ನಿ ಮೊದಲಾದ ಶಬ್ದಗಳನ್ನು ಒಡೆದು ಅವುಗಳು ವರ್ಣಿಸುವ ಅರ್ಥವು ಅಂತಿಮವಾಗಿ ನಾರಾಯಣನಲ್ಲಿ

ವಿಶ್ರಾಂತವಾಗುವುದೆಂದು ನಿರೂಪಿಸಿದ್ದಾವೆ. ಈ ಹಿನ್ನೆಲೆಯಲ್ಲಿ ವಿಷ್ಣುವು ಸಕಲಶಬ್ದವಾಚ್ಯನಾಗುವನು-

'ಮುಖ್ಯತಃ ಸರ್ವಶಬ್ದೈಶ್ಚ ವಾಚ್ಯ ಏಕೋ ಜನಾರ್ದನಃ।'

(ಸ.ಶಾ.ಸಂ. 1-5)

'ಇತ್ಯಾದ್ಯನ್ಯತ್ರ ನಿಯತೈಃ ಅಪಿ ಮುಖ್ಯತಯೋದಿತಃ।
ಶಬ್ದೈರತೋಽನಂತಗುಣೋ ಯಚ್ಛಬ್ದಾ ಯೋಗವೃತ್ತಯಃ।'

(ಸ.ಶಾ.ಸಂ. 1-7)

ಈ ಚಿಂತನೆಯನ್ನು ಗಮನಿಸಿದಾಗ ಒಂದು ಪ್ರಶ್ನೆ ಸಹಜವಾಗಿ ಜನಿಸುವುದು. ದುಃಖಿ, ಅಜ್ಞಾನಿ ಮೊದಲಾದ ದೋಷವಾಚಕಶಬ್ದಗಳನ್ನು ಪರಮಾತ್ಮನಲ್ಲಿ ಸಮನ್ವಯಿಸುವುದು ಹೇಗೆ ? ಏಕೆಂದರೆ, ನಾರಾಯಣನಲ್ಲಿ ಬಂಧನವಾಗಲೀ, ದೋಷವಾಗಲೀ ಇಲ್ಲವೆಂದು ಶ್ರುತಿಗಳ ಮಥಿತಾರ್ಥವಾಗಿದೆ. ಶ್ರೀಮಧ್ವಾಚಾರ್ಯರು ಈ ಬಗ್ಗೆ ಸ್ಫುಟವಾದ ವಿಚಾರವನ್ನು ನಿರೂಪಿಸಿದ್ದಾರೆ. ಸ್ವಾತಂತ್ರ್ಯ ಹಾಗೂ ವಸ್ತುವಿನಲ್ಲಿರುವ ಗುಣಗಳನ್ನು ನಿರೂಪಿಸಲು ಶಬ್ದಗಳ ಬಳಕೆಯಾಗುವುದು. ದೇವದತ್ತನೆಂಬ ವ್ಯಕ್ತಿಯಲ್ಲಿ ಹೆಚ್ಚಿನ ಸೌಂದರ್ಯವಿದ್ದಾಗ ಅವನಲ್ಲಿ ಸುಂದರ ಎಂಬ ಶಬ್ದವನ್ನು ಬಳಸುತ್ತೇವೆ. ಇದರಂತೆ ವ್ಯಕ್ತಿಗಳಲ್ಲಿರುವ ಗುಣಕ್ರಿಯೆಗಳನ್ನು ವರ್ಣಿಸುವ ಹಿನ್ನೆಲೆಯಲ್ಲಿ ಶಬ್ದಗಳು ಅಲ್ಲಿ ಪ್ರಯೋಗಿಸಲ್ಪಡುತ್ತವೆ. ಶ್ರೀವಿಷ್ಣುವು ಜ್ಞಾನ ಆನಂದ ಮೊದಲಾದ ಎಲ್ಲ ಅಪ್ರಾಕೃತಗುಣಗಳ ತಾಣನಾಗಿದ್ದು ಜೀವರಲ್ಲಿರುವ ಗುಣಕ್ರಿಯಾದಿಗಳಿಗೆ ಪ್ರೇರಕನಾಗಿದ್ದು, ಆಯಾ ಶಬ್ದಗಳಿಂದ ವಾಚ್ಯನಾಗುವನು. ಶಬ್ದವು ಮೊದಲು ಸೀಮಿತ ಅರ್ಥದಿಂದ ಆರಂಭಗೊಂಡು ಸೀಮೆ ಇಲ್ಲ ಅರ್ಥದ ಉಪವರ್ಣನೆಯಲ್ಲಿ ಕೊನೆಗೊಳ್ಳುತ್ತದೆ. ಇದು ನಮ್ಮ ಅನುಭವದ ಸಂಗತಿ. ಶ್ರೀಮಂತನು ಯಾರು ? ಎಂಬ ಪ್ರಶ್ನೆ ಬಂದಾಗ ನಮ್ಮ ನಡುವೆ ಇರುವ ಒಬ್ಬ ವ್ಯಕ್ತಿಯನ್ನು ಅವನ ಸಂಪತ್ತಿಯನ್ನು ಗೌರವಿಸಿ ಶ್ರೀಮಂತನೆನ್ನುತ್ತೇವೆ. ಇಡೀ ಬಡಾವಣೆಯಲ್ಲಿ ಯಾರು ಶ್ರೀಮಂತ ? ಎಂಬ ಪ್ರಶ್ನೆ ಬಂದಾಗ ಒಬ್ಬ ವ್ಯಕ್ತಿಗಿರುವ ಸ್ಥಿರ-ಚರ ಆಸ್ತಿಗಳನ್ನು ಗಮನಿಸಿ ಅವನನ್ನು ಶ್ರೀಮಂತ ಎಂದು ಕರೆಯುತ್ತೇವೆ. ಹೀಗೆ ಶ್ರೀಮಂತಿಕೆಯ ಮಟ್ಟವನ್ನು ಹೆಚ್ಚು ಹೆಚ್ಚು ಗುರುತಿಸುತ್ತಾ ಸಮಗ್ರ ಭಾರತದೇಶದಲ್ಲಿ ಯಾರ ಆಸ್ತಿಯು ಅಪಾರವಾಗಿದೆಯೋ ಅವರಲ್ಲಿ

ಶ್ರೀಮಂತ ಎಂಬ ಶಬ್ದವು ಹೆಚ್ಚು ಅನ್ವರ್ಥಕವಾಗಿ ನಿಲ್ಲುತ್ತದೆ. ಅಂತಿಮವಾಗಿ ಸಮಗ್ರ ವಿಶ್ವದಲ್ಲಿಯೇ ಯಾರ ಐಶ್ವರ್ಯವು ಅಪಾರವಾಗಿದೆಯೋ ಅಂತಹ ವ್ಯಕ್ತಿಯಲ್ಲಿ ಶಬ್ದವು ವಿಶ್ರಾಂತವಾಗುವುದು. ಈ ಹಿನ್ನೆಲೆಯಲ್ಲಿ ಅಲ್ಪಗುಣಗಳುಳ್ಳ ಜೀವರು, ಋಷಿಗಳು, ದೇವತೆಗಳು, ತಾತ್ವಿಕದೇವತೆಗಳನ್ನು ವರ್ಣಿಸುವ ಶಬ್ದಗಳು ಅಂತಿಮವಾಗಿ ಆ ಶಬ್ದ ಹೇಳುವ ಅಪಾರ ಅರ್ಥವು ಎಲ್ಲಿ ಪರಿಪೂರ್ಣವಾಗಿದೆಯೋ ಅಂತಹ ನಾರಾಯಣನಲ್ಲಿ ವಿಶ್ರಾಂತವಾಗುತ್ತದೆ. ಈ ಹಿನ್ನೆಲೆಯಲ್ಲಿ ಪರಮಾತ್ಮನು ಎಲ್ಲ ಶಬ್ದಗಳಿಂದ ಕರೆಸಿಕೊಳ್ಳಲ್ಪಡುತ್ತಾನೆ. ಶಬ್ದವು ವಸ್ತುವಿನ ಮೇಲ್ಪದರವನ್ನು ವರ್ಣಿಸುವುದಕ್ಕಿಂತ ಒಳಗಿನ ಸಾರವನ್ನು ಬೋಧಿಸುತ್ತದೆ ಎಂಬ ತತ್ವವು ಎಲ್ಲರಿಗೂ ತಿಳಿದ ಸಂಗತಿ. ಈ ಹಿನ್ನೆಲೆಯಲ್ಲಿಯೂ ಪ್ರತಿಯೊಂದು ವಸ್ತುವಿನ ಸಾರನಾದ ಪರಮಾತ್ಮನು ಎಲ್ಲ ಶಬ್ದಗಳಿಂದ ವಾಚ್ಯನಾಗುವನು.

ದೋಷಗಳನ್ನು ಹೇಳುವ ಶಬ್ದಗಳು ಭಗವಂತನ ಮಹಿಮೆಯನ್ನೇ ವರ್ಣಿಸುತ್ತವೆ. ಪರಮಾತ್ಮನು ಅಜ್ಞಾನ, ದುಃಖ ಮೊದಲಾದ ದೋಷಗಳಿಗೆ ಆಸರೆಯಲ್ಲದಿದ್ದರೂ ಇವುಗಳನ್ನು ಕೊಡುವ ಹಾಗೂ ನಿವಾರಿಸುವ ಸ್ವಾತಂತ್ರ್ಯವನ್ನು ಪಡೆದಿದ್ದಾನೆ. ಭಗವಂತನಲ್ಲಿರುವ ಸ್ವಾಮಿತ್ವವನ್ನು ಗುರುತಿಸಿ ಗೌರವಿಸಿ ದೋಷವಾಚಕಶಬ್ದಗಳು ಅವನಲ್ಲಿ ಪ್ರವೃತ್ತವಾಗುವವು. ಸ್ವಾಮಿತ್ವವೇ ಶಬ್ದದ ವಿನಿಮಯಕ್ಕೆ ಪ್ರಧಾನವಾದ ಅರ್ಹತೆ ಎನಿಸಿದೆ. ಈ ಬಗ್ಗೆ ನಾವು ಒಂದು ಉದಾಹರಣೆಯನ್ನು ಗಮನಿಸಬಹುದು. ಶ್ರೀಮಂತನೊಬ್ಬನು ತನ್ನ ಸಹಾಯಕನಿಗೆ ಒಂದು ಲಕ್ಷ ರೂ.ಗಳನ್ನು ನೀಡಿ ಅದನ್ನು ಬ್ಯಾಂಕಿಗೆ ಜಮೆ ಮಾಡಲು ಆದೇಶಿಸುತ್ತಾನೆ. ವಾಸ್ತವದಲ್ಲಿ ಆ ಮೊತ್ತವು ಸಹಾಯಕನ ಕೈಯಲ್ಲಿ ಇರುವುದಾದರೂ ನಾವೆಂದೂ ಅವನನ್ನು ಶ್ರೀಮಂತನೆಂದು ಕರೆಯಲಾರೆವು. ಯಾರದೋ ಸಂಪತ್ತನ್ನು ಕಾರಣಾಂತರದಿಂದ ತನ್ನ ಬಳಿ ಇರಿಸಿಕೊಳ್ಳುವುದೇ ಶಬ್ದದ ಬಳಕೆಗೆ ಕಾರಣವಾಗಲಾರದು. ಆ ಧನವನ್ನು ಯಾರು ಸ್ವೇಚ್ಛೆಯಂತೆ ವಿನಿಯೋಗಿಸಬಲ್ಲನೋ ಅವನನ್ನೇ ನಾವು ಧನಿಕನೆಂದು ಗೌರವಿಸುತ್ತೇವೆ. ಈ ಹಿನ್ನೆಲೆಯಲ್ಲಿ ಪರಮಾತ್ಮನಲ್ಲಿ ಅಜ್ಞಾನ, ದುಃಖ ಮೊದಲಾದ ದೋಷಗಳಿಲ್ಲದಿದ್ದರೂ ಭಕ್ತರಲ್ಲಿರುವ ಇಂತಹ ದೋಷಗಳನ್ನು ಕಳೆಯುವ ಅಹಂಕಾರಿಗಳಿಗೆ ಹೆಚ್ಚಿಸುವ ಒಡೆತನ ಅವನಲ್ಲಿ ಇದೆ ಎಂಬ ಹಿನ್ನೆಲೆಯಲ್ಲಿ ಇಂತಹ ಶಬ್ದಗಳು ಅವನಲ್ಲಿ ಪ್ರವೃತ್ತವಾಗುವವು- **'ಸ್ವಾತಂತ್ರ್ಯಂ ತದ್ಗತತ್ವಂ ಚ ಶಬ್ದವೃತ್ತೇರ್ಹಿ ಕಾರಣಮ್'** (ಬ್ರ.ಸೂ. ಅನು. 1-3, ಶ್ಲೋ. 2).

ಶ್ರೀಮಧ್ವಾಚಾರ್ಯರು ಏಳು ಬಗೆಯ ಶಬ್ದವೃತ್ತಿಗಳ ಅಪೂರ್ವ ಮಾಹಿತಿಯನ್ನು ನೀಡಿದ್ದಾರೆ. ಶ್ರೀಹರಿಯು ಮಹಾಯೋಗ, ವಿದ್ವದ್ರೂಢಿಗಳಿಂದ ಎಲ್ಲ ಶಬ್ದಗಳಿಂದಲೂ ವಾಚ್ಯನಾಗುವನು. ಅಮುಖ್ಯವೃತ್ತಿಯಿಂದ ಇತರ ವಸ್ತುಗಳು ಹಾಗೂ ಜೀವರು ಅವರವರ ಯೋಗ್ಯತೆಗೆ ತಕ್ಕಂತೆ ಆಯಾ ಶಬ್ದಗಳಿಂದ ವಾಚ್ಯರಾಗಬಲ್ಲರು. ಈ ಹಿನ್ನೆಲೆಯಲ್ಲಿ ಲೌಕಿಕ ವ್ಯವಹಾರವು ಉಪಪನ್ನವಾಗಿದೆ. ಈ ಪ್ರಮೇಯವು ಸಮಾಕರ್ಷಾಧಿಕರಣ ದಲ್ಲಿ ನಿರೂಪಿಸಲ್ಪಟ್ಟಿದೆ.

## ನಿರ್ಗುಣಶ್ರುತಿಯ ಆಂತರ್ಯ

ಶ್ರುತಿಗಳು ಅಲ್ಲಲ್ಲಿ ಪರದೇವತೆಯನ್ನು ನಿರ್ಗುಣನೆಂದು ಬಣ್ಣಿಸಿವೆ. ಪ್ರಾಕೃತವಾದ ಸತ್ತ್ವರಜಸ್ತಮೋಗುಣಗಳನ್ನು ಹೊಂದಿರದ ಕಾರಣ ಅವನು 'ನಿರ್ಗುಣ' ಎನಿಸಿದ್ದಾನೆ. ಅಪ್ರಾಕೃತವಾದ ಗುಣಗಳು ಅವನಲ್ಲಿ ಇರುವವೆಂದೇ ಶ್ರುತಿಗಳ ಆಶಯವಾಗಿದೆ- **'ಸತ್ಯಕಾಮಃ ಸತ್ಯಸಂಕಲ್ಪಃ ಸೋಽನ್ವೇಷ್ಟವ್ಯಃ ಸ ವಿಜಿಜ್ಞಾಸಿತವ್ಯಃ'** (ಛಾಂ. ಉ. 8-1-15), **'ಯಃ ಸರ್ವಜ್ಞಃ ಸ ಸರ್ವವಿತ್'** (ಆಥ. 1-10), **'ಅವಿಜಿಘಿತ್ಸಃ ಅಪಿಪಾಸಃ'** (ಛಾಂ. 8-1-5) ಇತ್ಯಾದಿ ಶ್ರುತಿಗಳು ಈ ಪ್ರಮೇಯವನ್ನು ಸಮರ್ಥಿಸುತ್ತಿವೆ. ನಿರ್ಗುಣನೆಂದು ವರ್ಣಿಸುವ ಶ್ರುತಿಗಳ ಹಿಂದೆ ಮುಂದಿನ ವಾಕ್ಯಗಳನ್ನು ಪರಿಶೀಲಿಸಿದಾಗ ಅವುಗಳಿಗೆ ಪರಮಾತ್ಮನ ಗುಣಾನುವರ್ಣನೆಯಲ್ಲಿ ತಾತ್ಪರ್ಯವಿದೆ ಎಂದು ಸ್ಫುಟವಾಗಿ ಗೋಚರವಾಗುವುದು. ಉದಾಹರಣೆಯಾಗಿ ಶ್ವೇತಾಶ್ವತರೋಪನಿಷತ್ತಿನ **'ನಿರ್ಗುಣಶ್ಚ'** (6-11) ಎಂಬ ವಾಕ್ಯವನ್ನು ಗಮನಿಸಬಹುದು. ಇದರ ಹಿಂದಿನ ಪಾದಗಳಲ್ಲಿ ಭಗವಂತನ ಮಹಿಮೆಯನ್ನು ಹೀಗೆ ಕೊಂಡಾಡಲಾಗಿದೆ- 'ಜ್ಞಃ (ಎಲ್ಲವನ್ನೂ ತಿಳಿದವನು), ಕಾಲಕಾಲಃ (ಮೃತ್ಯುವಿಗೂ ಸಂಹಾರಕನು), ಗುಣೀ (ಸಕಲಗುಣಪೂರ್ಣನು), ಸರ್ವವಿತ್ (ಆಪ್ತಕಾಮನು), ಸ ವೇತ್ತಿ ವೇದ್ಯಂ (ಅವನು ತಿಳಿಯಬೇಕಾದ ಎಲ್ಲವನ್ನೂ ತಿಳಿದಿರುವವನು), ನ ಚ ತಸ್ಯಾಸ್ತಿ ವೇತ್ತಾ (ಅವನನ್ನು ಪೂರ್ಣವಾಗಿ ಅರಿತವರು ಯಾರೂ ಇಲ್ಲ), ಸಾಕ್ಷೀ (ಎಲ್ಲವನ್ನೂ ನೇರವಾಗಿ ಕಂಡವನು), ಚೇತಾ (ಸಮಗ್ರ ವಿಶ್ವದ ಪ್ರೇರಕನು), ನಿರ್ಗುಣಶ್ಚ (ಪ್ರಾಕೃತಗುಣರಹಿತನು)'. ಮೇಲುನೋಟಕ್ಕೆ ನಿರ್ಗುಣ ಎಂಬ ಪದವು ಪರಮಾತ್ಮನನ್ನು ಗುಣರಹಿತನೆಂದು ವರ್ಣಿಸುವಂತೆ ಕಂಡರೂ ಹಿಂದೆ ಅಪಾರ ಗುಣಗಳನ್ನು ವರ್ಣಿಸುವ ಪದಗಳನ್ನು ಗಮನಿಸಿದಾಗ ನಿರ್ಗುಣ ಪದಕ್ಕೆ ಪ್ರಾಕೃತಗುಣರಹಿತನೆಂದು ಅರ್ಥವನ್ನು ವಿವರಿಸುವುದು ವೈಜ್ಞಾನಿಕವಾಗಿದೆ.

**ಆನಂತ್ಯದ ಹಿರಿಮೆ**

ಆನಂತ್ಯವನ್ನು ವೇದಾಂತಿಗಳು ಮೂರು ರೀತಿಯಾಗಿ ವರ್ಣಿಸಿದ್ದಾರೆ. ಕಾಲದ ಪರಿಧಿ ಇಲ್ಲದಿರುವುದು ಕಾಲಾನಂತ್ಯವೆನಿಸಿದೆ. ಎಲ್ಲ ದೇಶಗಳಲ್ಲಿ ಇರುವುದು ದೇಶಾನಂತ್ಯವೆನಿಸಿದೆ. ಲೆಕ್ಕವಿಲ್ಲದ ಗುಣಗಳನ್ನು ಹೊಂದಿರುವುದು ಗುಣಾನಂತ್ಯವೆನಿಸಿದೆ. ಇಂತಹ ಮೂರು ಬಗೆಯ ಆನಂತ್ಯವನ್ನು ಹೊಂದಿರುವವನು ಮಹಾವಿಷ್ಣು ಆಗಿದ್ದಾನೆ-

**'ಕಾಲಕೋಟಿವಿಹೀನತ್ವಂ ಕಾಲಾನಂತ್ಯಂ ವಿದುರ್ಬುಧಾಃ ।**
**ದೇಶಕೋಟಿವಿಹೀನತ್ವಂ ದೇಶಾನಂತ್ಯಂ ತಥೈವ ಚ ।**
**ಗುಣಾನಾಂ ಅಪ್ರಮೇಯತ್ವಂ ವಸ್ತ್ವಾನಂತ್ಯಂ ವಿದೋ ವಿದುಃ ।**
**ಆನಂತ್ಯಂ ತ್ರಿವಿಧಂ ನಿತ್ಯಂ ಹರೇರ್ನಾನ್ಯಸ್ಯ ಕಸ್ಯಚಿತ್ ॥'**

(ಭಾ.ತಾ. 3-12-2)

ಶ್ರೀಮದ್ಭಾಗವತ ಮಹಾಪುರಾಣವು ಎಣಿಕೆ ಇಲ್ಲದ ಗುಣಗಳನ್ನು ಹೊಂದಿರುವುದರಿಂದ ವಿಷ್ಣುವನ್ನು ಅನಂತನೆಂದು ಕರೆದಿರುವುದು ಮಾತ್ರವಲ್ಲದೇ, ಪ್ರತ್ಯೇಕವಾಗಿ ಒಂದೊಂದು ಗುಣವೂ ಯಾರ ಕಲ್ಪನೆಗೂ ಪೂರ್ಣವಾಗಿ ನಿಲುಕದೆಂದು ಅವನ ಮಹಿಮೆಯನ್ನು ವರ್ಣಿಸಿದೆ-

**'ಯೋಽನಂತಶಕ್ತಿರ್ಭಗವಾನನಂತೋ ಮಹದ್ಗುಣತ್ವಾದ್ ಯಮನಂತ-ಮಾಹುಃ'** (ಭಾಗ. 1-18-19)

**'ಮಯ್ಯನಂತೇ ಅನಂತಗುಣೇ ಗುಣತೋಽನಂತವಿಗ್ರಹೇ'**

(ಭಾಗ. 6-4-48)

ಈ ಪ್ರಮಾಣವಚನಗಳ ಆಧಾರದಿಂದ ಆಲೋಚನೆಗೆ ನಿಲುಕದ ಅನಂತಗುಣಗಳ ಧಾಮನೂ ಮಹಾವಿಷ್ಣುವೆಂದು ಅವನ ಸ್ವರೂಪವನ್ನು ಪರಿಚಯ ಮಾಡಿಕೊಳ್ಳಬಹುದಾಗಿದೆ.

**ಒಳಭೇದವಿಲ್ಲ**

ಶ್ರೀವಿಷ್ಣುವು ಜೀವಜಡಾತ್ಮಕ ವಿಶ್ವದಿಂದ ಅತ್ಯಂತ ಭಿನ್ನನಾದರೂ ಅವನ ಅವಯವ ಗುಣ ರೂಪಗಳಲ್ಲಿ ಭಿನ್ನತೆ ಇರುವುದಿಲ್ಲ. ಮೂಲರೂಪ ಮತ್ತು ಅವತಾರೂಪಗಳೆರಡೂ ಪರಿಪೂರ್ಣವೇ ಆಗಿರುತ್ತವೆ. ಅವುಗಳಲ್ಲಿ ಅತ್ಯಲ್ಪ ಭೇದವನ್ನು ಚಿಂತಿಸುವುದೂ ನಿರಂತರ ನರಕವಾಸದ ನೆಲೆಯಾಗಬಹುದು.

'ಮೃತ್ಯೋಃ ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ' ಎಂಬ ಉಪನಿಷತ್ತು ಪರಮಾತ್ಮನ ಮೂಲರೂಪ ಅವತಾರರೂಪಗಳಲ್ಲಿ ಗುಣಕ್ರಿಯೆಗಳಲ್ಲಿ ಭೇದವಿಲ್ಲವೆಂದು ಸಮರ್ಥಿಸುತ್ತಿದೆ. ಭೇದದ ಜೊತೆಗೆ ಭೇದಾಭೇದವನ್ನೂ ಚಿಂತಿಸಕೂಡದೆಂದು ಅಭೇದವನ್ನೇ 'ಇವ'ಶಬ್ದದ ಮೂಲಕ ಸಮರ್ಥಿಸಿರುವುದು ಗಮನಾರ್ಹವಾಗಿದೆ-

**'ಮೃತ್ಯೋಃ ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ ।'**

(ಕಾಠಕ. 2-10)

**'ತಸ್ಯ ಸರ್ವಾವತಾರೇಷು ನ ವಿಶೇಷೋಽಸ್ತಿ ಕಶ್ಚನ', 'ದೇಹದೇಹಿವಿಭೇದಶ್ಚ ನ ಪರೇ ವಿದ್ಯತೇ ಕ್ವಚಿತ್', 'ಸರ್ವೇಽವತಾರಾಃ ವ್ಯಾಪ್ತಾಶ್ಚ ಸರ್ವೇ ಸೂಕ್ಷ್ಮಾಶ್ಚ ತತ್ವತಃ । ಐಶ್ವರ್ಯಯೋಗಾತ್ ಭಗವಾನ್ ಕ್ರೀಡತ್ಯೇವ ಜನಾರ್ದನಃ'** (ಭಾಗ.ತಾ. 1-5-29).

**ಅಂಶಾವತಾರಗಳ ಎಚ್ಚರ**

ಉಪನಿಷತ್ತುಗಳು ಹಾಗೂ ಪುರಾಣಗಳು ಜೀವನನ್ನು ಪರಮಾತ್ಮನ ಅಂಶವೆಂದು ಬಣ್ಣಿಸಿವೆ. ರಾಮಕೃಷ್ಣ ಅವತಾರರೂಪಗಳ ವರ್ಣನೆಯಲ್ಲೂ ಅಂಶಶಬ್ದದ ಬಳಕೆಯಾಗಿದೆ. ಓದುಗರಿಗೆ ಇಂತಹ ಸಂದರ್ಭಗಳಲ್ಲಿ ಅಸ್ಪಷ್ಟತೆ ಸಹಜವಾಗಿದೆ. ಶ್ರೀಮಧ್ವಾಚಾರ್ಯರು ತಮ್ಮ ಗ್ರಂಥಗಳಲ್ಲಿ ಇದರ ಬಗ್ಗೆ ಸ್ಫುಟವಾದ ಬೆಳಕನ್ನು ನೀಡಿದ್ದಾರೆ. ಅಂಶಶಬ್ದವು 'ಸ್ವರೂಪಾಂಶ' 'ಭಿನ್ನಾಂಶ' ಎಂಬುದಾಗಿ ಎರಡು ವಸ್ತುಗಳನ್ನು ತಿಳಿಸುತ್ತದೆ. ಅನೇಕ ಪ್ರಮಾಣಗಳ ಹಿನ್ನೆಲೆಯಲ್ಲಿ ರಾಮಕೃಷ್ಣಾದಿಗಳು ನಾರಾಯಣನ ಅಂಶವೆಂದು ವಾಕ್ಯವನ್ನು ಗಮನಿಸಿದಲ್ಲಿ ಆ ಪ್ರಸಂಗದಲ್ಲಿ ನಾರಾಯಣ ಬೇರೆಯಲ್ಲ ರಾಮಕೃಷ್ಣರು ಬೇರೆಯಲ್ಲವೆಂದು ಅಭೇದವನ್ನೇ ಚಿಂತಿಸಬೇಕು. 'ಜೀವನು ಹರಿಯ ಅಂಶನು' ಎಂಬ ವಾಕ್ಯವನ್ನು ಕಂಡಾಗ ಜೀವನು ಶ್ರೀಹರಿಯ ಭಿನ್ನಾಂಶನೆಂದು ಅರಿಯಬೇಕು. ಜೀವನಲ್ಲಿ ಪರಮಾತ್ಮನಲ್ಲಿರುವ ಜ್ಞಾನಾನಂದಾದಿ ಗುಣಗಳಿಗೆ ಸಮಾನವಾದ ಗುಣಗಳು ಅತ್ಯಲ್ಪಪ್ರಮಾಣದಲ್ಲಿ ಇರುವುದನ್ನು ಗಮನಿಸಿ ಸಾದೃಶ್ಯದ ಮೂಲಕವಾಗಿ ಅಂಶಶಬ್ದವು ಬಳಕೆಯಾಗುತ್ತದೆ. ಜೀವ-ಪರಮಾತ್ಮರ ನಡುವೆ ಇರುವ ಅಲ್ಪಸಾದೃಶ್ಯವನ್ನು ಗೌರವಿಸುವದೇ ಶ್ರುತಿಯ ತಾತ್ಪರ್ಯವಾಗಿದೆ. ಇಂತಹ ವಾಕ್ಯಗಳಿಂದ ಜೀವರು ಬ್ರಹ್ಮನೇ ಆಗಿರುವನೆಂದು ತಿಳಿಯಬಾರದು.

**'ಸ್ವಾಂಶಶ್ಚಾಥೋ ವಿಭಿನ್ನಾಂಶ ಇತಿ ದ್ವೇಧಾಂಶ ಈಯತೇ ।**
**ಅಂಶಿನೋ ಯತ್ತು ಸಾಮರ್ಥ್ಯಂ ........ ॥'** (ಬ್ರ.ಸೂ.ಭಾ. 2-3-46)

ಇದಲ್ಲದೇ, ಅಂಶಶಬ್ದವನ್ನು 'ಆವೇಶ' ಎಂಬ ಅರ್ಥದಲ್ಲಿಯೂ ಪ್ರಯೋಗಿಸಲಾಗುವುದು. 'ಪೃಥು ಹೈಹಯ ಮೊದಲಾದವರು ವಿಷ್ಣುವಿನ ಅಂಶರು' ಎಂಬ ವಚನದ ಆಶಯವು ಅವನ ವಿಶೇಷ ಸನ್ನಿಧಾನಪಾತ್ರರೆಂದೇ ಆಗಿರುತ್ತದೆ-

**'ಪೃಥುಹೈಹಯಾದಯೋ ಜೀವಾಸ್ತೇಷ್ವಾವಿಷ್ಟೋ ಹರಿಃ ಸ್ವಯಂ ।**
**ವಿಶೇಷಾವೇಶತಸ್ತೇಷು ಸಾಕ್ಷಾದ್ ಹರ್ಯಂಶತಾವಚಃ ॥'**

(ಭಾಗ.ತಾ. 4-14-50)

**ಎಲ್ಲ ಅವಸ್ಥೆಗಳಲ್ಲೂ ನಮ್ಮೊಡನಿರುವ**

ಮಾನವ ತನ್ನ ಬದುಕಿನಲ್ಲಿ ಅನಗತ್ಯ ವ್ಯಕ್ತಿಗಳನ್ನು ತನ್ನ ಹಿತೈಷಿಗಳೆಂದು ನಂಬಿ ಮೋಸ ಹೋಗಿ ದುಃಖಿಸುತ್ತಾನೆ. ಕೆಲವೊಮ್ಮೆ ಆತ್ಮೀಯರ ವಿಯೋಗ ಅಪಾರ ದುಃಖಕ್ಕೆ ಪಾತ್ರನನ್ನಾಗಿಸುತ್ತದೆ. ತಾತ್ಕಾಲಿಕ ಸಂತೋಷವನ್ನು ನೀಡುವ ಜೀವರ ಸಂಬಂಧಕ್ಕಿಂತ ಅನಂತಕಾಲದಿಂದ ತನ್ನ ಹಿತವನ್ನು ಕಾಪಾಡುವ ಹರಿಯ ಸಂಬಂಧದ ಗರಿಷ್ಠತೆಯನ್ನು ಸಾಧಕರು ಚೆನ್ನಾಗಿ ಮನನ ಮಾಡಬೇಕಿದೆ. ಈ ಬಗ್ಗೆ ಶ್ರೀಮಧ್ವರು ನೀಡಿದ ಬೆಳಕು ಚೇತೋಹಾರಿಯಾಗಿದೆ. ಜೀವಾತ್ಮನು ಕನಸು ಹಾಗೂ ಗಾಢನಿದ್ರೆಗಳಲ್ಲಿ ತನ್ನ ದೇಹದಲ್ಲಿ ನಡೆಯುವ ಚಟುವಟಿಕೆಗಳ ಮೇಲೆ ಕಿಂಚಿತ್ತೂ ನಿಯಂತ್ರಣವನ್ನು ಹೊಂದದಿರುವುದು ಎಲ್ಲರ ಅನುಭವದ ಸಂಗತಿ. ಎರಡು ಅವಸ್ಥೆಗಳಲ್ಲಿ ನಮಗಿರದ ಒಡೆತನ, ಎಚ್ಚರದ ಸ್ಥಿತಿಯಲ್ಲಿ ಹೇಗೆ ಬಂದಿತೆಂಬುದು ಗಾಢವಾಗಿ ಚಿಂತಿಸಬೇಕಿದೆ. ಎಚ್ಚರದಲ್ಲೂ ನಮ್ಮ ಆಲೋಚನೆಗಿಂತ ಅತ್ಯಂತ ಭಿನ್ನವಾದ ರೀತಿಯಿಂದ ಕಾರ್ಯಗಳು ನಡೆಯುತ್ತಿರುವುದು ಜೀವರ ಅಸ್ವಾತಂತ್ರ್ಯದ ದ್ಯೋತಕವಾಗಿದೆ. ಸಂಸಾರಾವಸ್ಥೆಯಲ್ಲಿ ಶ್ರೀಹರಿಯು ಎಚ್ಚರದಲ್ಲಿ ವಿಶ್ವನಾಮಕನಾಗಿ ಬಲಗಣ್ಣಿನಲ್ಲಿದ್ದು ಜೀವನನ್ನು ಪ್ರೇರಿಸುವನು. ಅವನೇ ತೈಜಸನಾಗಿ ಮನಸ್ಸಿನ ಮೂಲಕ ಹಳೆಯ ಅನುಭವಗಳ ಅರಿವಿನ ಜಾಗೃತಿಯನ್ನು ಕನಸಿನ ಅವಸ್ಥೆಯಲ್ಲಿ ಕರುಣಿಸುವನು. ಗಾಢನಿದ್ರಾವಸ್ಥೆಯಲ್ಲಿ ಜೀವನಿಗೆ ಸುಖದ ಮಹಾಪೂರವನ್ನು ಹರಿಸಿ ತನ್ನ ಆಲಿಂಗನ ಮೂಲಕ

ತೃಪ್ತಿಯನ್ನು ನೀಡುವವನು ಪ್ರಾಜ್ಞರೂಪಿಯಾದ ಪರಮಾತ್ಮನಾಗಿದ್ದಾನೆ. ಈ ಮೂರು ಅವಸ್ಥೆಗಳಲ್ಲದೇ ಮುಕ್ತಿಯ ಸ್ಥಿತಿಯಲ್ಲಿಯೂ ಪರಮಾತ್ಮನ ಸಂಬಂಧ ಹಾಗೂ ನಿಯಮನಗಳು ಜೀವರಿಗೆ ಅಪರಿಹಾರ್ಯವಾಗಿವೆ. ಜೀವರ ಯೋಗ್ಯತೆಗೆ ಅನುಗುಣವಾದ ಆನಂದವನ್ನು ನೀಡಲು ಬಿಂಬರೂಪಿಯಾಗಿ ಅವನು ಅಲ್ಲಿಯೂ ಜೊತೆಗಿರುವನು. ಯಾರ ಪ್ರೇರಣೆಯಿಂದ ಅನಾದಿ ಅನಂತ ಕಾಲಗಳಿಂದ ಜೀವರ ಚಟುವಟಿಕೆಗಳು ನಡೆಯುತ್ತಿವೆಯೋ ಅಂತಹ ಬಿಂಬರೂಪಿಯಾದ ಶ್ರೀಹರಿಯೇ ಮುಂದೆಯೂ ಅನಂತಕಾಲದ ವರೆಗೆ ನಮ್ಮ ಒಡನಾಡಿಯಾಗಿ ಆನಂದದಾಯಕನಾಗಿರುವನು. ಹೀಗೆ ನಮ್ಮ ಮತ್ತು ಅವನ ನಡುವೆ ಇರುವ ಸ್ವಾಮಿ-ದಾಸಭಾವ ಸಂಬಂಧವನ್ನು ಮತ್ತು ಅವನ ನಿರ್ವ್ಯಾಜ ಕರುಣೆಯನ್ನು ಅರಿತ ಸಾಧಕನು ಅವನಲ್ಲಿ ಪ್ರೀತಿಯನ್ನು ಮಾಡಲು ಸಾಧ್ಯವಾಗುವುದು. ಈ ಹಿನ್ನೆಲೆಯಲ್ಲಿ ಬಿಂಬರೂಪಿಯಾದ ಭಗವಂತನ ಗಾಢವಾದ ನಿತ್ಯ ಸಂಬಂಧವನ್ನು ಶ್ರೀಮದಾಚಾರ್ಯರು ವಿಶ್ಲೇಷಿಸಿದ್ದಾರೆ.

## VI. ಇತರ ಪ್ರಮೇಯಗಳು

### 1. ಸಾಕ್ಷೀ

ಇಂದ್ರಿಯ -ಯುಕ್ತಿ- ಆಗಮುಗಳು 'ಅನುಪ್ರಮಾಣ'(ಜ್ಞಾನಸಾಧನ) ವೆನಿಸಿವೆ ಎಂದು ಈಗಾಗಲೇ ಅರಿತಿದ್ದೇವೆ. ಇತಿಹಾಸ ಪುರಾಣಗಳಲ್ಲಿ 'ಸಾಕ್ಷೀ' ಯನ್ನು ಪ್ರಮಾಣವೆಂದು ವ್ಯವಹರಿಸಲಾಗಿದೆ. ಇದು ಪ್ರಸಿದ್ಧವಾದ ಯಾವುದಾದರೂ ಪ್ರಮಾಣದಲ್ಲಿ ಸೇರುವುದೇ? ಅಥವಾ ಸ್ವತಂತ್ರ ಪ್ರಮಾಣವೇ? ಎಂಬ ಸಂಶಯ ಸಹಜ. ದ್ವೈತದರ್ಶನವು ಇದನ್ನು ಪ್ರತ್ಯಕ್ಷಪ್ರಮಾಣದಲ್ಲಿ ಅಂತರ್ಭಾವಗೊಳಿಸುವುದು. ದ್ವೈತದಾರ್ಶನಿಕರ ಚಿಂತನೆ ಹೀಗಿದೆ-

ಆರು ಜ್ಞಾನೇಂದ್ರಿಯಗಳು ಮತ್ತು ಸಾಕ್ಷಿಯು ಪ್ರತ್ಯಕ್ಷಕ್ಕೆ ಕಾರಣ. ಈ ಹಿನ್ನಲೆಯಲ್ಲಿ ಪ್ರತ್ಯಕ್ಷವನ್ನು ಏಳು ಬಗೆಯೆಂದು ವ್ಯವಹರಿಸಲಾಗುವುದು.

**'ಪ್ರತ್ಯಕ್ಷಂ ಸಪ್ತವಿಧಂ ಸಾಕ್ಷಿಷಡಿಂದ್ರಿಯಭೇದೇನ ।'** (ಪ್ರ.ಲ. ಪುಟ 123) ಕಣ್ಣು-ಕಿವಿ-ಮೂಗು -ನಾಲಿಗೆ-ಚರ್ಮ-ಮನಸ್ಸು ಎಂಬುದಾಗಿ ಆರು ಇಂದ್ರಿಯಗಳು ಜ್ಞಾನವನ್ನು ಹುಟ್ಟಿಸುವ ಇಂದ್ರಿಯಗಳಾಗಿದ್ದಾವೆ. ಇವು

ಆತ್ಮಸ್ವರೂಪವಲ್ಲದ ಜ್ಞಾನೇಂದ್ರಿಯಗಳು ಇವುಗಳಲ್ಲಿ ಮನಸ್ಸನ್ನು ಹೊರತುಪಡಿಸಿ ಐದು ಇಂದ್ರಿಯಗಳು ಬಾಹ್ಯೇಂದ್ರಿಯವೆನಿಸಿವೆ. ಮನಸ್ಸು ಅಂತರಿಂದ್ರಿಯವೆನಿಸಿದೆ. ಸಾಕ್ಷೀಂದ್ರಿಯವು ಆತ್ಮಸ್ವರೂಪವಾಗಿದ್ದು ಜ್ಞಾನ-ಸುಖ-ಕಾಲ-ಜ್ಞಾನಪ್ರಾಮಾಣ್ಯವನ್ನು ಗ್ರಹಿಸುತ್ತದೆ. ಒಳಗಿನ ಇಂದ್ರಿಯವಾದ ಮನಸ್ಸು ಅನಾದಿಯಾದರೂ ಸೃಷ್ಟಿಯ ಆರಂಭದಲ್ಲಿ ವೈಕಾರಿಕಾಹಂಕಾರ ಮತ್ತು ಪಂಚಭೂತಾಂಶಗಳ ಸಂಪರ್ಕದಿಂದ ಉಪಚಯ ಹೊಂದಿ ಸ್ಥೂಲತೆಯನ್ನು ಪಡೆಯುವುದು. **'ಪ್ರಕೃತಿಪರಿಣಾಮಾಹಂಕಾರ-ಪಂಚಮಹಾಭೂತಾಂಶೈಃ ಉಪಚಿತಂ ಪ್ರಾಕೃತಮಿತ್ಯುಚ್ಯತೇ'** (ಪ್ರ.ಪ., ರಾ.ಟೀ.) ಇದನ್ನೇ ಮನಸ್ಸಿನ ಸೃಷ್ಟಿ ಎಂದೂ ವ್ಯವಹರಿಸಲಾಗುವುದು. ಈ ಆರು ಜ್ಞಾನೇಂದ್ರಿಯಗಳು ಜೀವನ ಸ್ಥೂಲದೇಹದಲ್ಲಿರುವಂತೆ, ಅವನ ಸ್ವರೂಪಶರೀರದಲ್ಲೂ ಇವೆ. ಆದರೆ ಅವು ಸೂಕ್ಷ್ಮವೂ ಅಪ್ರಾಕೃತವೂ ಆಗಿವೆ. ಮುಕ್ತಿಯಲ್ಲಿ ಜಡವಾದ ಮನಸ್ಸಾಗಲೀ ಜಡವಾದ ಇತರ ಜ್ಞಾನೇಂದ್ರಿಯಗಳಾಗಲಿ ಇರುವುದಿಲ್ಲ. ಮುಕ್ತಿಯಲ್ಲಿ ಅಪ್ರಾಕೃತವಾದ ಮನಸ್ಸನ್ನು 'ಸಾಕ್ಷಿ' ಎಂದು ವ್ಯವಹರಿಸಲಾಗುವುದು. ಹೀಗೆ ಆತ್ಮಸ್ವರೂಪವಾದ ಇಂದ್ರಿಯವೇ (ಸಾಕ್ಷಿ) ಜ್ಞಾನ ಮತ್ತು ಜ್ಞಾನದ ಪ್ರಾಮಾಣ್ಯಗ್ರಾಹಕವಾಗಿದ್ದು ಪ್ರಮಾಣವೆನಿಸಿದೆ.

## ಸಾಕ್ಷಿಯ ಅನಿವಾರ್ಯತೆ

ವಿಶ್ವವನ್ನು ಸತ್ಯವೆನ್ನುವ ದಾರ್ಶನಿಕರೆಲ್ಲ ಇದರ ಅಸ್ತಿತ್ವಕ್ಕೆ ಜ್ಞಾನವೇ ಬಹುದೊಡ್ಡ ಪ್ರಮಾಣ(ದಾಖಲೆ)ವೆನ್ನುತ್ತಾರೆ. ಜ್ಞಾನ ಬಂದಿರುವ ಕಾರಣ ನಾವು ಅದನ್ನು ಆಧರಿಸಿ ವಸ್ತುವಿನ ಅಸ್ತಿತ್ವವನ್ನು ನಿರ್ಧರಿಸುತ್ತೇವೆ. ಇದರಂತೆ ಜ್ಞಾನ ಬಂದಿದೆ ಎಂಬ ಬಗ್ಗೆ ಯಾವ ದಾಖಲೆ ಇದೆ? ಜ್ಞಾನದ ಜ್ಞಾನ ಬಂದಿರುವುದೇ ಜ್ಞಾನದ ಅಸ್ತಿತ್ವದ ದಾಖಲೆ. ಈ ಜ್ಞಾನದ ಜ್ಞಾನವನ್ನು ತಾರ್ಕಿಕರು 'ಅನುವ್ಯವಸಾಯ'ಎನ್ನುವರು. ನಾವು 'ಸಾಕ್ಷಿ' ಎನ್ನುತ್ತೇವೆ.

ಈ ಜ್ಞಾನದ ಜ್ಞಾನವಾಗಲೀ ಅದರ ಪ್ರಾಮಾಣ್ಯವಾಗಲೀ ಮನಸ್ಸಿನಿಂದ ಗೃಹೀತವಾಗಲಾರದು. ಮನಸ್ಸು ಉಪರತವಾದಾಗ ಸುಷುಪ್ತಿ ಕಾಲದಲ್ಲಿ (ಗಾಢನಿದ್ರಾವಸ್ಥೆಯಲ್ಲಿ) ಆತ್ಮ-ಕಾಲ-ಸುಖಗಳ ಪ್ರಜ್ಞೆ ಇದೆ. ಎಚ್ಚತ್ತ ನಂತರದಲ್ಲಿ 'ಇಷ್ಟು ಕಾಲದ ವರೆಗೆ ಸುಖವಾಗಿ ಮಲಗಿದ್ದೆ (**ಏತಾವಂತಂ ಕಾಲಂ ಸುಖಮಹಮಸ್ವಾಪ್ಸಮ್**) ಎಂಬ ಅನುಭವದ ಹಿನ್ನಲೆಯಲ್ಲಿ ಜನಿಸುವ ಸ್ಮೃತಿಯೇ ಇದಕ್ಕೆ ಪುರಾವೆ. ಗಾಢನಿದ್ರಾವಸ್ಥೆಯಲ್ಲಿನ ಅನುಭವವನ್ನು

ದಾಖಲಿಸುವ ಇಂದ್ರಿಯವೇ -'ಸಾಕ್ಷಿ'. ಮನಸ್ಸು ಗಾಢ ನಿದ್ರೆಯಲ್ಲಿ ಉಪರತವಾದರೂ, ಸಾಕ್ಷಿಯು ಜಾಗೃತವಾಗಿದೆ. ಇದು ತನ್ನನ್ನು ಮತ್ತು ಕಾಲ-ಸುಖಗಳನ್ನು ಗ್ರಹಿಸುತ್ತದೆ. ಇಂತಹ ಆತ್ಮಸ್ವರೂಪವಾದ ಇಂದ್ರಿಯವನ್ನು (ಸಾಕ್ಷಿಯನ್ನು) ಒಪ್ಪದೇ ಗಾಢನಿದ್ರೆಯ ನಂತರದ ಅನುಸ್ಮೃತಿಯನ್ನು ಉಪಪಾದಿಸಲು ಸಾಧ್ಯವಾಗದು.

**'ಏತಾವಂತಂ ಕಾಲಂ ಸುಖಮಹಮಸ್ವಾಪ್ಸಮಿತ್ಯೌತ್ತರಿಕಾನುಸ್ಮೃತಿಸಿದ್ಧಾತ್ಮಾದಿವಿಷಯಕಸೌಷುಪ್ತಿಕಾನುಭವಃ ತಾವದಸ್ತಿ । ಸ ಚ ನ ತಾವನ್ಮನಆದೀಂದ್ರಿಯೈರ್ಭವಿತುಂ ಯುಕ್ತಃ । ತೇಷಾಮುಪರತತ್ವಾತ್ । ತಸ್ಮಾತ್ ಸಾಕ್ಷಿರೂಪ ಏವೇತಿ ಸಾಕ್ಷಿರೂಪಚೈತನ್ಯಜ್ಞಾನಸ್ಯ ಸ್ವಪ್ರಕಾಶತ್ವಸಾಧಿಕಾ ಯುಕ್ತಿರಸ್ತಿ ।'**

(ವಿ.ತ.ನಿ., ಶ್ರೀ.ಟೀ.)

ಇದಲ್ಲದೇ ಅವಿದ್ಯೆ-ಮನಸ್ಸು-ಅದರ ಪರಿಣಾಮವಾದ ಜ್ಞಾನಗಳು ಬಾಹ್ಯೇಂದ್ರಿಯಗಳಿಂದ ಉಂಟಾಗುವ ಜ್ಞಾನ ಹಾಗೂ ಸುಖ-ದುಃಖ-ಭಯ-ಅಭಯ-ಕಾಲ-ಅವ್ಯಾಕೃತಾಕಾಶಾದಿಗಳು ಸಾಕ್ಷೀಂದ್ರಿಯಗ್ರಾಹ್ಯವಾಗಿವೆ.

**'ತತ್ರ ಸ್ವರೂಪೇಂದ್ರಿಯಂ ಸಾಕ್ಷೀ ಇತ್ಯುಚ್ಯತೇ । ತಸ್ಯ ವಿಷಯಾಃ - ಆತ್ಮಸ್ವರೂಪಂ, ತದ್ಧರ್ಮಾಃ, ಅವಿದ್ಯಾ, ಮನಃ, ತದ್ವೃತ್ತಯಃ, ಬಾಹ್ಯೇಂದ್ರಿಯಜ್ಞಾನಸುಖಾದ್ಯಾಃ, ಕಾಲಃ, ಅವ್ಯಾಕೃತಾಕಾಶಶ್ಚ ಇತ್ಯಾದ್ಯಾಃ ।'** (ಪ್ರ.ಪ.)

**ಮನಸ್ಸಿಗೆ ಮಿತಿ ಇದೆ**

ಮನಸ್ಸೇ ಸುಖ-ದುಃಖ-ಜ್ಞಾನ-ಕಾಲ ಇತ್ಯಾದಿಗಳನ್ನು ಗ್ರಹಿಸುವುದೆಂದು ಒಪ್ಪಬಹುದಲ್ಲವೆ? ಸಿದ್ಧವಾದ ಮನಸ್ಸಿಗೆ ಇವುಗಳ ಗ್ರಹಣಶಕ್ತಿಯನ್ನು ಒಪ್ಪಲು ಸಾಧ್ಯವಿರುವಾಗ ಸಾಕ್ಷಿಯನ್ನೊಪ್ಪಿ ಅದಕ್ಕೇಕೆ ಈ ಹೊಣೆಗಾರಿಕೆಯನ್ನು ಒಪ್ಪಬೇಕು?

ಈ ಶಂಕೆಯ ಪರಿಹಾರ ಹೀಗಿದೆ-

ಮನಸ್ಸು ಮೊದಲಾದ ಇಂದ್ರಿಯಗಳಿಂದ ಜನಿಸುವ ಜ್ಞಾನಗಳು ಕೆಲವೊಮ್ಮೆ ಭ್ರಮರೂಪವಾಗಿರುವುದು ನಮ್ಮ ಅನುಭವದಲ್ಲಿದೆ. ಈ ಹಿನ್ನಲೆಯಲ್ಲಿ ಮನಸ್ಸಿನಿಂದ ಹುಟ್ಟಿದ ಜ್ಞಾನಗಳ ಬಗ್ಗೆ ಪ್ರಾಮಾಣ್ಯ ಸಂದೇಹವು ಸಹಜವಾಗಿದೆ. ಆದರೆ ಸುಖ-ದುಃಖ-ಆತ್ಮಸ್ವರೂಪಗಳ ಬಗ್ಗೆ ನಮಗೆಂದೂ

ಭ್ರಮೆ ಬಂದುದಿಲ್ಲ. ಇದರಿಂದ ಈ ಜ್ಞಾನಗಳು ಭ್ರಮೆ ಹುಟ್ಟಿಸುವ ಇಂದ್ರಿಯಗಳಿಂದ ಜನ್ಯವಲ್ಲವೆಂದು ನಿರ್ಧರಿಸಬಹುದಾಗಿದೆ. ಯಾವಾಗಲೂ (ನಿಯಮೇನ) ಯಥಾರ್ಥವಾಗಿ ಗ್ರಹಿಸುವ ಸ್ವರೂಪೇಂದ್ರಿಯವೇ 'ಸಾಕ್ಷಿ' ಎನಿಸಿದೆ. ಸಾಕ್ಷಿಯೂ ಅಯಥಾರ್ಥಜ್ಞಾನವನ್ನು ಹುಟ್ಟಿಸುವುದಾದರೆ ಜ್ಞಾನದಲ್ಲಿ ಪ್ರಾಮಾಣ್ಯನಿಶ್ಚಾಯಕವಾದ ಸಾಮಗ್ರಿಯೇ ಇಲ್ಲದ ಕಾರಣ ಎಲ್ಲ ಜ್ಞಾನಗಳಲ್ಲೂ ಅವಿಶ್ವಾಸ ಜನಿಸುವುದು. ಜ್ಞಾನದ ಪ್ರಾಮಾಣ್ಯನಿಶ್ಚಯಕ್ಕಾಗಿ ಸಂವಾದವನ್ನು ಅಪೇಕ್ಷಿಸಿದರೆ, ಅದರ ಪ್ರಾಮಾಣ್ಯ ನಿರ್ಧರಿಸಲು ಮತ್ತೊಂದು ಪ್ರಮಾಣದ ಅನ್ವೇಷಣೆ ನಡೆಸಬೇಕು. ಹೀಗೆ ಪರಂಪರೆಯ ಕಲ್ಪನೆಯ ಮೂಲಕ ಅನವಸ್ಥಾದೋಷ ಅಪರಿಹಾರ್ಯವಾಗುವುದು. ಈ ಹಿನ್ನಲೆಯಲ್ಲಿ ಜ್ಞಾನಗ್ರಾಹಕವಾದ ಸಾಕ್ಷೀಂದ್ರಿಯವೇ ಪ್ರಾಮಾಣ್ಯನಿಶ್ಚಾಯಕಕವೆಂದು ಅದು ನಿಯತಯಥಾರ್ಥವೆಂದೂ ಒಪ್ಪುವುದು ಅನಿವಾರ್ಯ.

'ಭ್ರಮತ್ವಮಭ್ರಮತ್ವಂ ಚ ಸರ್ವಂ ವೇದ್ಯಂ ಹಿ ಸಾಕ್ಷಿಣಾ ।
ಸ ಚೇತ್ ಸಾಕ್ಷೀ ಕ್ವಚಿದ್ ದುಷ್ಟಃ ಕಥಂ ನಿರ್ಣಯ ಈಯತೇ ॥
ವಿಶೇಷಾತ್ ಸರ್ವ ಏವೈತೇ ಸಾಕ್ಷಿಪ್ರತ್ಯಕ್ಷಗೋಚರಾಃ ।
ಊರೀಕೃತ್ಯ ಚ ತಾನ್ ಸರ್ವಾನ್ ವ್ಯವಹಾರಃ ಪ್ರವರ್ತತೇ ।
ಸಾಕ್ಷಿಣೋ ವ್ಯವಸಾಯೀ ತು ವ್ಯವಹಾರೋಽಭಿಧೀಯತೇ ॥
ತಸ್ಮಾತ್ ಸರ್ವಪ್ರಸಿದ್ಧಸ್ಯ ವ್ಯವಹಾರಸ್ಯ ಸಿದ್ಧಯೇ ।
ಸಾಕ್ಷೀ ನಿರ್ದೋಷ ಏವೈಕಃ ಸದಾಽಂಗೀಕಾರ್ಯ ಏವ ನಃ ॥'

(ಬ್ರ.ಸೂ. ಅನು. 2-3-14)

'ನಿಯಮೇನ ಸುಖಾದ್ಯೇಷು ಪ್ರಾಮಾಣ್ಯಂ ಸಾಕ್ಷಿಗೋಚರಮ್ ।
ಸ್ವಪ್ರಾಮಾಣ್ಯಂ ಸದಾ ಸಾಕ್ಷೀ ಪಶ್ಯತ್ಯೇವ ಸುನಿಶ್ಚಯಾತ್ ॥
ಜ್ಞಾನಸ್ಯ ಗ್ರಾಹಕೇಣೈವ ಸಾಕ್ಷಿಣಾ ಮಾನತಾಮಿತೇಃ ॥'

(ಬ್ರ.ಸೂ. ಅನು. 3-4-5)

'ಸಾಕ್ಷಿಣಾ ನಿಶ್ಚಿತಂ ಯತ್ರ ತತ್ಪ್ರಾಮಾಣ್ಯಂ ಸ್ವಲಕ್ಷಣಮ್ ।
ನ ಹಿ ಕಶ್ಚಿತ್ ಸುಖಾದ್ಯೇಷು ಸಂಶಯಂ ಕುರುತೇ ಜನಃ ।
ನ ಚೈವಾಖಿಲಮಾನಾನಿ ನಿಶ್ಚಿನೋತ್ಯಖಿಲೋ ಜನಃ ॥'

(ಬ್ರ.ಸೂ. ಅನು. 3-4-5)

**ಅನವಸ್ಥಾ ಅಪರಿಹಾರ್ಯ**

ಜ್ಞಾನದಲ್ಲಿ ಪ್ರಾಮಾಣ್ಯವನ್ನು ನಿರ್ಧರಿಸಲು ಯುಕ್ತಿಯನ್ನು ಆಶ್ರಯಿಸುತ್ತೇವೆ. ಅದರಿಂದ ಜ್ಞಾನದ ಪ್ರಾಮಾಣ್ಯವನ್ನು ನಿರ್ಧರಿಸಬಹುದಲ್ಲವೆ? ನಿಜ. ಆದರೆ, ಆ ಯುಕ್ತಿಯ ಪ್ರಾಮಾಣ್ಯ ಹೇಗೆ ಸಿದ್ಧವಾಯಿತು? ಆ ಯುಕ್ತಿಯ ಪ್ರಾಮಾಣ್ಯವನ್ನು ಗ್ರಹಿಸಲು ಮತ್ತೊಂದು ಯುಕ್ತಿ. ಅದರ ಪ್ರಾಮಾಣ್ಯವನ್ನು ನಿರ್ಧರಿಸಲು ಮಗದೊಂದು ಯುಕ್ತಿ. ಹೀಗೆ ಪ್ರಾಮಾಣ್ಯ ನಿರ್ಧರಿಸಲು ಕೊನೆಯಿಲ್ಲದ ಯುಕ್ತಿ ಪರಂಪರೆಯನ್ನು ಒಪ್ಪಬೇಕಾಗುವುದು. ಇದನ್ನೇ ಅನವಸ್ಥಾದೋಷವೆನ್ನುತ್ತಾರೆ. ಈ ದೋಷವನ್ನು ಪರಿಹರಿಸಿಕೊಳ್ಳಲು ಜ್ಞಾನವನ್ನು ಗ್ರಹಿಸುವ ಇಂದ್ರಿಯವೇ ಅದರ ಪ್ರಾಮಾಣ್ಯವನ್ನು ಗ್ರಹಿಸುತ್ತದೆ ಎಂದು ಅಂಗೀಕರಿಸುವುದು ಸೂಕ್ತವಾಗಿದೆ. ಯಾರಿಗೂ ತನ್ನ ಬಗ್ಗೆ, ಸುಖದ ಬಗ್ಗೆ ಸಂದೇಹ ಬಂದುದಿಲ್ಲ. ಸಾಕ್ಷಿಯಿಂದ ಬಂದ ಜ್ಞಾನದಲ್ಲಿ ನಿಶ್ಚತತೆ ಇದೆ. ಇಲ್ಲಿ ಪರಾವಲಂಬನೆ ಇಲ್ಲ. ಜ್ಞಾನವನ್ನು ಗ್ರಹಿಸುವ ಸಾಕ್ಷಿಯೇ ಜ್ಞಾನದ ಪ್ರಾಮಾಣ್ಯವನ್ನು ಗ್ರಹಿಸುತ್ತದೆ. ಅದರ ಪ್ರಾಮಾಣ್ಯ ನಿರ್ಧಾರಕ್ಕೆ ಮತ್ತೊಂದರ ಅವಶ್ಯಕತೆ ಇಲ್ಲ. ಅದು ಸ್ವತಃಪ್ರಮಾಣವೆನಿಸಿದೆ.

**'ನ ಪರೀಕ್ಷಾऽನವಸ್ಥಾ ಸ್ಯಾತ್ ಸಾಕ್ಷಿಸಿದ್ಧೇ ತ್ವಸಂಶಯಾತ್ ।**
**ಸುದೃಢೋ ನಿರ್ಣಯೋ ಯತ್ರ ಜ್ಞೇಯಂ ತತ್ಸಾಕ್ಷಿದರ್ಶನಮ್ ॥' ಇತಿ ।**
(ಬ್ರ.ಸೂ. ಅನು. 3-4-4, ಶ್ಲೋ. 142)

**'ಯತ್ ಕ್ವಚಿದ್ವ್ಯಭಿಚಾರಿ ಸ್ಯಾದ್ ದರ್ಶನಂ ಮಾನಸಂ ಹಿ ತತ್ ॥ ಇತಿ ಚ ।'** (ಬ್ರ.ಸೂ. ಅನು. 3-4-5, ಶ್ಲೋ. 143)

**ಸಂದೇಹವು ಸಂಭಾವಿತ**

ಇಲ್ಲೊಂದು ಪ್ರಶ್ನೆ ಸಹಜ. ಎಲ್ಲೆಡೆ ಸಾಕ್ಷೀಂದ್ರಿಯವು ಜ್ಞಾನವನ್ನು ಅದರ ಪ್ರಾಮಾಣ್ಯವನ್ನು ಗ್ರಹಿಸುವುದಾದರೆ, ಎಲ್ಲೂ ಸಂದೇಹ ಬರಬಾರದಲ್ಲವೆ? ಅನೇಕ ವಸ್ತುಗಳ ಸ್ವರೂಪ-ವೈಚಿತ್ರ್ಯಗಳ ಬಗ್ಗೆ ಸಂದೇಹವುಂಟಾಗಿ ವಿಮರ್ಶೆಗಳನ್ನು ನಾವು ನಡೆಸುತ್ತಲೇ ಇರುವೆವು. ಇದರಿಂದ ಎಲ್ಲೆಡೆ ಜ್ಞಾನದೊಡನೆ ಪ್ರಾಮಾಣ್ಯ ಜ್ಞಾನ ಜನಿಸುವುದಿಲ್ಲ ಎಂದು ಒಪ್ಪಬೇಕಾಗುವುದಲ್ಲವೆ?

ಇದಕ್ಕೆ ಪರಿಹಾರವನ್ನು ಹೀಗೆ ಅರಿಯಬಹುದಾಗಿದೆ. ನಮಗೆ ಸುಪರಿಚಿತರಾದ ತಾಯಿ-ತಂದೆ-ಸುಖ-ಆತ್ಮಸ್ವರೂಪ ಇತ್ಯಾದಿ ವಿಷಯಗಳಲ್ಲಿ

ಜ್ಞಾನದೊಡನೆಯೇ ಪ್ರಾಮಾಣ್ಯವು ಗೃಹೀತವಾಗುವುದು ನಮ್ಮೆಲ್ಲರ ಅನುಭವಸಿದ್ಧ. ತನ್ನ ಅರಿವು ಬಂದನಂತರವೂ ತನ್ನ ಬಗ್ಗೆ ಯಾರೂ ಸಂದೇಹ ಪಡುವುದಿಲ್ಲ. ಪರಿಚಿತವಸ್ತುಗಳ ಜ್ಞಾನ ಬಂದಾಗ ಅದರ ಪ್ರಾಮಾಣ್ಯದ ಬಗ್ಗೆ ಸಂದೇಹ ಎಂದೂ ಬರುವುದಿಲ್ಲ. ಒಂದು ಪಕ್ಷ, ಎಲ್ಲೆಡೆ ಸಂದೇಹ ಬರುವುದಾದರೆ, ನಿಷ್ಕಂಪ ಪ್ರವೃತ್ತಿಯೇ ಆಗಲಾರದು. ನಿಶ್ಚಿತವಿಷಯಗಳಲ್ಲಿರುವ ನಿಷ್ಕಂಪ ಪ್ರವೃತ್ತಿಯನ್ನು ಆಧರಿಸಿ ಅಂತಹ ಸ್ಥಳಗಳಲ್ಲಿ ಜ್ಞಾನದೊಡನೆ ಪ್ರಾಮಾಣ್ಯ ಜ್ಞಾನವೂ ಬಂದಿದೆ ಎಂದೊಪ್ಪುವುದು ಅನಿವಾರ್ಯವಾಗಿದೆ. ಅಪರಿಚಿತ ವಸ್ತುಗಳ ಬಗ್ಗೆ ಸಂದೇಹ-ಜಿಜ್ಞಾಸೆಗಳು ಸಂಭವಿಸುತ್ತವೆ. ಇಂತಹ ಪ್ರಸಂಗದಲ್ಲಿ ಬುದ್ಧಿದೋಷವನ್ನು ಪರಿಹರಿಸಲು ವಿಮರ್ಶೆ(ಪ್ರಮಾಣಾಂತರ ಸಂವಾದ ಅಥವಾ ಯುಕ್ತಿಯ ಅನುಸಂಧಾನ) ಅಪರಿಹಾರ್ಯ. ಇದರಿಂದ ಎಲ್ಲೆಡೆಯೂ ಮತ್ತೊಂದು ಪ್ರಮಾಣದಿಂದಲೇ ಪ್ರಾಮಾಣ್ಯವನ್ನು ನಿರ್ಧರಿಸಬೇಕೆಂಬ ಹಠ ಸಲ್ಲದು. ಏಕೆಂದರೆ ಎಲ್ಲ ಪ್ರಸಂಗಗಳಲ್ಲಿ ಸಂಶಯ ಬರುವುದಿಲ್ಲ. ಇಷ್ಟು ಮಾತ್ರವಲ್ಲದೇ ಪರಿಚಿತಸ್ಥಳಗಳಲ್ಲಿ ಪ್ರಶ್ನಾತೀತವಾದ ಪ್ರಾಮಾಣ್ಯಾನುಭವವು ಎಲ್ಲರಿಗೂ ಇದೆ. ಎಲ್ಲ ಕಡೆಯೂ ಸಂಶಯ-ಜಿಜ್ಞಾಸೆಗಳು ಬಾರದಿರುವುದು ಸರ್ವಾನುಭವಸಿದ್ಧ. ಇಲ್ಲವಾದರೆ ಇಂತಹ ಸಂಶಯ ಪರಂಪರೆಗೆ ಕೊನೆ ಎಲ್ಲಿ? ಹಿಂದೆ ತಿಳಿಸಿದಂತೆ ಅನವಸ್ಥೆ ಅಪರಿಹಾರ್ಯವಾದೀತು. ಆದ್ದರಿಂದ ಕೆಲವೇ ಪ್ರಸಂಗಗಳಲ್ಲಿ ಸಂದೇಹ ಬಂದಾಗ ಅನ್ವೇಷಣೆ-ವಿಮರ್ಶೆ- ಯುಕ್ತ್ಯನುಸಂಧಾನಗಳಿಂದ ಸಂಶಯವನ್ನು ಪರಿಹರಿಸಿಕೊಳ್ಳುತ್ತೇವೆ. ಇಷ್ಟರಿಂದ ಈ ಯುಕ್ತನುಸಂಧಾನವನ್ನು ಪ್ರಾಮಾಣ್ಯಕಾರಣವೆನ್ನುವಂತಿಲ್ಲ. ಇದು ಪ್ರತಿಬಂಧಕ ನಿವರ್ತಕ ಮಾತ್ರ.

**'ನ ಚೋಕ್ತಯುಕ್ತ್ಯಧೀನತ್ವಂ ಪ್ರಾಮಾಣ್ಯಸ್ಯ । ಬುದ್ಧಿದೋಷನಿರಾಸ-ಮಾತ್ರಕಾರಣತ್ವಾದ್ಯುಕ್ತೀನಾಮ್ । ಅದುಷ್ಟಬುದ್ಧೀನಾಂ ಸ್ವತ ಏವ ಸಿದ್ಧತ್ವಾಚ್ಚ ಪ್ರಾಮಾಣ್ಯಸ್ಯ ॥'** (ವಿ.ತ.ನಿ., ಪರಿ. 1)

ಮದ್ದಾನೆಯು ಗಂಭೀರವಾಗಿ ನಡೆಯುತ್ತಿರುವಾಗ ಮುಳ್ಳಿನ ಕಂತೆ ದಾರಿಯಲ್ಲಿ ಎಲ್ಲೆಡೆ ಬಿಸುಟಿರುವುದನ್ನು ಕಂಡು ಕ್ಷಣ ಕಾಲ ಹಾಗೆಯೇ ನಿಲ್ಲುತ್ತದೆ. ಮಾವುತನು ಆ ಮುಳ್ಳಿನ ಕಂತೆಯನ್ನೆಲ್ಲ ಬಿಸುಟು ದಾರಿಯನ್ನು ಹಸನುಗೊಳಿಸಿದಾಗ ಆನೆಯು ಮುಂದೆ ಚಲಿಸುತ್ತದೆ. ಮುಳ್ಳಿನ ಕಂತೆ, ಆನೆಯಲ್ಲಿರುವ ಗಮನಶಕ್ತಿಗೆ ತಡೆಯೊಡ್ಡಿದಂತೆ ದೋಷಗಳು ಪ್ರಾಮಾಣ್ಯ ನಿರ್ಧಾರಣಕ್ಕೆ ತಡೆಯಾಗಿ ನಿಲ್ಲುತ್ತವೆ.

ಯುಕ್ತಿಗಳ ಚಾಲನೆಯಿಂದ ಬುದ್ಧಿದೋಷವು ದೂರವಾದಾಗ, ಗಮನಶಕ್ತಿಯುಳ್ಳ ಮದ್ದಾನೆಯಂತಿರುವ ಸಾಕ್ಷಿಯು, ಸ್ವಯಂ ಪ್ರಾಮಾಣ್ಯಗ್ರಹಣ ಸಮರ್ಥವಾಗಿದ್ದು ಪ್ರಾಮಾಣ್ಯವನ್ನು ಗ್ರಹಿಸುತ್ತದೆ. ಇದರಿಂದ ಪ್ರಾಮಾಣ್ಯಗ್ರಹಣಕ್ಕೆ ದೋಷಾಭಾವವು ಕಾರಣವೆನ್ನುವಂತಿಲ್ಲ. ಆದ್ದರಿಂದ ಕೆಲವೇ ಪ್ರಸಂಗಗಳಲ್ಲಿ ಸಂಶಯ ಸಂಭವಿಸಬಹುದಾಗಿದೆ. ಅಲ್ಲಿ ಬುದ್ಧಿದೋಷನಿರಾಸಕ್ಕಾಗಿ ಸಂವಾದದ ಅಪೇಕ್ಷೆಯಿದೆ. ಅಂದಮಾತ್ರಕ್ಕೆ ಸಾಕ್ಷಿಯ ಪ್ರಾಮಾಣ್ಯಗ್ರಹಣ ಸ್ವಭಾವಕ್ಕೆ ಕುಂದೇನೂ ಬಾರದು.

**'ಅಯಮಭಿಸಂಧಿಃ । ಸಾಕ್ಷ್ಯೇವ ಜ್ಞಾನಂ ತತ್ಪ್ರಾಮಾಣ್ಯಂ ಚ ವಿಷಯೀ-ಕರ್ತುಂ ಕ್ಷಮಃ । ಕಿಂತು ಕಾರಣಾಂತರೋಪನಿಪಾತಜೇನ ಮಾನಸಾಽಪರಾಧೇನ ಪ್ರತಿಬದ್ಧೋ ಜ್ಞಾನಮಾತ್ರಂ ಗೃಹೀತ್ವಾ ತತ್ಪ್ರಾಮಾಣ್ಯಗ್ರಹಣಸ್ಯ ನೇಷ್ಟೇ । ಯಥಾ ಸ್ವಯಮೇವ ಗತಿಸಮರ್ಥೋಽಪಿ ಗಜೋ ಗೋಕ್ಷುರಕಾದಿನಾ ಪ್ರತಿಬದ್ಧೋ ನ ಚಲಿತುಂ ಕ್ಷಮತೇ । ತತ್ರ ತು ಯುಕ್ತ್ಯನುಸಂಧಾನಲಕ್ಷಣಪರೀಕ್ಷಾವಸರಃ । ಸಾ ಚ ಬುದ್ಧಿದೋಷಮಾತ್ರಂ ನಿರಸ್ಯತಿ । ತಸ್ಮಿನ್ನಿರಸ್ತೇ ಸಾಕ್ಷೀ ಸ್ವಮಹಿಮ್ನೈವ ಪ್ರಾಮಾಣ್ಯಂ ಗೋಚರಯತಿ । ಯಥಾ ಗೋಕ್ಷುರಕಾದ್ಯಪಸರಣೇ ಸ್ವಯಮೇವ ಗಜೋ ಗಚ್ಛತಿ । ತತಃ ಪ್ರಾಚೀನೋ ಯುಕ್ತ್ಯುಪನ್ಯಾಸಃ ಸಾಕ್ಷಿಣಃ ಪ್ರಾಮಾಣ್ಯ-ಗ್ರಹಣಪ್ರತಿಬಂಧಕಬುದ್ಧಿದೋಷನಿರಾಸಾರ್ಥಮೇವ ಕೃತೋ ನ ತು ಪ್ರಾಮಾಣ್ಯಜ್ಞಾನಾರ್ಥಮಿತಿ ನ ಪೂರ್ವೋತ್ತರವಿರೋಧ ಇತಿ ।'** (ವಿ.ತ.ನಿ.)

**ಭ್ರಮೆ ಹೇಗೆ?**

ಚಿಪ್ಪನ್ನು ಕಂಡು ಬೆಳ್ಳಿ ಎಂದು ತಿಳಿಯುತ್ತೇವೆ ಇಂತಹ ಭ್ರಮೆ ನೂರಾರು. ಇಂತಹ ಸ್ಥಳಗಳಲ್ಲಿ ಜ್ಞಾನವನ್ನು ಗ್ರಹಿಸುವ ಸಾಕ್ಷಿಯು ಪ್ರಾಮಾಣ್ಯವನ್ನು ಗ್ರಹಿಸುವುದಲ್ಲದೆ? ಭ್ರಮಸ್ಥಳದಲ್ಲಿ ಮಾತ್ರ ಸಾಕ್ಷಿಯು ಜ್ಞಾನವನ್ನು ಗ್ರಹಿಸಿ ಪ್ರಾಮಾಣ್ಯವನ್ನು ಗ್ರಹಿಸಿಲ್ಲವೆನ್ನುವುದಾದರೆ, ನಿಷ್ಕಂಪ ಪ್ರವೃತ್ತಿ ಹೇಗಾಯಿತು? ನಿರ್ಧಾರಿತ ಪ್ರವೃತ್ತಿಗಳ ಹಿಂದೆ ಪ್ರಾಮಾಣ್ಯನಿಶ್ಚಯ ಅನಿವಾರ್ಯವಲ್ಲವೆ? **(ನಿಷ್ಕಂಪ ಪ್ರವೃತ್ತಿತ್ವಾವಚ್ಛಿನ್ನಂ ಪ್ರತಿ ಪ್ರಾಮಾಣ್ಯಾಧ್ಯವಸಾಯಃ ಕಾರಣಮ್)**

ಈ ಶಂಕೆಯ ಪರಿಹಾರವನ್ನು ಹೀಗೆ ಕಾಣಬಹುದಾಗಿದೆ- ಮನಸ್ಸು ಸ್ವಭಾವತಃ ಚಪಲವೂ ಚಂಚಲವೂ ಆಗಿದೆ. ಅದು ಜ್ಞಾನ ಹುಟ್ಟಿದ ಕೂಡಲೇ ಬೆಳ್ಳಿ ಮೊದಲಾದವುಗಳಲ್ಲಿ ಆ ಜ್ಞಾನದಲ್ಲಿ ಪ್ರಾಮಾಣ್ಯ ಗ್ರಹಿಸುವಲ್ಲಿ

ಕಾತರವಾಗಿರುತ್ತದೆ. ಇದು ಮನಸ್ಸಿನ ದೌರ್ಬಲ್ಯ. ವಿಚಾರಮಾಡದೆಯೇ ಪ್ರವೃತ್ತಿ ಮಾಡುವುದು ಅದರ ಸ್ವಭಾವ. ಆದ್ದರಿಂದ ಅಪರಿಚಿತ ಸ್ಥಳಗಳಲ್ಲಿ ವೇಗಶಾಲಿಯಾದ ಮನಸ್ಸು ಪ್ರವೃತ್ತಿ ಮಾಡಿ ಜ್ಞಾನದ ಪ್ರಾಮಾಣ್ಯಗಳನ್ನು ಗ್ರಹಿಸುತ್ತದೆ.

**'ವಿಪರ್ಯೇಽಪಿ ದೂರತ್ವಪೂರ್ವದೋಷಾನುದರ್ಶನಾತ್ ।**
**ಉದಾಸ್ತೇ ಚತುರಃ ಸಾಕ್ಷೀ ಪ್ರಾಮಾಣ್ಯಗ್ರಹಣೇ ಕಿಲ ।**
**ತದಾ ರಾಗಾದಿದೋಷೇಣ ಕಲುಷಂ ಚಂಚಲಂ ಮನಃ ।**
**ಗೃಹ್ಣಾತಿ ತತ್ರ ಪ್ರಾಮಾಣ್ಯಮರ್ಥಗ್ರಹಣಕಾತರಮ್ ॥'**

(ಯುಕ್ತಿ.ಮ., ಗು.ಸೌ. ಶ್ಲೋ. 316-317)

ಅನಂತರ ಪರೀಕ್ಷಿಸಿ ನೋಡಿದಾಗ ಸತ್ಯದ ಎಚ್ಚರ ಮೂಡುವುದು. ಶುಕ್ತಿಯು ರಜತದಂತೆ ಕಂಡಿತು. ಇಲ್ಲಿ ವಾಸ್ತವದಲ್ಲಿ ರಜತವಿಲ್ಲ ಎಂಬ ಜ್ಞಾನೋದಯವಾಗುವುದು. ಇಂತಹ ಪ್ರಸಂಗಗಳಲ್ಲಿ (ಭ್ರಮಸ್ಥಳದಲ್ಲಿ) ಮನಸ್ಸೇ ಪ್ರಾಮಾಣ್ಯವನ್ನು ಗ್ರಹಿಸಿರುವುದು. ಸಾಕ್ಷಿಯು, ದೂರದಲ್ಲಿರುವಿಕೆ ಅಥವಾ ಅತಿಸಮೀಪದಲ್ಲಿರುವಿಕೆ ಅಥವಾ ಅಪರಿಚಿತವಾಗಿರುವುದು ಎಂಬಿತ್ಯಾದಿ ದೋಷಗಳನ್ನು ಗಮನಿಸಿ ಅಂತಹ ಪ್ರಸಂಗಗಳಲ್ಲಿ ಜ್ಞಾನವನ್ನಷ್ಟೆ ಗ್ರಹಿಸಿ ಸುಮ್ಮನಾಗುವುದು. ಪ್ರಾಮಾಣ್ಯವನ್ನು ಕೂಡಲೇ ನಿರ್ಧರಿಸುವುದಿಲ್ಲ. ಸಾಕ್ಷಿಯು, ಈ ಜ್ಞಾನವು ದೋಷರಹಿತವಾದರೆ ಪ್ರಮಾಣ ಎಂದು, ದೋಷಸಹಿತವಾದರೆ ಅಪ್ರಮಾಣ ಎಂದೇ ಗ್ರಹಿಸುತ್ತದೆ. ಏಕೆಂದರೆ ಅನಾದಿ ಸಂಸಾರದಲ್ಲಿ ಇಂದ್ರಿಯಗಳು ಯಥಾರ್ಥ ಹಾಗೂ ಅಯಥಾರ್ಥಜ್ಞಾನ ಗಳೆರಡಕ್ಕೂ ಜನ್ಮ ನೀಡುವುದನ್ನು ಸಾಕ್ಷಿ ಗಮನಿಸಿದೆ. ಆದ್ದರಿಂದ ಅಪರಿಚಿತ ಸ್ಥಳ ಮತ್ತು ವಿಷಯಗಳಲ್ಲಿ ಪ್ರಾಮಾಣ್ಯ ಗ್ರಹಿಸದೇ ಮೌನ ತಾಳುತ್ತದೆ-

**'ನ ಸಾಕ್ಷೀ ಜ್ಞಾನಂ ಗೃಹ್ಣನ್ ಪ್ರಮಾಣಮೇವೈತದಿತಿ ಗೃಹ್ಣಾತಿ । ಕಿಂತರ್ಹ್ಯದೋಷಂ ಚೇತ್ ಪ್ರಮಾಣಂ ಸದೋಷಮಪ್ರಮಾಣಮಿತಿ ವ್ಯವಸ್ಥಯಾ । ಯದ್ವಾ ತ್ವರ್ಥಿತ್ವೇನ ಪ್ರಾಮಾಣ್ಯಂ ನಿರ್ದಿಧಾರಯಿಷಿತಂ ತದಾ ಸಜಾತೀಯವಿಜಾತೀಯಸಂವಾದವಿಸಂವಾದಭಾವಾಭಾವಲಕ್ಷಣಯಾ ಪರೀಕ್ಷಯಾ ದೋಷಾಭಾವಂ ನಿಶ್ಚಿತ್ಯ ಪ್ರಾಮಾಣ್ಯಮವಧಾರಯತಿ ದೋಷದರ್ಶನೇ ತ್ವಪ್ರಾಮಾಣ್ಯಮ್ ॥'** (ಬ್ರ.ಸೂ. ಅನು. ಸುಧಾ 1-4-6))

ಸಂದಿಗ್ಧಪ್ರಸಂಗದಲ್ಲಿ ಪರೀಕ್ಷೆ(ಸಂವಾದ)ಯನ್ನು ಆಧರಿಸಿ ಪ್ರಾಮಾಣ್ಯ

ವನ್ನು ನಿರ್ಧರಿಸುವುದು. ಹಾಗಾದರೆ ಪರೀಕ್ಷೆಯ ಅವಿಶ್ರಾಂತ ಪರಂಪರೆಯ ಕಲ್ಪನೆಯ ಮೂಲಕ ಇಲ್ಲೂ ಅನವಸ್ಥಾಬರಬಹುದಲ್ಲವೆ?

ಅನವಸ್ಥಾ ಬರಲಾರದು. ಒಂದು ಉದಾಹರಣೆ ಗಮನಿಸಿ - ಓರ್ವನು ಬಾಯಾರಿಕೆಯಿಂದ ಬಳಲಿದಾಗ ದೂರದಲ್ಲಿ ನೀರನ್ನು ಕಾಣುತ್ತಾನೆ. ಆದರೂ ಆಗಲೂ ಸಂಶಯ ಬರಬಹುದು. ಇದು ನೀರೋ? ಮರೀಚಿಕೆಯೋ? ಗೆಳೆಯನೂ ಅದನ್ನು ನೀರೆಂದು ಸಾರುತ್ತಾನೆ. ಆಗಲೂ ಸಂಶಯ ಇರಬಹುದು. ಅನಂತರ ಜಲಾಶಯದ ಹತ್ತಿರ ಬರುತ್ತಾನೆ. ತಾನೇ ನೀರನ್ನು ಕಾಣುತ್ತಾನೆ. ಆಗಲೂ, ದುರ್ಯೋಧನ ನೆಲವನ್ನೇ ಜಲವಾಗಿ ಕಂಡಂತೆ ಇದು ಭ್ರಾಂತಿ ಏಕಾಗಿರಬಾರದು? ಎಂಬ ಸಂಶಯ ಬರಬಹುದು. ಜಲಾಶಯದಲ್ಲಿ ಇಳಿಯುತ್ತಾನೆ. ತಂಪಿನ ಅನುಭವ ಪಡೆಯುತ್ತಾನೆ. ಅನಂತರ ನೀರು ಕುಡಿದು ಬಾಯರಿಕೆಯ ಬಳಲಿಕೆಯಿಂದ ಬಿಡುಗಡೆ ಪಡೆದು ಆನಂದ ಪಡುತ್ತಾನೆ. ಅಂತೂ ಒಂದೆಡೆ ಸಂಶಯ-ಪರೀಕ್ಷೆಗಳಿಗೆ ವಿಶ್ರಾಂತಿ ದೊರಕಲೇ ಬೇಕು. ಯಾವಾಗ ನೀರನ್ನು ಕುಡಿದು ಸುಖವನ್ನು ಅನುಭವಿಸಿದನೋ ಇದರ ಪ್ರಾಮಾಣ್ಯವನ್ನು ನಿರ್ಧರಿಸಲು ಇಲ್ಲಿ ಮತ್ತೊಂದು ಪ್ರಮಾಣದ ಅನ್ವೇಷಣೆಯ ಅಗತ್ಯವಿಲ್ಲ. ಸಾಕ್ಷಿಯಿಂದ ಸುಖವು ಗೃಹೀತವಾದ ನಂತರ ಮತ್ತೆ ಸಂಶಯ ಜನಿಸದು. ಸಾಕ್ಷಿಯು ಸ್ವತಃ ಪ್ರಮಾಣವಾಗಿದೆ. ಇದರ ಪ್ರಾಮಾಣ್ಯ ನಿರ್ಧಾರಣೆಗಾಗಿ ಮತ್ತೊಂದು ಪ್ರಮಾಣದ ಅನ್ವೇಷಣೆ ಅನಗತ್ಯ-

**'ಸ್ಯಾದಿಯಂ ಅನವಸ್ಥಾ ಯದಿ ಸರ್ವತ್ರ ಪರೀಕ್ಷಾಪೇಕ್ಷಾ ಸ್ಯಾತ್ ನ ಚೈವಂ ಸಂದಿಗ್ಧೇ ಖಲ್ವರ್ಥೇ ಪರೀಕ್ಷಾಪೇಕ್ಷ್ಯತೇ । ನ ತ್ವಸಂದಿಗ್ಧೇ । ಸಂಶಯಶ್ಚ ಮನೋವೃತ್ತಿವಿಷಯೇ ಪಾನೀಯಾದೌ ಭವತಿ ನ ಪುನಃ ಸಾಕ್ಷಿಸಿದ್ಧೇ ಸುಖಾದೌ। ಅತಸ್ತಾವದೇವ ಪರೀಕ್ಷಾ ಯಾವತ್ ಸಾಕ್ಷಿಗೃಹೀತೇಷು ಸುಖಾದಿಷ್ವವತಾರ ಇತಿ ಕುತೋಽನವಸ್ಥಾ ಇತಿ ।'** (ಬ್ರ.ಸೂ., ಅನು., ಸುಧಾ 3-45)

### ಅಪ್ರಾಮಾಣ್ಯವು ಸಾಕ್ಷಿಗ್ರಾಹ್ಯವೆ?

ಸಾಕ್ಷಿಯು ಜ್ಞಾನದ ಪ್ರಾಮಾಣ್ಯವನ್ನು ಮಾತ್ರವೇ ಗ್ರಹಿಸುತ್ತದೆ ಎಂದು ತಿಳಿದೆವು. ಹಾಗಾದರೆ ಬೌದ್ಧ-ಜೈನರ ಚಿಂತನೆಗಳನ್ನು ಯಥಾರ್ಥವೆಂದೆ ಗ್ರಹಿಸುವುದೆ? ಆ ವಾಙ್ಮಯದಿಂದ ಬರುವ ಜ್ಞಾನವನ್ನು ಅಪ್ರಮಾಣವೆಂದು ಸಾಕ್ಷಿ ಗ್ರಹಿಸಿದರೆ, 'ಪ್ರಾಮಾಣ್ಯಗ್ರಹಣಸ್ವಭಾವ ಸಾಕ್ಷಿಗಿದೆ' ಎಂಬ ನಿಯಮವನ್ನು ತೊರೆದಂತಾಗುವುದು. ಸಾಕ್ಷಿಯು ಬೌದ್ಧಾಗಮಗಳಿಂದ

ಬರುವ ಜ್ಞಾನವನ್ನು ಪ್ರಮಾಣವೆಂದೇ ತಿಳಿಯ್ಸುವುದಾದರೆ ಅದೂ ಯಥಾರ್ಥವೆಂದು ಒಪ್ಪಬೇಕಾಗುವುದು. ಆಗ ಬೌದ್ಧದರ್ಶನ ನಿರಾಸವೇ ಔಚಿತ್ಯ ಹೀನವಾಗುವುದು.

ಈ ಸಂದೇಹದ ಪರಿಹಾರವನ್ನು ಹೀಗೆ ತಿಳಿಯಬಹುದಾಗಿದೆ- ಸಾಕ್ಷಿಯು ಬೌದ್ಧ-ಜೈನಾದಿ ಆಗಮಗಳಿಂದ ಬರುವ ವಿಜ್ಞಾನವನ್ನು ಅಪ್ರಮಾಣವೆಂದೇ ಗ್ರಹಿಸುತ್ತದೆ. ಆದರೆ, ಕಡ್ಡಾಯವಾಗಿ ವಿಸಂವಾದ(ದೋಷಗಳನ್ನು) ಆಧರಿಸಿ ಅಪ್ರಮಾಣವೆಂದು ತೀರ್ಮಾನಿಸುತ್ತದೆ. ಅಪ್ರಾಮಾಣ್ಯವನ್ನು ನಿರ್ಧರಿಸುವಾಗ ಅದು ಕಡ್ಡಾಯವಾಗಿ ವಿಸಂವಾದ (ದೋಷಗಳ ಅಸ್ತಿತ್ವ)ವನ್ನು ಅವಲಂಬಿಸುತ್ತದೆ. ಜ್ಞಾನಗ್ರಾಹಕಕ್ಕಿಂತ ಭಿನ್ನವಾದ ಸಾಮಗ್ರಿಯಿಂದ ಅಪ್ರಾಮಾಣ್ಯವು ಸಾಕ್ಷಿಯಿಂದ ಗೃಹೀತವಾಗಿರುವ ಕಾರಣ 'ಅಪ್ರಾಮಾಣ್ಯಂ ಪರತಃ' ಎಂದು ಅಂಗೀಕರಿಸಲಾಗಿದೆ. ಆದರೆ ಜ್ಞಾನದ ಪ್ರಾಮಾಣ್ಯವನ್ನು ನಿರ್ಧರಿಸುವಲ್ಲಿ ಸಾಕ್ಷಿಗೆ ಇನ್ನೊಂದು ಪ್ರಮಾಣದ (ಸಂವಾದದ) ಅನಿವಾರ್ಯತೆ ಇಲ್ಲ. ಪ್ರಾಮಾಣ್ಯಗ್ರಹಣದಲ್ಲಿ ಸಾಕ್ಷಿಗೆ ಇರುವ ಸಹಜ ಶಕ್ತಿಯನ್ನು ಗುರುತಿಸಿ **'ಪ್ರಾಮಾಣ್ಯಂ ಸ್ವತಃ'** ಎಂದು ಅಂಗೀಕರಿಸಲಾಗಿದೆ. ಈ ಹಿನ್ನಲೆಯಲ್ಲಿ ಪ್ರಾಮಾಣ್ಯ-ಅಪ್ರಮಾಣ್ಯಗಳೆರಡೂ ಸಾಕ್ಷೀಂದ್ರಿಯಗ್ರಾಹ್ಯವಾದರೂ ಪ್ರಾಮಾಣ್ಯಗ್ರಹಣದ ಶಕ್ತಿ ನೈಸರ್ಗಿಕ ಹಾಗೂ ಅಪ್ರಾಮಾಣ್ಯಗ್ರಹಣ ಶಕ್ತಿಯು ಆಹಿತ (ವಿಸಂವಾದಸಾಪೇಕ್ಷ) ಎಂದು ಅಂಗೀಕರಿಸಲಾಗಿದೆ. ಇದಿಷ್ಟು ಸಾಕ್ಷಿಯ ಬಗ್ಗೆ ತಿಳಿಯಬೇಕಾದ ಸಂಕ್ಷಿಪ್ತ ವಿವರ-

**'ದುಷ್ಟಬುದ್ಧೀನಾಮೇವಾಪ್ರಾಮಾಣ್ಯಾಶಂಕೇತಿ**
**ಪರತೋಽಪ್ರಾಮಾಣ್ಯಮ್ ।**
**ಪ್ರಾಮಾಣ್ಯಂ ಚ ಸ್ವತ ಏವೇತಿ ಸಿದ್ಧಮ್'** (ವಿ.ತ.ನಿ.)

## 2. ವಾಯುಜೀವೋತ್ತಮ

ಸಂಸಾರಸಾಗರವನ್ನು ದಾಟಲು ಸಿರಿಯರಸನ ಸಾಕ್ಷಾತ್ಕಾರವೇ ಪ್ರಧಾನ ಸಾಧನ ಎನ್ನುತ್ತದೆ ವೇದಾಂತ. ಎಲ್ಲಿ ಕಾಣಬೇಕು ಹರಿಯನ್ನು? ಅವನ ಮನೆ ಯಾವುದು? ಆಥರ್ವಣೋಪನಿಷತ್ತು ಮಾರ್ಮಿಕವಾಗಿ ಸಂದೇಶಿಸುತ್ತದೆ- 'ಮುಖ್ಯಪ್ರಾಣನೇ ಹರಿಯ ಮನೆ' , **'ಪರಮಂ ಬ್ರಹ್ಮಧಾಮ'** (ಮುಂಡಕ 4.1). ಹರಿ ಎಲ್ಲೆಡೆ ವ್ಯಾಪ್ತನಾದರೂ ಅವನ ಸನ್ನಿಧಾನ (ವಿಶೇಷಮಹಿಮೆ)

**ಕಕ್ಷ್ಯ-30**

108 ಗಂಧರ್ವರನ್ನು ಹೊರತು ಪಡಿಸಿ ಉಳಿದೆಲ್ಲ ಗಂಧರ್ವರು ಚಿರಪಿತೃಗಳಿಗಿಂತ ಶತಾವರರು.

**ಕಕ್ಷ್ಯ- 31**

ದೇವ ಗಂಧರ್ವರಿಗಿಂತ ಮನುಷ್ಯ ಗಂಧರ್ವರು ಶತಾವರರು. ಮಧ್ಯವರ್ತಿಗಳ ಮೂಲಕ ದೇವತೆಗಳ ಆದೇಶವನ್ನು ಪಡೆದು ಅವರ ಸೇವೆ ನಡೆಸುವವರು ಮನುಷ್ಯ ಗಂಧರ್ವರು.

**ಕಕ್ಷ್ಯ- 32**

ಮನುಷ್ಯ ಗಂಧರ್ವರಿಗಿಂತ, ಹಿಂದೆ ತಿಳಿಸಿದ ಕರ್ಮಜದೇವತಾ ಕಕ್ಷೆಯಲ್ಲಿ ಸೇರಿದ ಕಾರ್ತವೀರ್ಯಾದಿ ರಾಜರನ್ನು ಹೊರತುಪಡಿಸಿ ಉಳಿದ ರಾಜರೆಲ್ಲ ಶತಾವರರು.

**ಕಕ್ಷ್ಯ 33**

ರಾಜರಿಗಿಂತ ಮನುಷ್ಯೋತ್ತಮರು ಶತಗುಣಾವರರು.

## ದೈತ್ಯತಾರತಮ್ಯ

ಮುಕ್ತಿಯೋಗ್ಯರ ತಾರತಮ್ಯವನ್ನು ತಿಳಿದಂತೆ ತಮೋಯೋಗ್ಯರಾದ ದೈತ್ಯರ ತಾರತಮ್ಯವನ್ನು ಅವಶ್ಯವಾಗಿ ತಿಳಿಯಬೇಕು. ಇದನ್ನು ಗರುಡಪುರಾಣವು ನಿರೂಪಿಸಿದೆ. ಹರಿಕಥಾಮೃತಸಾರದಲ್ಲಿ ಇದರ ವಿವರ ಇದೆ. ಸಣ್ಣಪುಟ್ಟ ವ್ಯತ್ಯಾಸಗಳೊಂದಿಗೆ ಇದರ ಸಾರವನ್ನು ಹೀಗೆ ಸಂಗ್ರಹಿಸಬಹುದು-

### ದೈತ್ಯತಾರತಮ್ಯ

ಮೂಲರೂಪ

| | | | |
|---|---|---|---|
| 1. | ಕಲಿ. | ದುರ್ಯೋಧನ | ಅನಂತದೋಷಾಕರ |
| 2. | ಅಲಕ್ಷ್ಮಿ | ಮಂಥರಾ/ ಭಾನುಮತಿ | ಶತಗುಣನ್ಯೂನಳು |
| 3. | ವಿಪ್ರಚಿತ್ತಿ+ | ಜರಾಸಂಧ | ಶತಗುಣನ್ಯೂನ |
| | ನರಕಾಸುರ | ನರಕಾಸುರ | ,, |
| 4. | ಕಾಲನೇಮಿ+ ವಿಕರ್ಣ | ಕಂಸ | ಶತಗುಣನ್ಯೂನ |
| 5. | ಮಧು-ಕೈಟಭರು | ಹಂಸ-ಡಿಭಿಕರು | ಪಂಚಗುಣಾವರರು |

| | | | |
|---|---|---|---|
| 6. | ಹಿರಣ್ಯಕಶಿಪು | ಹಿರಣ್ಯಕಶಿಪು | ಶತಗುಣಾವರ |
| 7. | ಹಿರಣ್ಯಾಕ್ಷ+ ಮಣಿಮಾನ್ | | ತ್ರಿಗುಣಹೀನರು |
| 8. | ಬಕಾಸುರ | | ಕಿಂಚಿದೂನ |
| 9. | ತಾರಕಾಸುರ | | 20 ಗುಣ ನ್ಯೂನ |
| 10. | ಶಂಬರಾಸುರ+ ಸಾಲ್ವ | | ಷಡ್ಗುಣನ್ಯೂನ |
| 11. | ಹಿಡಿಂಬ+ ಬಾಣಾಸುರ + ದ್ವಾಪರ | | ತ್ರಿಗುಣನ್ಯೂನ |
| 12. | ನಮುಚಿ + ವಾತಾಪಿ + ಇಲ್ವಲ | | ಶತಾವರರು |
| 13. | ಧೇನುಕ | | ತ್ರಿಗುಣಹೀನ |
| 14. | ಕೇಶೀ + ಲವಣಾಸುರ | | ಕಿಂಚಿದಧಮ |
| 15. | ಲವಣಾಸುರ | | ಪೂರ್ವೋಕ್ತರಿಗಿಂತ ದಶಗುಣಾಧಮ |
| 16. | ಅರಿಷ್ಟಾಸುರ | | ಪಂಚಗುಣಹೀನ |
| 17. | ಹಂಸಾಸುರ+ ಕಾಲಕೇಯ+ ಪೌಂಡ್ರಕಾಸುರ | ವೇನ | ನವಗುಣಾವರ |
| 18. | ಕುಭಾಂಡ ಕೂಪಕರ್ಣ | | ದಶಗುಣಾಧಮರು |

***

## 'ಮಧುರೇಣ ಸಮಾಪಯೇತ್' ಎಂಬ ನ್ಯಾಯದಂತೆ ಕಕ್ಷ್ಯಾತಾರತಮ್ಯದ ವಿವರ ಮನನ ಮಾಡೋಣ

| | | |
|---|---|---|
| 1. | ಶ್ರೀಮನ್ನಾರಾಯಣ | ಅನಂತಗುಣಪೂರ್ಣ |
| 2. | ಶ್ರೀ ಮಹಾಲಕುಮಿದೇವಿ | ಅನಂತಾನಂತಗುಣಕಡಿಮೆ |
| 3. | ಬ್ರಹ್ಮದೇವ - ವಾಯುದೇವ | ಕೋಟಿ ಗುಣ ಕಡಿಮೆ |
| 4. | ಸರಸ್ವತೀದೇವಿ - ಭಾರತೀದೇವಿ | 100 |
| 5. | ಗರುಡದೇವ - ಶೇಷದೇವ - ರುದ್ರದೇವ | 100 |
| 6. | ಜಾಂಬವತೀ - ಕಾಳಿಂದೀ-ನೀಲಾ-ಭದ್ರಾ-ಮಿತ್ರವಿಂದಾ-ಲಕ್ಷಣಾ | 5 |
| 7. | ಸೌಪರ್ಣಿದೇವಿ-ವಾರುಣಿದೇವಿ-ಪಾರ್ವತಿದೇವಿ | 2 |
| 8. | ಇಂದ್ರದೇವ - ಕಾಮದೇವ | 10 |
| 9. | ಅಹಂಕಾರಿಕ ಪ್ರಾಣದೇವ | 10 |
| 10. | ಸ್ವಾಯಂಭುವಮನು - ದಕ್ಷಪ್ರಜಾಪತಿ - ಬೃಹಸ್ಪತಿ- ಅನಿರುದ್ಧ-ಶಚಿದೇವಿ- ರತಿದೇವಿ | 10 |
| 11. | ಪ್ರವಾಹ ವಾಯುದೇವ | 5 |

| | |
|---|---|
| 12. ಸೂರ್ಯ-ಚಂದ್ರ-ಯಮ-ಶತರೂಪಾದೇವಿ | 2 |
| 13. ವರುಣದೇವ | 3/8 |
| 14. ನಾರದಮಹರ್ಷಿ | ಕಿಂಚಿದವರ |
| 15. ಅಗ್ನಿದೇವ-ಭೃಗುಋಷಿ-ಪ್ರಸೂತಿದೇವಿ | 1/8 |
| 16. ಮರೀಚಿ-ಅತ್ರಿ-ಆಂಗಿರಸ-ಪುಲಸ್ತ್ಯ-ಪುಲಹ-ಕ್ರತು-ವಸಿಷ್ಠ-ವೈವಸ್ವತಮನು-ವಿಶ್ವಾಮಿತ್ರ | ಕಿಂಚಿದವರರು |
| 17. ಮಿತ್ರನಾಮಕಸೂರ್ಯ-ನಿಋ್‌ಋತಿ-ಪ್ರಾವಹಿ-ತಾರಾದೇವಿ | " |
| 18. ವಿಷ್ವಕ್ಸೇನ-ಗಣಪತಿ-ಅಶ್ವಿನಿದೇವತೆಗಳು-ಕುಬೇರ-85 ಜನ ಶೇಷಶತಸ್ಥರು | " |
| 19. ಕರ್ಮಜ ದೇವತೆಗಳು | " |
| 20. ಪರ್ಜನ್ಯ-ಶ್ಯಾಮಲಾ-ಗಂಗಾ-ಸಂಜ್ಞಾ-ರೋಹಿಣಿ (ಅನಿರುದ್ಧಪತ್ನಿ)-ಉಷಾದೇವಿ | " |
| 21. ಕೂರ್ಮಾದಿ ಅನಾಖ್ಯಾತ ದೇವತೆಗಳು | " |
| 22. ಸ್ವಾಹಾದೇವಿ | " |
| 23. ಬುಧದೇವ | ಕಿಂಚಿದವರರು |
| 24. (ದೇವಕಿದೇವಿ-ಯಶೋದಾದೇವಿ)-ನಾಮಾತ್ಮಿಕಾ-ಉಷಾದೇವಿ | " |
| 25. ಶನಿದೇವ | " |
| 26. ಪುಷ್ಕರದೇವ ಕರ್ಮಾಭಿಮಾನಿ | " |
| 27. ಆಜಾನಜದೇವತೆಗಳು | ಕರ್ಮಜರಿಗಿಂತ ಶತಾಧಮರು |
| 28. ಋಷಿಗಳು | ಆಜಾನಜರಿಗಿಂತ ಶತಾಧಮರು |
| 29. ಚಿರಪಿತೃಗಳು | ಋಷಿಗಳಿಗಿಂತ ಶತಾಧಮರು |
| 30. ದೇವಗಂಧರ್ವರು | ಚಿರಪಿತೃಗಳಿಗಿಂತ ಶತಾಧಮರು |
| 31. ಮನುಷ್ಯಗಂಧರ್ವರು | ದೇವಗಂಧರ್ವರಿಗಿಂತ ಶತಾಧಮರು |
| 32. ಮನುಷ್ಯರಾಜರು | ಮನುಷ್ಯಗಂಧರ್ವರಿಗಿಂತ ಶತಾಧಮರು |
| 33. ಮಾನುಷೋತ್ತಮರು | ಮನುಷ್ಯರಾಜರಿಗಿಂತ ಶತಾಧಮರು |

## 4. ವಿಶೇಷ

ದ್ವೈತಸಿದ್ಧಾಂತದಲ್ಲಿ 'ವಿಶೇಷ' ಎಂಬ ಪದಾರ್ಥವನ್ನು ಅಂಗೀಕರಿಸಲಾಗಿದೆ. ಇದು ವೈಶೇಷಿಕರು ಒಪ್ಪಿದ ವಿಶೇಷಕ್ಕಿಂತ ಅತ್ಯಂತಭಿನ್ನವಾಗಿದೆ. ಭೇದವು ಹೇಗೆ ಧರ್ಮಿಸ್ವರೂಪವೋ (ಧರ್ಮಿಗಿಂತ ಬೇರೆಯಲ್ಲವೋ) ಹಾಗೆಯೇ ವಿಶೇಷವೂ ವಸ್ತುವಿನ ಸ್ವರೂಪವೇ ಆಗಿರುತ್ತದೆ. ಈ ವಿಶೇಷ ಎಂಬ

ಪದಾರ್ಥವನ್ನು ಎಲ್ಲಿ ಅಂಗೀಕರಿಸಬೇಕು ಎಂಬ ಬಗ್ಗೆ ಶ್ರೀಮಧ್ವಾಚಾರ್ಯರು ಅನುವ್ಯಾಖ್ಯಾನದಲ್ಲಿ ವಿವರಿಸಿದ್ದಾರೆ-

ಅಭೇದವು ಪ್ರಮಾಣಸಿದ್ಧವಾಗಿದ್ದು ಭೇದವ್ಯವಹಾರವು ಎಲ್ಲಿ ಕಂಡು ಬರುವುದೋ ಅಂತಹ ಪ್ರಸಂಗದಲ್ಲಿ ಭೇದವ್ಯವಹಾರವನ್ನು ನಿರ್ವಹಿಸಲು ಭೇದಪ್ರತಿನಿಧಿಯಾಗಿ ಆಯಾ ವಸ್ತುವಿನಲ್ಲಿ ವಿಶೇಷವನ್ನು ಅಂಗೀಕರಿಸಬೇಕು-

**'ಭೇದಹೀನೇ ತ್ವಪರ್ಯಾಯಶಬ್ದಾಂತರನಿಯಾಮಕಃ ।**
**ವಿಶೇಷೋ ನಾಮ ಕಥಿತಃ ಸೋಽಸ್ತಿ ವಸ್ತುಷ್ವಶೇಷತಃ ॥'** (ಅನು. 1-1-2)

ಬೆಲ್ಲ, ಜೇನುತುಪ್ಪ, ಕಲ್ಲುಸಕ್ಕರೆ ಮೊದಲಾದ ವಸ್ತುಗಳಲ್ಲಿ ಮಾಧುರ್ಯವೆಂಬ ಗುಣವಿದೆ. ಆದರೆ ಇದನ್ನು ಎರಡು ಬೆರಳುಗಳಂತೆ ಪ್ರತ್ಯೇಕಿಸಿ ತೋರಿಸಲು ಬರುವುದಿಲ್ಲ. ವಸ್ತು ಹಾಗೂ ಅದರ ಧರ್ಮಕ್ಕೆ ಅಭೇದವು ಇಲ್ಲಿ ಅನುಭವಸಿದ್ಧವಾಗಿದೆ. ಆದರೆ ಬೆಲ್ಲದಲ್ಲಿ ಸಿಹಿ ಕಡಿಮೆ ಇದೆ ಇತ್ಯಾದಿಯಾಗಿ ವ್ಯವಹಾರವನ್ನು ಮಾಡುತ್ತೇವೆ. ಅಭೇದವು ಇರುವಲ್ಲಿ ಭೇದವನ್ನು ಒಪ್ಪುವುದು ಸಾಧ್ಯವಾಗದು. ಆದರೆ ಭೇದವ್ಯವಹಾರವನ್ನೂ ಅಲ್ಲಗಳೆಯಲಾಗದು. ಇಂತಹ ಪ್ರಸಂಗದಲ್ಲಿ ಭೇದವ್ಯವಹಾರವನ್ನು ವಿಶೇಷದ ಮೂಲಕವಾಗಿ ನಿರ್ವಹಿಸಬಹುದಾಗಿದೆ. ದಾರ್ಶನಿಕರಲ್ಲಿ ಗುಣ ಹಾಗೂ ಗುಣಿಗಳ ಸಂಬಂಧದ ಬಗ್ಗೆ ಭಿನ್ನಭಿನ್ನವಾದ ಚಿಂತನೆಗಳಿವೆ. ಕೆಲವರು ಗುಣ-ಗುಣಿಗಳಿಗೆ ಭೇದವನ್ನು ಒಪ್ಪುತ್ತಾರೆ. ಕೆಲವರು ಅಭೇದವನ್ನು ಒಪ್ಪುತ್ತಾರೆ. ಮತ್ತೆ ಕೆಲವರು ಭೇದಾಭೇದವನ್ನು ಅಂಗೀಕರಿಸುತ್ತಾರೆ. ಶ್ರೀಮಧ್ವರ ಚಿಂತನೆ ಹೀಗಿದೆ- ಯಾವ ಗುಣಧರ್ಮಗಳು ವಸ್ತು ಇರುವ ತನಕ ಪರಿವರ್ತನೆ ಹೊಂದುವುದಿಲ್ಲವೋ ಅಂತಹ ಗುಣಗಳಿಗೂ ದ್ರವ್ಯಕ್ಕೂ ಅಭೇದವನ್ನು ಅಂಗೀಕರಿಸಬೇಕು. ಎಲ್ಲಿ ವಸ್ತು ಇರುವಂತೆಯೇ ಗುಣಧರ್ಮಗಳು ಬದಲಾವಣೆ ಹೊಂದುವವೋ ಅಲ್ಲಿ ಭೇದಾಭೇದವನ್ನು ಅಂಗೀಕರಿಸಬೇಕು. ಉದಾ- ಮಾವಿನ ಕಾಯಿಯಲ್ಲಿ ಮಾಗಿ ಹಣ್ಣಾಗುವ ತನಕ ಹಂತ ಹಂತವಾಗಿ ರೂಪ-ರಸಗಳ ಪರಿವರ್ತನೆಯನ್ನು ನಾವು ಗಮನಿಸುತ್ತೇವೆ. ಇಂತಹ ಸ್ಥಳದಲ್ಲಿ ವಸ್ತುವಿಗೂ ಗುಣಗಳಿಗೂ ಭೇದಾಭೇದವನ್ನು ಅಂಗೀಕರಿಸಲಾಗುವುದು. ವಿರುದ್ಧವಾದ ಭೇದಾಭೇದವನ್ನು ಒಂದೆಡೆ ಮೇಳೈಸಲು ವಿಶೇಷದ ಆವಶ್ಯಕತೆ ಇದೆ.

**'ಖಂಡಿತೇ ಭೇದ ಐಕ್ಯಂ ಚ ಯಾವದ್ವಸ್ತು ನ ಖಂಡಿತಮ್ ।'**

ಶ್ರುತಿಯು **'ವಿಜ್ಞಾನಂ ಬ್ರಹ್ಮ', 'ಆನಂದಂ ಬ್ರಹ್ಮ'** ಎಂಬುದಾಗಿ ಬ್ರಹ್ಮ ಹಾಗೂ ಅವನ ಗುಣಗಳಿಗೆ ಅಭೇದವನ್ನು ವರ್ಣಿಸುತ್ತಿದೆ. ಅದರ ಜೊತೆಗೆ **'ಆನಂದಂ ಬ್ರಹ್ಮಣಃ'** ಎಂಬುದಾಗಿ ಭೇದವನ್ನೂ ತಿಳಿಸುತ್ತಿದೆ. ಶ್ರುತಿಯು ವರ್ಣಿಸಿದ ಭೇದ ಹಾಗೂ ಅಭೇದಗಳು ಎರಡೂ ಸತ್ಯವಾಗಲಾರವು. ಏಕೆಂದರೆ, ಶ್ರುತಿಯು **'ಏವಂ ಧರ್ಮಾನ್ ಪೃಥಕ್ ಪಶ್ಯನ್ ತಾನೇವಾನು-ವಿಧಾವತಿ', 'ನೇಹ ನಾನಾಸ್ತಿ ಕಿಂಚನ', 'ಮೃತ್ಯೋಃ ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ'** ಇತ್ಯಾದಿಯಾಗಿ ಪರಮಾತ್ಮನಿಗೂ ಅವನ ಗುಣಗಳಿಗೂ ಭೇದವನ್ನು ಚಿಂತಿಸಬಾರದೆಂದು ಸ್ಪಷ್ಟವಾಗಿ ಸಾರುತ್ತಿದೆ. ಅಷ್ಟೇ ಅಲ್ಲದೆ, ಭೇದವನ್ನು ಚಿಂತಿಸುವವರಿಗೆ ನಿತ್ಯನರಕವು ನಿಶ್ಚಿತವೆಂದು ಎಚ್ಚರದ ಗಂಟೆ ಬಾರಿಸುತ್ತಿದೆ. ಈ ಹಿನ್ನಲೆಯಲ್ಲಿ ನಾವು ಬ್ರಹ್ಮ ಹಾಗೂ ಅವನ ಗುಣಗಳಲ್ಲಿ ಭೇದವನ್ನು ಚಿಂತಿಸುವಂತಿಲ್ಲ. ಅಭೇದವು ಪ್ರಮಾಣಸಿದ್ಧವಾಗಿದೆ. ಆದರೆ ಭೇದವ್ಯವಹಾರವೂ ವೇದದಲ್ಲಿಯೇ ಕಂಡುಬರುತ್ತದೆ. ಇಂತಹ ಪ್ರಸಂಗದಲ್ಲಿ ಭೇದವ್ಯವಹಾರವನ್ನು ಉಪಪಾದಿಸಲು 'ವಿಶೇಷ' ಎಂಬ ಶಕ್ತಿಯನ್ನು ಇಲ್ಲಿ ಅಂಗೀಕರಿಸುವುದು ಅನಿವಾರ್ಯವೆನಿಸಿದೆ.

ಇಲ್ಲಿ ಒಂದು ಪ್ರಶ್ನೆ ಸಹಜವಾಗಿದೆ. ವೇದವೇ ಭೇದವನ್ನೂ, ಅಭೇದವನ್ನೂ ವರ್ಣಿಸಿರುವಾಗ ಎರಡನ್ನೂ ಅಂಗೀಕರಿಸಬಹುದಲ್ಲವೇ ? ಇದರ ಬಗ್ಗೆ ಹೀಗೆ ಪರಿಹಾರವನ್ನು ತಿಳಿಯಬೇಕು. 'ಯ ಇಹ ನಾನೇವ ಪಶ್ಯತಿ' ಎಂಬಲ್ಲಿ 'ಇವ'ಶಬ್ದವು ಭೇದದ ಜೊತೆಗೆ ಭೇದಾಭೇದದ ಚಿಂತನೆಯನ್ನು ನಿರಾಕರಿಸುತ್ತಿದೆ.

**'ಭವೇದೇಕತ್ರ ಸಂಯೋಗೇ ಇವಶಬ್ದೋ ವಿರುದ್ಧಯೋಃ ।**
**ಧರ್ಮಯೋರುಪಮಾಯಾಂ ವಾ ಸ್ವಲ್ಪತ್ವೇ ವಾ ವಿವಕ್ಷಿತೇ ॥'**

(ಕಾ. ಭಾ. 2-10)

ಈ ಹಿನ್ನಲೆಯಲ್ಲಿ ಬ್ರಹ್ಮ ಹಾಗೂ ಅವನ ಗುಣಗಳಲ್ಲಿ ಅಭೇದವು ಪ್ರಮಾಣಸಿದ್ಧವಾಗಿದ್ದು ಭೇದವನ್ನು ಅಂಗೀಕರಿಸಲು ಸಾಧ್ಯವಿಲ್ಲದ ಕಾರಣ ಭೇದಪ್ರತಿನಿಧಿಯಾದ (ಭೇದದ ಕಾರ್ಯವಾದ ವ್ಯವಹಾರವನ್ನು ನಿರ್ವಹಿಸಲು) ವಿಶೇಷವೆಂಬ ಶಕ್ತಿವಿಶೇಷವನ್ನು ಅಂಗೀಕರಿಸಬೇಕಾಗಿದೆ.

**ಎಲ್ಲರೂ ವಿಶೇಷವನ್ನು ಒಪ್ಪಲೇಬೇಕು**

ಅದ್ವೈತಿಗಳು, ನೈಯಾಯಿಕರೇ ಮೊದಲಾದ ದಾರ್ಶನಿಕರು ವಿಶೇಷವನ್ನು ಒಪ್ಪಲೇಬೇಕೆಂದು ಶ್ರೀಮಧ್ವಾಚಾರ್ಯರು ರೋಚಕವಾಗಿ ನಿರೂಪಿಸಿದ್ದಾರೆ. ಅದ್ವೈತಿಗಳು ಶಾಸ್ತ್ರಗಳು ಐಕ್ಯವನ್ನು ಪ್ರತಿಪಾದಿಸುತ್ತವೆ ಎಂದು ಸಮರ್ಥಿಸಿದ್ದಾರೆ. ಈ ಐಕ್ಯವು ಬ್ರಹ್ಮನಿಗಿಂತ ಪ್ರತ್ಯೇಕವಾದ ಅಸ್ತಿತ್ವವನ್ನು ಪಡೆದುಕೊಂಡಿಲ್ಲ. ಬ್ರಹ್ಮವಾದರೂ ಸ್ವಪ್ರಕಾಶವಾಗಿದ್ದು ನಿತ್ಯಸಿದ್ಧವಾಗಿದೆ. ಆದ್ದರಿಂದ ಅವನಿಗಿಂತ ಭಿನ್ನವಲ್ಲದ ಐಕ್ಯದ ಸ್ವರೂಪವೂ ಸಿದ್ಧವಾಗಿರಬೇಕಾದ ಕಾರಣ ಶಾಸ್ತ್ರಾಧ್ಯಯನವು ವ್ಯರ್ಥವೆನಿಸುವುದು. ಇಂತಹ ಪ್ರಸಂಗದಲ್ಲಿ ಬ್ರಹ್ಮಚೈತನ್ಯದ ಪ್ರಕಾಶವಿದ್ದರೂ ಐಕ್ಯದ ಅರಿವು ಬರುತ್ತಿಲ್ಲ. ಆದ್ದರಿಂದ ಶಾಸ್ತ್ರಾಧ್ಯಯನವು ಆವಶ್ಯಕವಾಗಿದೆ ಎಂದು ಅದ್ವೈತಿಗಳು ಸಮರ್ಥಿಸಬೇಕು. ವಿಶೇಷವನ್ನು ಒಪ್ಪಿದಾಗ ಮಾತ್ರವೇ ಚೈತನ್ಯದ ಜ್ಞಾನ ಬಂದರೂ ಐಕ್ಯದ ಜ್ಞಾನ ಬಂದಿಲ್ಲವೆಂದು ಸಮರ್ಥಿಸಲು ಸಾಧ್ಯವಿದೆ. ಈ ಹಿನ್ನೆಲೆಯಲ್ಲಿ ಅದ್ವೈತವಾದಿಗಳಿಗೆ ವಿಶೇಷದ ಅಂಗೀಕಾರವು ಅಪರಿಹಾರ್ಯವಾಗಿದೆ. ಇದರಂತೆ ವಸ್ತು ಇರುವ ತನಕ ಅದರೊಡನೆ ಇರುವ ಗುಣಗಳನ್ನು ಹೊಂದಿದ ವಸ್ತುವಿಗೂ ಅದರ ಗುಣಧರ್ಮಗಳಿಗೂ ಅಭೇದವು ಕಾಣಬರುತ್ತದೆ. ಆದರೆ ಭೇದದ ವ್ಯವಹಾರವೂ ಅಷ್ಟೇ ಸ್ಫುಟವಾಗಿ ಲೋಕಾನುಭವಸಿದ್ಧವಾಗಿದೆ. ಈ ಹಿನ್ನೆಲೆಯಲ್ಲಿ ಈ ಭೇದವ್ಯವಹಾರವನ್ನು ಉಪಪಾದಿಸಲು ವಿಶೇಷದ ಅಂಗೀಕಾರವು ತಾರ್ಕಿಕರಿಗೂ ಆವಶ್ಯಕವಾಗಿದೆ. ಇಂತಹ ವಿಶೇಷವು ವಸ್ತುವಿಗಿಂತ ಬೇರೆಯಲ್ಲ. ಹಾಗಾದರೆ ವಿಶೇಷ ಹಾಗೂ ವಸ್ತುವಿನ ನಡುವೆ ಅಭೇದವಿರುವಂತೆ ಭೇದವ್ಯವಹಾರವೂ ಇರುವ ಕಾರಣ ಅದನ್ನು ಉಪಪಾದಿಸಲು ಮತ್ತೊಂದು ವಿಶೇಷವನ್ನು ಒಪ್ಪುವ ಮೂಲಕ ವಿಶೇಷ ಪರಂಪರೆಯನ್ನು ಕಲ್ಪಿಸಬೇಕಾದ ಸ್ಥಿತಿ ಇರುವುದಿಲ್ಲ. ಏಕೆಂದರೆ ವಿಶೇಷವು ಸ್ವನಿರ್ವಾಹಕವಾಗಿದೆ. ಅಂದರೆ ಇನ್ನೊಂದು ವಿಶೇಷದ ಅಗತ್ಯವಿಲ್ಲದೆಯೇ ಅದು ತನಗೆ ಸಂಬಂಧಿಸಿದ ಭೇದವ್ಯವಹಾರವನ್ನು ನಿರ್ವಹಿಸಬಲ್ಲದು.

**'ವಿಶೇಷತದ್ವತೋಶ್ಚೈವ ಸ್ವನಿರ್ವಾಹಕತಾ ಭವೇತ್ ।'**

## 5. ಸ್ವಪ್ನ

ಭಗವಾನ್ ಬಾದರಾಯಣರು ಸ್ವಪ್ನವನ್ನು ಜೀವರಿಗೆ ಪರಮಾತ್ಮನು ತನ್ನ ಇಚ್ಛೆಯಂತೆ ತೋರಿಸುವನೆಂದು ಅವನ ಮಹಿಮೆಯನ್ನು ತಿಳಿಸಲೊಸುಗ

ಸ್ವಪ್ನದ ಸ್ವರೂಪದ ಬಗ್ಗೆ **'ಮಾಯಾಮಾತ್ರಂ ತು ಕಾರ್ತ್ಸ್ನ್ಯೇನ ಅನಭಿವ್ಯಕ್ತ-ಸ್ವರೂಪತ್ವಾತ್'** (ಬ್ರ.ಸೂ. 3-2-1) ಎಂಬಲ್ಲಿ ಬೆಳಕು ಚೆಲ್ಲಿದ್ದಾರೆ. ಶ್ರೀಮಧ್ವರಿಗಿಂತ ಪ್ರಾಚೀನ ದಾರ್ಶನಿಕರು ಸ್ವಪ್ನದ ಸ್ವರೂಪವಿವರಣೆಯಲ್ಲಿ ಗೊಂದಲಕ್ಕೆ ಒಳಪಟ್ಟಿದ್ದಾರೆ. ಶ್ರೀಮಧ್ವರು ಇದರ ಸುಂದರ ವಿವರವನ್ನು ನೀಡಿದ್ದಾರೆ. ಉಪನಿಷತ್ತು ಹಾಗೂ ಪುರಾಣಗಳು ಈ ವಿಶ್ವವನ್ನು ಸ್ವಪ್ನಕ್ಕೆ ಹೋಲಿಸಿದ್ದಾವೆ. ಸ್ವಪ್ನದಲ್ಲಿ ನಾವು ಕಂಡ ದೃಶ್ಯಗಳು ಎಚ್ಚರದಲ್ಲಿ ಗೋಚರವಾಗದಿರುವ ಕಾರಣ ಸ್ವಪ್ನದಲ್ಲಿ ಕಾಣುವ ವಸ್ತುಗಳು ಅಸತ್ಯವೆಂಬ ಭಾವನೆ ಎಲ್ಲರಿಗೂ ಸಹಜವಾಗಿದೆ. ಆದರೆ ಇಂತಹ ಉದಾಹರಣೆ ನೀಡುವ ಬಾದರಾಯಣರ ಆಂತರ್ಯ ಹೀಗಿದೆ- ಮಾನವರ ಪ್ರಮುಖ ಮೂರು ಅವಸ್ಥೆಗಳಲ್ಲಿ ಕನಸು ಹಾಗೂ ಗಾಢನಿದ್ರೆಗಳು ಪರಮಾತ್ಮನ ಅಧೀನ ವಾಗಿದ್ದಾವೆ. ಇವೆರಡರಲ್ಲಿ ಮಾನವರಿಗಿರುವ ಪಾರತಂತ್ರ್ಯವನ್ನು ಮನನಗೈದು ಎಚ್ಚರದಲ್ಲಿಯೂ ತನಗೆ ಸ್ವಾತಂತ್ರ್ಯವಿಲ್ಲವೆಂಬ ವಿವೇಕವನ್ನು ಸಾಧಕನು ತಂದುಕೊಳ್ಳಬೇಕಿದೆ.

ಒಂದು ವಸ್ತುವು ಸತ್ಯವಾಗಬೇಕಾದರೆ ಅದರ ಹಿನ್ನೆಲೆಯಲ್ಲಿ ಉಪಾದಾನ ಕಾರಣ (ಪರಿವರ್ತನೆ ಹೊಂದುವ ಗುಣವುಳ್ಳದ್ದು), ನಿಮಿತ್ತಕಾರಣ (ಬುದ್ಧಿಜೀವಿಯಾದ ವ್ಯಕ್ತಿ) ಎರಡರ ಆವಶ್ಯಕತೆ ಇದೆ. ಒಂದು ಮಡಿಕೆ ಸಿದ್ಧಗೊಳ್ಳಲು ಮೂಲಕಾರಣವಾದ ಮಣ್ಣು ಉಪಾದಾನಕಾರಣವೆನಿಸಿದೆ. ಅದಕ್ಕೆ ನಾನಾ ಆಕಾರಗಳನ್ನು ನೀಡಬಹುದಾಗಿದೆ. ಮಣ್ಣಿನಲ್ಲಿರುವ ಈ ಪರಿವರ್ತನಾತ್ಮಕ ಗುಣವನ್ನು ಯಥೋಚಿತವಾಗಿ ಬಳಸಿಕೊಂಡು ಮಣ್ಣಿನ ಮುದ್ದೆಗೆ ನಾನಾ ಆಕಾರವನ್ನು ನೀಡುವ ಬುದ್ಧಿಜೀವಿಯು (ಕುಂಬಾರನು) ಈ ಕಾರ್ಯದಲ್ಲಿ ನಿಮಿತ್ತಕಾರಣ ಎನಿಸುವನು. ಪ್ರಕೃತ ಸ್ವಪ್ನದ ವಿಷಯ ದಲ್ಲಿಯೂ ಇವೆರಡರ ಅಸ್ತಿತ್ವವನ್ನು ನಾವು ಗಮನಿಸಬೇಕಿದೆ. ಅನೇಕ ಜನ್ಮಗಳಲ್ಲಿ ಜೀವಿಯು ಅನುಭವಿಸಿದ ಸಂಗತಿಗಳು ಮನಸ್ಸಿನ ಒಳಪದರದಲ್ಲಿ ದಾಖಲಾಗಿವೆ. ಇದನ್ನು ಶಾಸ್ತ್ರೀಯ ಭಾಷೆಯಲ್ಲಿ ವಾಸನಾ ಅಥವಾ ಸಂಸ್ಕಾರ ಎಂದು ಕರೆಯುತ್ತಾರೆ. ಕನಸನ್ನು ತೋರಿಸಲು ಇದು ಮೂಲವಸ್ತುವಾಗಿದೆ (ಉಪಾದಾನಕಾರಣ). ಪರಮಾತ್ಮನು ತನ್ನ ಇಚ್ಛೆ ಹಾಗೂ ಜೀವರ ಕರ್ಮಕ್ಕೆ ಅನುಗುಣವಾಗಿ ನಾನಾವಸ್ತುಗಳ ಅರಿವನ್ನು ಕನಸಿನ ಸ್ಥಿತಿಯಲ್ಲಿ ನೀಡುತ್ತಾನೆ. ಆಗ ಜೀವನು ತನ್ನ ಮನಸ್ಸಿನ ಒಳಪದರದೊಳಡಗಿದ ಸೂಕ್ಷ್ಮವಸ್ತುಗಳನ್ನು

ಒಳಗಣ್ಣಿನಿಂದ (ಮನಸ್ಸಿನಿಂದ) ಕಾಣುತ್ತಾನೆ. ಇದುವೇ ಸ್ವಪ್ನ. ಕನಸಿನ ಸ್ಥಿತಿಯಲ್ಲಿ ಜೀವರು ನೋಡುವ ವಸ್ತುಗಳು ಅವರವರ ಮನಸ್ಸಿನ ಅಭಿವ್ಯಕ್ತಿಯಾಗಿದ್ದು ಸೂಕ್ಷ್ಮವಾಗಿವೆ. ಅದನ್ನು ಮತ್ತೊಬ್ಬರು ನೋಡಲಾರರು. ಅಲ್ಪಕಾಲದಲ್ಲಿ ಈಶ್ವರೇಚ್ಛೆಯಿಂದ ಮನಸ್ಸಿಗೆ ಗೋಚರವಾಗುವ ಆ ಸೂಕ್ಷ್ಮವಸ್ತುಗಳು ಅಸತ್ಯವೆನ್ನುವಂತೆ ಇಲ್ಲ. ಏಕೆಂದರೆ, ಅವುಗಳ ನಿರ್ಮಾಣದ ಹಿನ್ನೆಲೆಯಲ್ಲಿ ಸಂಸ್ಕಾರವೆಂಬ ಉಪಾದಾನಕಾರಣ ಈಶ್ವರೇಚ್ಛೆ ಎಂಬ ನಿಮಿತ್ತಕಾರಣಗಳು ಇದ್ದಾವೆ. ಒಂದು ಕಲಶವನ್ನು ಮಣ್ಣು, ತಾಮ್ರ, ಬೆಳ್ಳಿ, ಬಂಗಾರ ಮೊದಲಾದ ನಾನಾ ಧಾತುಗಳಿಂದ ನಿರ್ಮಿಸಬಹುದಾಗಿದೆ. ಅವುಗಳೆಲ್ಲವೂ ಹೇಗೆ ಸತ್ಯವೋ ಹಾಗೆಯೇ ಸಂಸ್ಕಾರವನ್ನು ಉಪಾದಾನವನ್ನಾಗಿ ಹೊಂದಿದ ಸ್ವಪ್ನಕಾಲದ ವಸ್ತುಗಳೂ ಸತ್ಯವಾಗಿವೆ. ಆದರೆ ಇವುಗಳು ಎಚ್ಚರದ ವಸ್ತುಗಳಂತೆ ಸ್ಥೂಲವಸ್ತುಗಳೆಂಬ ಭಾವನೆ ಬರುತ್ತದೆ. ಇವು ಎಚ್ಚರದ ವಸ್ತುಗಳೆಂಬ ಅಂಶವು ಮಾತ್ರ ಭ್ರಾಂತಿಗೆ ವಿಷಯವಾಗಿದೆ. ಆದರೆ ವಸ್ತುಗಳು ಸುಳ್ಳಲ್ಲ. ಉಪನಿಷತ್ತುಗಳಲ್ಲಿ ಮಾಯಾಶಬ್ದವು ಪರಮಾತ್ಮನ ಇಚ್ಛೆ, ಜಡಪ್ರಕೃತಿ, ಶ್ರೀಹರಿಯ ಶಕ್ತಿ, ತೇಜಸ್ಸು ಎಂಬ ಅನೇಕಾರ್ಥಗಳಲ್ಲಿ ಬಳಕೆಯಾಗಿದೆ.

**'ತ್ರಿಗುಣಾತ್ಮಿಕಾರ್ಥವಿಜ್ಞಾನಂ ವಿಷ್ಣುಶಕ್ತಿಸ್ತಥೈವ ಚ । ಮಾಯಾಶಬ್ದೇನ ಭಣ್ಯಂತೇ ।', 'ಮಹಾಮಾಯೇತ್ಯವಿದ್ಯೇತಿ ನಿಯತಿರ್ಮೋಹಿನೀತಿ ಚ । ಪ್ರಕೃತಿರ್ವಾಸನೇತ್ಯೇವಂ ತವೇಚ್ಛಾನಂತ ಕಥ್ಯತೇ ।'**

(ಬ್ರ.ಸೂ. ಅನು. 3-2-3)

ಪುರಾಣಗಳು ಈ ವಿಶ್ವವನ್ನು ಸ್ವಪ್ನಸದೃಶವೆಂದು ವರ್ಣಿಸುವುದರ ಅಂತರ್ಯವನ್ನು ಶ್ರೀಮಧ್ವಾಚಾರ್ಯರು ಹೃದಯಂಗಮವಾಗಿ ವಿವರಿಸಿದ್ದಾರೆ-

**'ಅನಿತ್ಯತ್ವ-ವಿಕಾರಿತ್ವ-ಪಾರತಂತ್ರ್ಯಾದಿರೂಪತಃ ।**
**ಸ್ವಪ್ನಾದಿಸಾಮ್ಯಂ ಜಗತಃ ನ ತು ಬೋಧನಿವರ್ತ್ಯತಾ ॥'** (ವಿ.ತ.ನಿ.)

ಈ ವಿಶ್ವವು ಅನಿತ್ಯವಾಗಿದೆ. ನಾನಾಬಗೆಯ ವಿಕಾರಕ್ಕೆ ಆಸರೆಯಾಗಿದೆ. ಪರಾಧೀನವಾಗಿದೆ. ಈ ಎಲ್ಲ ವಿಶ್ವದಲ್ಲಿರುವ ವಾಸ್ತವವಾದ ಅವಗುಣಗಳನ್ನು ಪರಿಚಯಿಸಲೋಸುಗ ಇದನ್ನು ಸ್ವಪ್ನದಂತೆ ಎಂದು ವರ್ಣಿಸಲಾಗಿದೆ. ಇದರಿಂದ ಸಂಸಾರದ ಮೇಲಿನ ಅಭಿಮಾನವನ್ನು ಸಾಧಕರು ಕಡಿಮೆ ಮಾಡಿಕೊಂಡು ಪರಮಾತ್ಮನಲ್ಲಿ ಹೆಚ್ಚಿನ ಆದರವನ್ನು ಹೊಂದಬೇಕೆಂಬುದೇ

ಇಂತಹ ಮಾತುಗಳ ತಾತ್ಪರ್ಯವಾಗಿದೆ. ಸ್ವಪ್ನದ ಬಗ್ಗೆ ಇನ್ನೂ ವಿಸ್ತಾರವಾದ ವಿಮರ್ಶೆಯನ್ನು ಶ್ರೀಮಧ್ವರ ಅನುವ್ಯಾಖ್ಯಾನದಲ್ಲಿ ಕಾಣಬಹುದಾಗಿದೆ.

## VII. ಮುಕ್ತಿಸಾಧನಗಳು

### ವಿರಕ್ತಿ

ಸಾಧನಸ್ವರೂಪವನ್ನು ಶ್ರೀಮಧ್ವಾಚಾರ್ಯರು ನಿರೂಪಿಸಿದ ಕ್ರಮ ಹೀಗಿದೆ- ಭೋಗಪದಾರ್ಥಗಳಲ್ಲಿರುವ ಪ್ರೀತಿ, ತತ್ವಜ್ಞಾನದ ಬಗ್ಗೆ ಇರುವ ಅನಾದರ, ನಿರಂತರ ಲೌಕಿಕದ ಚಿಂತನೆ ದೇವರ ಕಾಣ್ಕೆಗೆ ವಿರೋಧಿಯಾಗಿವೆ-

**'ವಿಷಯೇಷು ಚ ಸಂಸರ್ಗಾತ್ ಶಾಶ್ವತಸ್ಯ ಚ ಸಂಶಯಾತ್ ।**
**ಮನಸಾ ಚ ಅನ್ಯದಾಕಾಂಕ್ಷಾತ್ ಪರಂ ನ ಪ್ರತಿಪದ್ಯತೇ ॥'**

(ಬ್ರ.ಸೂ. ಅನು.ವ್ಯಾ. 3-3-24)

ಈ ಹಿನ್ನೆಲೆಯಲ್ಲಿ ಭೋಗವಸ್ತುಗಳಿಂದ ದೂರ ಇದ್ದು ತತ್ತ್ವಜ್ಞಾನದ ಸಂಪಾದನೆಗೆ ಪ್ರಯತ್ನಿಸಬೇಕಿದೆ. ಆದರೆ ಅನಾದಿಕಾಲದಿಂದ ಈ ಭೋಗ ವಸ್ತುಗಳನ್ನು ಅನುಭವಿಸಿ ಮೆದ್ದ ಮನ ಹಾಗೂ ಇಂದ್ರಿಯಗಳು, ಇವುಗಳಿಂದ ಹೊರಬರಬಯಸುವುದಿಲ್ಲ. ಅದಕ್ಕಾಗಿ ಶಾಸ್ತ್ರಗಳು ಭೋಗವಸ್ತುಗಳ ಒಡನಾಟದಿಂದ ನಾವು ಎತ್ತಬೇಕಾದ ಜನನ-ಮರಣಗಳ ಕೊನೆ ಇಲ್ಲದ ಪರಂಪರೆಯನ್ನು ಪರಿಚಯಿಸುವ ಮೂಲಕ ವೈರಾಗ್ಯಕ್ಕೆ ಪ್ರಚೋದನೆಯನ್ನು ನೀಡುತ್ತವೆ. ಹತ್ತಾರು ಗಂಟೆಗಳ ಅವಿರತ ಪ್ರಯಾಣವನ್ನು ಮಾಡಿದಾಗ ನಮ್ಮ ದೇಹೇಂದ್ರಿಯಗಳು ತೀವ್ರ ಆಯಾಸಗೊಳ್ಳುತ್ತವೆ. ಒಮ್ಮೆ ಭೌತಿಕಶರೀರ ವನ್ನು ತೊರೆದು ನರಕಕ್ಕೆ ಪ್ರಯಾಣಿಸುವ ವ್ಯಕ್ತಿಯು ಎರಡು ಗಂಟೆಗಳಲ್ಲಿ ... ಮೈಲುಗಳಷ್ಟು ದೂರದ ದಾರಿಯನ್ನು ಪಯಣಿಸುತ್ತಾನೆ. ಇದು ಅತ್ಯಂತ ದುಃಖದಾಯಕವಾದ ಪ್ರಯಾಣವಾಗಿದೆ. ಒಮ್ಮೆ ಭೌತಿಕದೇಹವನ್ನು ತೊರೆದ ವ್ಯಕ್ತಿಯು ಶಾಶ್ವತವಾಗಿ ಮುಕ್ತನಾದನೆಂದು ಭಾವಿಸುವಂತಿಲ್ಲ. ಒಂದು ಶರೀರದಿಂದ ಬಿಡುಗಡೆಯಾದಾಗ ಮತ್ತೊಂದು ಅಂತಹದೇ ಭೌತಿಕ ಶರೀರವು ನಮ್ಮ ಭೋಗಕ್ಕಾಗಿ ಸಿದ್ಧವಿದೆ. ನಾವು ಮಾಡಿದ ಬೆಟ್ಟದಷ್ಟು ಪಾಪಗಳು ಅನಂತ ಜನ್ಮಗಳ ದುಃಖಕ್ಕೆ ಕಾರಣವಾಗಿ ನಮ್ಮ ಹಿಂದೆ ಇವೆ. ಹೀಗೆ ಸಾಧಕನು ಆ ಪಾಪವನ್ನು ಅಲ್ಪಪುಣ್ಯವನ್ನು ಅನುಭವಿಸಲು ಶರೀರಗಳನ್ನು ಪಡೆಯುತ್ತಲೇ ಇರುತ್ತಾನೆ. ಇವುಗಳಿಂದ ಶಾಶ್ವತ ಬಿಡುಗಡೆ ಸಾಧ್ಯವಾಗದು.

ಇಂತಹ ಜನನ-ಮರಣಗಳಿಂದ ಶಾಶ್ವತ ಬಿಡುಗಡೆಯನ್ನು ಬಯಸುವವನು ವೈರಾಗ್ಯದ ದಾರಿಯನ್ನು ಸ್ವೀಕರಿಸುವುದು ಅನಿವಾರ್ಯವಿದೆ. ಅದಕ್ಕಾಗಿ ಬ್ರಹ್ಮಸೂತ್ರಗಳು ಜೀವನು ಭೌತಿಕದೇಹವನ್ನು ತೊರೆದು ನರಕ ಮೊದಲಾದ ಅನೇಕ ಲೋಕಗಳಲ್ಲಿ ಸಂಚರಿಸುವುದನ್ನು ಮತ್ತು ತಾಯಿಯ ಗರ್ಭಕ್ಕೆ ಮರಳಿ ಬರುವುದನ್ನು ಮನಮುಟ್ಟುವಂತೆ ವಿವರಿಸಿದ್ದಾವೆ. ಇಂತಹ ಗಮನಾಗಮನ ವನ್ನು ಅರಿತ ವಿವೇಕಿಯಾದ ಜಿಜ್ಞಾಸುವಿಗೆ ಸಂಸಾರದಲ್ಲಿ ವೈರಾಗ್ಯವು ಹುಟ್ಟುವುದು-

**'ವೈರಾಗ್ಯಾರ್ಥೇ ಗತ್ಯಾದಿನಿರೂಪಣಾ ಪ್ರಥಮಪಾದೇ'**

(ಬ್ರ.ಸೂ.ಭಾ. 3-1-1)

**ಕರ್ಮದಿಂದ ಮುಕ್ತಿ ದೊರಕದು**

**'ಅಪಾಮ ಸೋಮಂ ಅಮೃತಾ ಅಭೂಮ'** (ಋಗ್ವೇದ 8-48-3) ಎಂಬ ವೇದವಾಕ್ಯವು ಸೋಮಯಾಗವನ್ನು ಮಾಡಿದವನಿಗೆ ಮುಕ್ತಿ ದೊರಕುವುದೆಂದು ಬಣ್ಣಿಸಿದೆ. **'ಅಕ್ಷಯ್ಯಂ ಹ ವೈ ಚಾತುರ್ಮಾಸ್ಯಯಾಜಿನಃ ಸುಕೃತಂ ಭವತಿ'** (ಆಪ.ಶ್ರೌ. 8-1-1) ಎಂಬ ಆಪಸ್ತಂಭಶ್ರೌತಸೂತ್ರವು ಚಾತುರ್ಮಾಸ್ಯಯಾಗವನ್ನು ನಡೆಸಿದವನಿಗೆ ಅಕ್ಷಯ್ಯ ಪುಣ್ಯ ದೊರಕುವುದೆಂದು ಆದೇಶಿಸಿದೆ. ಇದರಂತೆ ಕಾಶೀಮರಣದಿಂದ ಮುಕ್ತಿ, ಪ್ರಯಾಗಮರಣದಿಂದ ಮುಕ್ತಿಯಾಗುವುದೆಂದು ಪ್ರತಿಪಾದಿಸುವ ಅನೇಕ ವಚನಗಳನ್ನು ನಾವು ಪ್ರಮಾಣಗ್ರಂಥಗಳಲ್ಲಿ ಗಮನಿಸುತ್ತೇವೆ. ಸೂತ್ರಕಾರರಾದ ಬಾದರಾಯಣರು ಇವುಗಳ ಆಂತರ್ಯವನ್ನು ಸ್ಫುಟವಾಗಿ ವಿವರಿಸಿದ್ದಾರೆ- ವೇದ-ಉಪನಿಷತ್ತುಗಳು **'ತಮೇವಂ ವಿದ್ವಾನ್ ಅಮೃತ ಇಹ ಭವತಿ', 'ತಮೇವಂ ವಿದಿತ್ವಾ ಅತಿಮೃತ್ಯುಮೇತಿ'** ಇತ್ಯಾದಿಯಾಗಿ ಜ್ಞಾನದಿಂದಲೇ ಮುಕ್ತಿಯನ್ನು ಪ್ರತಿಪಾದಿಸುತ್ತಿವೆ. ಈ ಹಿನ್ನೆಲೆಯಲ್ಲಿ ಜ್ಞಾನವೇ ಮುಕ್ತಿಸಾಧನ ವೆಂದು ಅಂಗೀಕರಿಸುವುದು ಶಾಸ್ತ್ರಸಮ್ಮತವಾಗಿದೆ. ಸೋಮಯಾಗ ಅಥವಾ ಚಾತುರ್ಮಾಸ್ಯಯಾಗಗಳಿಂದ ಮುಕ್ತಿ ದೊರಕುವುದೆಂಬ ವೇದವಚನದ ಆಶಯವನ್ನು ಗೌಣಾರ್ಥದಲ್ಲಿ ನಾವು ತೆಗೆದುಕೊಳ್ಳಬೇಕು. ಸೋಮಯಾಗ ವನ್ನು ಮಾಡಿದ ಸಾಧಕನು ಒಂದು ಮನ್ವಂತರದವರೆಗೆ ಸ್ವರ್ಗಲೋಕದಲ್ಲಿ ಜನನ-ಮರಣ ಚಕ್ರದಿಂದ ವಿದೂರನಾಗಿ ಸುಖವನ್ನು ಅನುಭವಿಸುವನೆಂದು ಸೋಮಯಾಗದ ಮಹತ್ವವನ್ನು ವರ್ಣಿಸಲಾಗಿದೆ. **'ಅಮೃತೋ ವಾವ**

**ಸೋಮಪೋ ಭವತಿ ಯಾವದಿಂದ್ರೋ ಯಾವನ್ಮನುರ್ಯಾವದಾದಿತ್ಯಃ'** (ಬ್ರ.ಸೂ.ಭಾ. 3-1-7). ಈ ಹಿನ್ನೆಲೆಯಲ್ಲಿ ಶಾಶ್ವತವಾಗಿ ಜನನ-ಮರಣಗಳ ಚಕ್ರಗಳಿಂದ ಬಿಡುಗಡೆಯನ್ನು ಹೊಂದಲು ಸಾಧಕರು ವೈರಾಗ್ಯವನ್ನು ಸಂಪಾದಿಸಿ ಜ್ಞಾನಾರ್ಜನೆಗೆ ಪ್ರಯತ್ನಿಸುವುದು ಅನಿವಾರ್ಯವಾಗಿದೆ.

ಇದರಂತೆ ಒಮ್ಮೆ ಮರಣವನ್ನಪ್ಪಿದ ಜೀವಿಯು ನರಕಲೋಕದಲ್ಲಿ ಸಹಸ್ರಾರು ವರ್ಷಗಳ ವರೆಗೆ ದುಃಖಭೋಗಗಳನ್ನು ಅನುಭವಿಸುವನು. ದೇವತೆಗಳು ಕೆಲವು ಕಾಲದ ನಂತರ ಆ ಜೀವಿಯ ಕರ್ಮಕ್ಕೆ ಅನುಗುಣವಾಗಿ ಪುಣ್ಯಪಾಪಗಳ ಗಂಟನ್ನು ಜೊತೆಗಿರಿಸಿ ಭೂಮಿಯಲ್ಲಿ ಮತ್ತೆ ಜನ್ಮವನ್ನು ಕರುಣಿಸುತ್ತಾರೆ. ಜೀವಿಯು ಧೂಮದೇವತೆಯ ಲೋಕದಿಂದ ಮೇಘಾಭಿಮಾನಿದೇವತೆಯ ಲೋಕಕ್ಕೆ ಆಗಮಿಸಿ ಅನಂತರ ಆಕಾಶಲೋಕ, ಚಂದ್ರಲೋಕ, ವಾಯುಲೋಕ ಅನಂತರದಲ್ಲಿ ಮಳೆಯ ಮೂಲಕ ಓಷಧಿ-ವನಸ್ಪತಿಗಳಲ್ಲಿ ಬಂದು ಸೇರುತ್ತಾನೆ. ಅನಂತರ ತಂದೆಯ ಶರೀರವನ್ನು ಪ್ರವೇಶಿಸಿ ತಾಯಿಯ ಗರ್ಭವನ್ನು ಸೇರುತ್ತಾನೆ. ಅಲ್ಲಿ ಕೈಕಾಲುಗಳನ್ನು ಅಲುಗಾಡಿಸಲೂ ಆಗದಂತಹ ಕೊಳೆ ಹಾಗೂ ಕ್ರಿಮಿಗಳಿಂದ ದುಃಖದಾಯಕವಾದ ಕಿರಿದಾದ ಪ್ರದೇಶದಲ್ಲಿ ಒಂಭತ್ತು ತಿಂಗಳವರೆಗೆ ಅಪಾರ ದುಃಖಗಳನ್ನು ಅನುಭವಿಸಿ ಮತ್ತೆ ಜನ್ಮವನ್ನು ಪಡೆಯುತ್ತಾನೆ. ಇಂತಹ ಜನನ-ಮರಣ ಪರಂಪರೆಗೆ ಕೊನೆಯೇ ಇರಲಾರದು. ಈ ಹಿನ್ನೆಲೆಯಲ್ಲಿ ಸಾಧಕನಾದವನು ಇವುಗಳಿಗೆ ಪೂರ್ಣವಿರಾಮವನ್ನು ನೀಡಬಯಸಿದರೆ ವೈರಾಗ್ಯ ಹಾಗೂ ಜ್ಞಾನಸಂಪಾದನೆಯು ಅನಿವಾರ್ಯವಾಗುವುದು-

**'ಧೂಮಾದಭ್ರಮಭ್ರಾದಾಕಾಶಮ್ ಆಕಾಶಾಚ್ಚಂದ್ರಲೋಕಂ ಯಥೇತ-ಮಾಕಾಶಮ್ ಆಕಾಶಾದ್ವಾಯುಂ ವಾಯುರ್ಭೂತ್ವಾ ಧೂಮೋ ಭವತಿ ಧೂಮೋ ಭೂತ್ವಾಽಭ್ರಂ ಭವತ್ಯಭ್ರಂ ಭೂತ್ವಾ ಮೇಘೋ ಭವತಿ ಮೇಘೋ ಭೂತ್ವಾ ಪ್ರವರ್ಷತಿ।'** (ಬ್ರ.ಸೂ.ಭಾ. 3-1-9).

**ಭಕ್ತಿ**

ವಿರಕ್ತನಾದ ಸಾಧಕನು ವೇದಶಾಸ್ತ್ರಗಳ ಅಧ್ಯಯನದ ಮೂಲಕ ಶ್ರೀಹರಿಯ ಜ್ಞಾನವನ್ನು ಸಂಪಾದಿಸಿ ಅವನಲ್ಲಿ ಭಕ್ತಿಯನ್ನು ಮಾಡಬೇಕು. ಈ ಭಕ್ತಿಯೇ ಮುಕ್ತಿಸಾಧಕವೆಂದು ವೇದಪುರಾಣಗಳು ಒಕ್ಕೊರಲಿನಿಂದ ಪ್ರತಿಪಾದಿಸುತ್ತಿವೆ- **'ಭಕ್ತ್ಯಾ ತ್ವನನ್ಯಯಾ ಶಕ್ಯಃ'** (ಭ.ಗೀ. 11-54), **'ಭಕ್ತ್ಯಾ**

**ತುತೋಷ ಭಗವಾನ್ ನನು ಯೂಥಪಾಯ'** (ಭಾಗ. 7-9-9), **'ಸರ್ವಂ ಮದ್‌ಭಕ್ತಿಯೋಗೇನ ಮದ್‌ಭಕ್ತೋ ಲಭತೇಽಂಜಸಾ'** (ಭಾಗ. 11-20-33) ಇವೇ ಮೊದಲಾದ ಗೀತಾ ಹಾಗೂ ಭಾಗವತ ಪುರಾಣೋಕ್ತಿಗಳು ಭಕ್ತಿಯ ಮಹತ್ವವನ್ನು ಸಾರುತ್ತಿವೆ. ವಾಸ್ತವಿಕವಾಗಿ ನೋಡಿದರೆ ವೇದದಲ್ಲಿ ಭಕ್ತಿಯ ಸ್ಪಷ್ಟ ಉಲ್ಲೇಖ ಕಾಣುವುದಿಲ್ಲ. ಆದರೆ ಜ್ಞಾನವು ಮುಕ್ತಿಸಾಧನವೆಂಬ ಉಕ್ತಿಗಳು ಹೇರಳವಾಗಿ ದೊರಕುತ್ತವೆ- **'ತಮೇವಂ ವಿದಿತ್ವಾ ಅತಿಮೃತ್ಯುಮೇತಿ'** (ಶ್ವೇತಾಶ್ವ. 5-9), **'ತಮೇವಂ ವಿದ್ವಾನ್ ಅಮೃತ ಇಹ ಭವತಿ'** (ತೈ.ಆ. 3-12) ಇಲ್ಲಿ ಜ್ಞಾನಪದವು ಜ್ಞಾನದಿಂದ ಪಕ್ವಗೊಳ್ಳುವ ಭಕ್ತಿ ಎಂಬ ಅರ್ಥದಲ್ಲಿದೆ ಎನ್ನುತ್ತಾರೆ ಶ್ರೀಮಧ್ವಾಚಾರ್ಯರು. ಜ್ಞಾನವು ಭಕ್ತಿಯ ಒಂದು ಅಂಗವೆನಿಸಿದೆ. ಜ್ಞಾನ ಮತ್ತು ಪ್ರೀತಿಯ ಸಮಷ್ಟಿಯೇ ಭಕ್ತಿ. ಈ ಹಿನ್ನೆಲೆಯಲ್ಲಿ ಉಪನಿಷತ್ತುಗಳಲ್ಲಿ ಕಾಣುವ ಜ್ಞಾನವು ಮುಕ್ತಿಸಾಧನವೆಂದು ಪ್ರತಿಪಾದಿಸುವ ವಾಕ್ಯಗಳು, ಭಕ್ತಿಯು ಮುಕ್ತಿಸಾಧನವೆಂಬ ಆಶಯ ಹೊಂದಿದ್ದಾವೆ-

**'ಜ್ಞಾನಸ್ಯ ಭಕ್ತಿಭಾಗತ್ವಾತ್ ಭಕ್ತಿರ್ಜ್ಞಾನಮಿತೀರ್ಯತೇ ।**
**ಜ್ಞಾನಸ್ಯೈವ ವಿಶೇಷೋ ಯತ್ ಭಕ್ತಿರಿತ್ಯಭಿಧೀಯತೇ ॥'**

(ಅನು. 3-4-199)

**ಭಕ್ತಿ ಎಂದರೆ ಏನು ?**

ಪರದೇವತೆಯ ಮಹತ್ವವನ್ನು ಚೆನ್ನಾಗಿ ಅರಿತು, ಉಳಿದೆಲ್ಲ ವಸ್ತುಗಳಿಗಿಂತ ಅವನಲ್ಲಿ ಮಾಡುವ ಗಾಢವಾದ ಪ್ರೀತಿಯೇ (ಸ್ನೇಹವೇ) ಭಕ್ತಿ ಎನಿಸಿದೆ-

**'ಮಾಹಾತ್ಮ್ಯಜ್ಞಾನಪೂರ್ವಸ್ತು ಸುದೃಢಃ ಸರ್ವತೋಽಧಿಕಃ ।**
**ಸ್ನೇಹೋ ಭಕ್ತಿರಿತಿ ಪ್ರೋಕ್ತಃ ತಯಾ ಮುಕ್ತಿರ್ನ ಚಾನ್ಯಥಾ ॥'**

(ಮ.ತಾ.ನಿ. 1-85)

ದ್ವೈತದರ್ಶನ ಸೂರ್ಯನೆನಿಸಿದ ಶ್ರೀಜಯತೀರ್ಥರು ಭಕ್ತಿಯ ಲಕ್ಷಣವನ್ನು ಹೀಗೆ ಪರಿಷ್ಕರಿಸಿದ್ದಾರೆ- 'ಪರಮಾತ್ಮನು ಅನಂತಕಲ್ಯಾಣಗುಣ ಪರಿಪೂರ್ಣನೆಂಬ ಅರಿವಿನ ಹಿನ್ನೆಲೆಯಲ್ಲಿ ತಾನು- ತನ್ನವರ ಮೇಲಿನ ಪ್ರೀತಿಗಿಂತ ಅನಂತಮಡಿಹೆಚ್ಚಾದ ಪ್ರೀತಿಯನ್ನು ದೇವರಲ್ಲಿ ಮಾಡುವುದೇ ಭಕ್ತಿ. ಇದು ನೂರಾರು ಅಡೆ-ತಡೆಗಳ ನಡುವೆಯೂ ಗಂಗೆಯಂತೆ ಅವಿಚ್ಛಿನ್ನವಾಗಿ ಪ್ರವಹಿಸುವ ಪ್ರೀತಿಯಾಗಿರಬೇಕು-

**'ಪರಮೇಶ್ವರೇ ಭಕ್ತಿರ್ನಾಮ ಅನವಧಿಕಾನಂತಕಲ್ಯಾಣಗುಣತ್ವಜ್ಞಾನ-ಪೂರ್ವಕಃ ಸ್ವಾತ್ಮಾತ್ಮೀಯಸಮಸ್ತವಸ್ತುಭ್ಯಃ ಅನೇಕಗುಣಾಧಿಕಃ ಅಂತರಾಯ-ಸಹಸ್ರೇಣಾಪ್ಯಪ್ರತಿಬದ್ಧಃ ನಿರಂತರಪ್ರೇಮಪ್ರವಾಹಃ ।'**

(ನ್ಯಾ.ಸು। ಪು. 244)

ಶ್ರೀಮಧ್ವರ ಮತ್ತು ಶ್ರೀಜಯತೀರ್ಥರ ಭಕ್ತಿಸ್ವರೂಪ ವಿವೇಚನೆಯು ಪಾಂಚರಾತ್ರಾಗಮ, ಶಾಂಡಿಲ್ಯಸಂಹಿತೆ, ನಾರದಭಕ್ತಿಸೂತ್ರ ಮೊದಲಾದ ಕೃತಿಗಳ ಹಿನ್ನೆಲೆಯಲ್ಲಿ ಮೂಡಿಬಂದಿದೆ. ಶಾಂಡಿಲ್ಯಸಂಹಿತೆಯು ಭಕ್ತಿಸ್ವರೂಪವನ್ನು ಹೀಗೆ ವಿವೇಚಿಸಿದೆ-

**'ಸರ್ವಾತ್ಮನಾಽನಿಮಿತ್ತೈವ ಸ್ನೇಹಧಾರಾನುಕಾರಿಣೀ ।**
**ವೃತ್ತಿಃ ಪ್ರೇಮಪರಿಷ್ವಕ್ತಾ ಭಕ್ತಿರ್ಮಾಹಾತ್ಮ್ಯಬೋಧಜಾ ॥'** (1-21)

**'ಸಾ ತ್ವಸ್ಮಿನ್ ಪರಮಪ್ರೇಮರೂಪಾ'** (ನಾ.ಭ.ಸೂ. 102)

ಪ್ರೀತಿ ಇಲ್ಲದ ಬರಿಯ ಜ್ಞಾನ ಶುಷ್ಕವೆನಿಸುವುದು. ಜ್ಞಾನವಿಲ್ಲದ ಪ್ರೀತಿಯೂ ಕೇವಲ 'ಭಾವುಕತೆ' ಎನಿಸುವುದು. ಈ ಹಿನ್ನೆಲೆಯಲ್ಲಿ ಇವೆರಡರ ಸುಂದರ ಸಮನ್ವಯವನ್ನು ಶ್ರೀಮಧ್ವಾಚಾರ್ಯರು ಪ್ರತಿಪಾದಿಸಿದ್ದಾರೆ.

### ಭಕ್ತಿ ಹುಟ್ಟುವುದು ಹೇಗೆ?

ದೇವರಲ್ಲಿ ಪ್ರೀತಿ ಮಾಡಿ ಎಂದು ವಿಧಿಸಲು (ಆದೇಶಿಸಲು) ಸಾಧ್ಯವಾಗದು. ವಸ್ತುವಿನಲ್ಲಿ ಸೌಂದರ್ಯವಿದ್ದರೆ ಅದರ ಬಗ್ಗೆ ಆಕರ್ಷಣೆ ಮೂಡುವಂತೆ, ಪರಮಾತ್ಮನಲ್ಲಿರುವ ಗುಣ-ಮಹಿಮೆಯನ್ನು ನಾವು ತಿಳಿದರೆ ಅವನಲ್ಲಿ ಪ್ರೀತಿ ತಾನಾಗಿಯೇ ಹುಟ್ಟುವುದು. ಇದನ್ನು ನಾರದಭಕ್ತಿಸೂತ್ರವು ನಿರೂಪಿಸಿದೆ-

**'ಭಗವದ್ಗುಣಶ್ರವಣಕೀರ್ತನಾತ್ ।'** (1-37).

ಪರಮಾತ್ಮನ ಗುಣಮಹಿಮೆಗಳು ಅನಂತ. ಅವುಗಳನ್ನು ನಾವು ನಮ್ಮ ಶಕ್ತಿಗೆ ಅನುಗುಣವಾಗಿ ತಿಳಿದಂತೆ ಅವನಲ್ಲಿ ತಾನಾಗಿಯೇ ಆಕರ್ಷಣೆ (ಪ್ರೀತಿ) ಬಲಿಯುತ್ತದೆ. ಬರಿಯ ಹಾಲನ್ನು ನಾವು ಕುಡಿಯಲು ಬಯಸದಿರಬಹುದು. ಆದರೆ ಸಕ್ಕರೆ-ಜೇನು-ಕೇಸರಿ-ಏಲಕ್ಕಿ ಮುಂತಾದ ಅಮೂಲ್ಯ ಪದಾರ್ಥಗಳಿಂದ ರುಚಿಯಾದ ಮತ್ತು ಶಕ್ತಿ ನೀಡುವ ಹಾಲನ್ನು ಪ್ರೀತಿಸದವನಾರು?

ಇದರಂತೆ ಪರಮಾತ್ಮನ ಮಂಗಲಗುಣಗಳ ಪರಿಚಯವಾದರೆ ಪ್ರೀತಿ ಅಲ್ಲಿ ತಾನಾಗಿಯೇ ಜನಿಸುತ್ತದೆ- **'ಭಕ್ತ್ಯರ್ಥಂ ಭಗವನ್ಮಹಿಮೋಕ್ತಿಃ'** (ಬ್ರ.ಸೂ.ಭಾ. 3-2-1).

**'ಕ್ಷೀರಾದೌ ಸ್ವಾದುತ್ವಾದಿತದ್ಗುಣಕೀರ್ತನೇನೈವ ಸ್ನೇಹೋತ್ಪತ್ತಿದರ್ಶನಾತ್ ಸ್ನೇಹರೂಪಭಕ್ತೇಃ ಪ್ರಕಾರಾಂತರೇಣೋತ್ಪಾದಯಿತುಮಶಕ್ಯತ್ವಾತ್ ಭಕ್ತ್ಯರ್ಥಂ ಭಗವನ್ಮಹಿಮೋಚ್ಯತೇ ।'** (ತ.ಪ್ರ.ಗು.ದೀ. 3-2-1, ಪು. 130).

### ಭಕ್ತಿಯಲ್ಲಿ ಗ್ರಾಹ್ಯಾಂಶ ಹಾಗೂ ತ್ಯಾಜ್ಯಾಂಶಗಳು

ಶ್ರವಣ-ಕೀರ್ತನ-ಸ್ಮರಣ-ಪಾದಸೇವನ-ಅರ್ಚನ-ವಂದನ-ದಾಸ್ಯ-ಸಖ್ಯ-ಆತ್ಮನಿವೇದನೆ ಎಂಬ ಒಂಭತ್ತು ಅಂಶಗಳಿಂದ ಭಕ್ತಿ ಸಂಪೂರ್ಣವೆನಿಸುವುದು. ಇವು ಭಕ್ತಿಯ ಚಿಹ್ನೆಗಳು. ಇದರಂತೆ ಭಕ್ತಿಯು ಒಂಭತ್ತು ಬಗೆಯ ದ್ವೇಷದಲ್ಲಿ ಪರ್ಯವಸಾನಗೊಳ್ಳದಿರುವಂತೆ ಎಚ್ಚರವಹಿಸಬೇಕು-

1. ಜೀವ-ಬ್ರಹ್ಮರು ಒಂದೆಂದು ತಿಳಿಯುವುದು.
2. ಪರಮಾತ್ಮನು ನಿರ್ಗುಣನೆಂದು ಭಾವಿಸುವುದು.
3. ಪರಮಾತ್ಮನಲ್ಲಿ ಬೆರಳೆಣಿಕೆಯ ಗುಣಗಳಿವೆ ಎಂಬುದಾಗಿ ತಿಳಿಯುವುದು.
4. ಇತರ ದೇವತೆಗಳು ಅವನಿಗೆ ಸಮರೆಂದು ಭಾವಿಸುವುದು.
5. ವಿಷ್ಣುವಿಗಿಂತ ಇತರ ದೇವತೆಗಳು ಶ್ರೇಷ್ಠರೆಂದು ತಿಳಿಯುವುದು.
7. ವಿಷ್ಣುವಿನ ಅಂಶ-ಅವತಾರ-ಆವೇಶಗಳ ಬಗ್ಗೆ ತಪ್ಪು ತಿಳಿಯವುದು.
8. ವಿಷ್ಣುಭಕ್ತರ ದ್ವೇಷ.
9. ವಿಷ್ಣುಪಾರಮ್ಯವನ್ನು ಬೋಧಿಸುವ ಪವಿತ್ರಗ್ರಂಥಗಳನ್ನು ಖಂಡಿಸುವುದು, ನಿರಾಕರಿಸುವುದು ಇತ್ಯಾದಿ.

ಹೀಗೆ ಮೇಲೆ ವರ್ಣಿಸಿದ ಭಾವದ ಅಶುದ್ಧಿಯು ವಿಷ್ಣುಭಕ್ತಿ ಎನಿಸದೆ 'ವಿಷ್ಣುದ್ವೇಷ' ಎನಿಸುವುದು-

**'ಜೀವಾಭೇದೋ ನಿರ್ಗುಣತ್ವಮಪೂರ್ಣಗುಣತಾ ತಥಾ ।**
**ಸಾಮ್ಯಾಧಿಕ್ಯೇ ತದನ್ಯೇಷಾಂ ಭೇದಸ್ತದ್ಗತ ಏವ ಚ ।**

**ಪ್ರಾದುರ್ಭಾವವಿಪರ್ಯಾಸಃ ತದ್ಭಕ್ತದ್ವೇಷ ಏವ ಚ ।**
**ತತ್ಪ್ರಮಾಣಸ್ಯ ನಿಂದಾ ಚ ದ್ವೇಷಾ ಏತೇಽಖಿಲಾ ಮತಾಃ ॥'**

(ಮ.ತಾ.ನಿ. 1-112-13).

### ದುರಾಚಾರಿಗಳು ಭಕ್ತರಲ್ಲ

ದೇವರ ಭಕ್ತರು ಶುದ್ಧಾಚಾರವನ್ನು ಒಂದೇ ಬಾರಿಗೆ ಪೂರ್ಣವಾಗಿ ಮಾಡಲು ಸಾಧ್ಯವಾಗದಿರಬಹುದು. ಹಂತಹಂತವಾಗಿ ತಪ್ಪುಗಳನ್ನು ತಿದ್ದಿಕೊಂಡು ಪ್ರತಿಯೊಬ್ಬರೂ ಶುದ್ಧರಾಗಲು ಪ್ರಯತ್ನಿಸಬೇಕು. ಆದರೆ ದುರಾಚಾರವನ್ನು ಎಲ್ಲ ಕಾಲದಲ್ಲೂ ತೊರೆಯಬೇಕು. ಅಪಥ್ಯ ಮಾಡುವವನಿಗೆ ಉತ್ತಮ ಔಷಧಿ ಪರಿಣಾಮವಾಗದಂತೆ, ದುರಾಚಾರಿಗೆ ದೇವರ ಸಾಕ್ಷಾತ್ಕಾರವಾಗಲಾರದು. ಭಕ್ತರಿಗೆ ದುರಾಚಾರ ಭೂಷಣವಲ್ಲ. ಉಪನಿಷತ್-ಪುರಾಣಗಳಲ್ಲಿ ದುರಾಚಾರಿಗೆ ದೇವರು ದೊರಕನು ಎಂಬ ವಿಮರ್ಶೆ ಇರುವುದು ಗಮನಾರ್ಹ- **'ನಾವಿರತೋ ದುಶ್ಚರಿತಾತ್'** (ಕಾಠಕ. 1-6-10).

**'ಯದಿ ನ ಸಮುಚ್ಚರಂತಿ ಹೃದಿ ಕಾಮಜಡಾಃ ।**
**ದುರಧಿಗಮೋಽಸತಾಂ ಹೃದಿ ಗತೋಽಸ್ಮೃತಕಂಠಮಣಿಃ ॥'**

(ಭಾಗ. 10-94-40).

### ಕಾಮ-ದ್ವೇಷಾದಿಗಳಿಂದ ಮುಕ್ತಿ ಇಲ್ಲ

ಇತಿಹಾಸ-ಪುರಾಣಗಳಲ್ಲಿ ಹರಿಯನ್ನು ಸಾಕ್ಷಾತ್ಕರಿಸಿಕೊಳ್ಳಲು ಏಕಾಗ್ರತೆ ಪ್ರಧಾನವೇ ಹೊರತು ಅದಕ್ಕೆ ಕಾರಣವಾದ ಸಾಮಗ್ರಿಯು ಯಾವುದೂ ಆಗಬಹುದೆಂಬ ಭಾವನೆ ಇರುವಂತೆ ವಾಕ್ಯಗಳು ಕಾಣುತ್ತವೆ- 'ಗೋಪಿಕಾಸ್ತ್ರೀಯರು ಅಜ್ಞರಾದರೂ ಜ್ಞಾನ-ಭಕ್ತಿ-ವಿರಕ್ತಿಗಳಿಲ್ಲದಿದ್ದರೂ ಕೇವಲ ಕಾಮದಿಂದ ಶ್ರೀಕೃಷ್ಣನನ್ನು ನೆನೆನೆನೆದು ಮುಕ್ತಿಭಾಜನರಾದರು. ಕಂಸನು ಶ್ರೀಕೃಷ್ಣನ ಬಗ್ಗೆ ಭೀತನಾಗಿ ಅವನಲ್ಲಿಯೇ ಮನ ನೆಲೆಗೊಳಿಸಿ ಭಗವಂತನನ್ನು ಪಡೆದನು. ಶಿಶುಪಾಲನೇ ಮೊದಲಾದ ರಾಜರುಗಳು ಶ್ರೀಕೃಷ್ಣನನ್ನು ಸದಾ ದ್ವೇಷಿಸುತ್ತಾ ಅವನ ಚಿಂತನೆಯಿಂದ ಅವನಲ್ಲಿ ಲೀನರಾದರು. ಯಾದವರು ರಕ್ತಸಂಬಂಧದಿಂದ ಕೃಷ್ಣನಲ್ಲಿ ಅನುರಕ್ತರಾಗಿ ಅವನನ್ನು ಚಿಂತಿಸುತ್ತ ಅವನನ್ನೇ ಪಡೆದರು. ಪಾಂಡವರು ಸ್ನೇಹಭಾವದಿಂದ

ಶ್ರೀಕೃಷ್ಣನನ್ನು ಪಡೆದರು. ನಾವು (ನಾರದರೇ ಮೊದಲಾದ ಮಹರ್ಷಿಗಳು) ಭಕ್ತಿಯಿಂದ ದೇವರನ್ನು ಹೊಂದುತ್ತೇವೆ.'-

**'ತಸ್ಮಾದ್ ವೈರಾನುಬಂಧೇನ ನಿರ್ವೈರೇಣ ಭಯೇನ ವಾ ।**
**ಸ್ನೇಹಾತ್ ಕಾಮೇನ ವಾ ಯುಂಜ್ಯಾತ್ ಕಥಂಚಿನ್ನೇಕ್ಷತೇ ಪೃಥಕ್ ॥'**

(ಭಾಗ. 7-1-27)

**'ಗೋಪ್ಯಃ ಕಾಮಾತ್ ಭಯಾತ್ ಕಂಸಃ ದ್ವೇಷಾಚ್ಚೈದ್ಯಾದಯೋ ನೃಪಾಃ ।**
**ಸಂಬಂಧಾದ್ ವೃಷ್ಣಯಃ ಸ್ನೇಹಾತ್ ಯೂಯಂ ಭಕ್ತ್ಯಾ ವಯಂ ವಿಭೋ॥'**

(ಭಾಗ. 7-1-32)

ಮೇಲಿನ ವಾಕ್ಯಗಳ ಆಂತರ್ಯವನ್ನು ಶ್ರೀಮಧ್ವಾಚಾರ್ಯರು ಹೃದಯಂಗಮವಾಗಿ ವಿವರಿಸಿದ್ದಾರೆ. ಪರಮಾತ್ಮನ ಸಾಕ್ಷಾತ್ಕಾರಕ್ಕೆ ದ್ವೇಷವೂ ಉಪಾಯವಾಗಬಹುದಾದರೆ ಶಾಸ್ತ್ರಗಳು ಅವನಲ್ಲಿ ದೋಷಗಳನ್ನು ವರ್ಣಿಸಬೇಕಲ್ಲವೇ ? ಗುಣಗಳನ್ನು ಅರಿತಾಗ ಪ್ರೀತಿಯು ಜನಿಸುವಂತೆ ದೋಷಗಳನ್ನು ಅರಿತಾಗ ಜಿಹಾಸೆಯು ಅಥವಾ ದ್ವೇಷವು ಮೂಡುವುದು ನಮ್ಮೆಲ್ಲರ ಅನುಭವಸಿದ್ಧವಾಗಿದೆ.

**'ಯದಿ ದ್ವೇಷೇಣ ಮುಕ್ತಿಃ ಸ್ಯಾತ್ ವಕ್ತವ್ಯೋ ದೋಷಸಂಚಯಃ ।'**

(ಬ್ರ.ಸೂ. ಅನು. 3-4-5)

ಈ ಹಿನ್ನೆಲೆಯಲ್ಲಿ ವೇದಶಾಸ್ತ್ರಗಳು ಪರಮಾತ್ಮನ ಗುಣಾನುವರ್ಣನೆಯನ್ನು ಮಾತ್ರವೇ ಮಾಡುವುದನ್ನು ಗಮನಿಸುವಾಗ ಭಕ್ತಿಯೊಂದೇ ಮುಕ್ತಿಗೆ ಉಪಾಯವಾಗಿದೆ ಎಂದು ತಿಳಿಯಬಹುದಾಗಿದೆ. ದ್ವೇಷದಿಂದ ಮುಕ್ತಿಯು ದೊರಕುವುದಾದರೆ ವೇನ, ಪೌಂಡ್ರಕ ಮೊದಲಾದವರಿಗೆ ಮುಕ್ತಿ (ಶ್ರೀಕೃಷ್ಣನಲ್ಲಿ ಪ್ರವೇಶ) ಏಕೆ ದೊರಕಲಿಲ್ಲ ? ಅವರಿಗೆ ದುಃಖಮಯವಾದ ನಿತ್ಯನರಕ ದೊರಕಿತು ಎಂಬ ವ್ಯಾಸರ ವರ್ಣನೆ ತಪ್ಪಾಗುವುದಲ್ಲವೇ ? ಇದನ್ನು ವಿಮರ್ಶಿಸಿದಾಗ ದ್ವೇಷವು ಮುಕ್ತಿಗೆ ಕಾರಣವಲ್ಲವೆಂಬ ಸಂಗತಿಯು ಸ್ಫುಟವಾಗುವುದು. ಶಿಶುಪಾಲ ಹಾಗೂ ದಂತವಕ್ತ್ರರಲ್ಲಿ ವಿಷ್ಣುವಿನ ಸೇವಕರಾದ ಜಯ-ವಿಜಯರು ಶಾಪದಿಂದ ಪ್ರವೇಶವನ್ನು ಪಡೆದಿದ್ದರು. ಅವರು ಸಹವಾಸದೋಷದಿಂದ ಸ್ವಲ್ಪಕಾಲ ಹರಿಯನ್ನು ದ್ವೇಷಿಸಿದರೂ ತಮ್ಮ ಸ್ವಾಭಾವಿಕವಾದ ಹರಿಭಕ್ತಿಯನ್ನು ಜಾಗೃತಗೊಳಿಸಿಕೊಂಡು ಪರಮಾತ್ಮನನ್ನು

ಆರಾಧಿಸಿದರು. ಶ್ರೀಹರಿಯು ಅನೈಸರ್ಗಿಕವಾದ ಅವರ ದ್ವೇಷವನ್ನು ಕಡೆಗಣಿಸಿ ಸ್ವಾಭಾವಿಕವಾದ ಭಕ್ತಿಯನ್ನು ಪುರಸ್ಕರಿಸಿ ಮುಕ್ತಿಯನ್ನು ಕರುಣಿಸಿದನು. ಇದರಂತೆ ಕಂಸನಲ್ಲಿರುವ ಭೃಗು ಋಷಿಗಳು ಅಂತಿಮವಾಗಿ ಭಯ ತೊರೆದು ಭಕ್ತಿಯಿಂದಲೇ ಮುಕ್ತಿಯನ್ನು ಪಡೆದರು. ಗೋಪಿಕೆಯರು ಮೇಲ್ನೋಟಕ್ಕೆ ಅಜ್ಞಾನಿಗಳಂತೆ ಕಂಡರೂ ಶ್ರೀಕೃಷ್ಣನ ಪಾರಮ್ಯ ಹಾಗೂ ಪೂರ್ಣತೆಗಳ ಅರಿವು ಅವರಲ್ಲಿ ಪೂರ್ಣವಾಗಿತ್ತು. ಅಂತಿಮಹಂತದಲ್ಲಿ ಕಾಮವನ್ನು ತೊರೆದು ನಿರ್ಮಲಭಕ್ತಿಯನ್ನು ಮಾಡಿ ಅವರು ಪರಮಾತ್ಮನನ್ನು ಪಡೆದಿದ್ದಾರೆ. ಈ ಹಿನ್ನೆಲೆಯಲ್ಲಿ ಆರಂಭದ ಹಂತದಲ್ಲಿ ಯಾವುದೇ ಭಾವವಿದ್ದರೂ ಅಂತಿಮವಾಗಿ ಭಕ್ತಿಯೊಂದೇ ತಾರಕವಾಗಬಲ್ಲದು. ಈ ಹಿನ್ನೆಲೆಯಲ್ಲಿ ಸಾಧಕರು ಭಕ್ತಿಯನ್ನು ಮಾಡಿಯೇ ಮುಕ್ತಿಯನ್ನು ಪಡೆಯಬಹುದಾಗಿದೆ-

'ಗೋಪ್ಯಃ ಕಾಮಯುತಾ ಭಕ್ತಾಃ ಕಂಸಾವಿಷ್ಟಃ ಸ್ವಯಂ ಭೃಗುಃ ।
ಜ್ಞೇಯೋ ಭಯಯುತೋ ಭಕ್ತಶ್ಚೈದ್ಯಾದಿಸ್ಥಾ ಜಯಾದಯಃ ।
ವಿದ್ವೇಷಸಂಯುತಾ ಭಕ್ತಾ ವೃಷ್ಣಯೋ ಬಂಧುತಾಯುತಾಃ ।
ಬಹುಮಾನಸ್ನೇಹಸಾಮ್ಯಾದ್ ದೇವಾ ಭಕ್ತಾಃ ಪ್ರಕೀರ್ತಿತಾಃ ।
ಸ್ನೇಹೋಪಸರ್ಜನಾದೇವ ಬಹುಮಾನಾನ್ಮುನೀಶ್ವರಾಃ ।
ಬಹುಮಾನೋಽಪಿ ದೇವಾನಾಮೃಷಿಭ್ಯೋಽಭ್ಯಧಿಕೋ ಮತಃ ।
ಬ್ರಹ್ಮವೀಂದ್ರೇಂದ್ರಕಾಮಾದೇರಿತರೇಷಾಂ ಯಥಾಪದಮ್ ॥'

(ಭಾಗ.ತಾ. 7-1-31)

'ಅನುಬಂಧಸ್ತು ಭಕ್ತಿಃ ಸ್ಯಾದ್ ಬಂಧಃ ಸ್ನೇಹ ಉದಾಹೃತಃ ।'

(ಭಾಗ.ತಾ. 7-1-47).

ಈ ಹಿನ್ನೆಲೆಯಲ್ಲಿ ಬ್ರಹ್ಮಸೂತ್ರಗಳು ಪರಮಾತ್ಮನಿಂದಾಗುವ ಸೃಷ್ಟಿ-ಸ್ಥಿತಿ-ಲಯ ಮೊದಲಾದ ಕಾರ್ಯಗಳನ್ನು ವಿವರಿಸುವುದರ ಜೊತೆಗೆ ಜೀವಿಯು ಅನುಭವಿಸುವ ಎಚ್ಚರ, ಕನಸು, ಗಾಢನಿದ್ರೆ, ಮೋಹ ಮೊದಲಾದ ಅವಸ್ಥೆಗಳಿಗೆ ಪರಮಾತ್ಮನೇ ಕಾರಣನೆಂದು ಸ್ಫುಟಪಡಿಸಿವೆ. ಅನಾದಿಕಾಲದಿಂದ ಅನಂತಕಾಲದವರೆಗೆ ನಮ್ಮ ಹಿತೈಷಿಯಾದ ಆ ಪರಮಾತ್ಮನ ಅರಿವನ್ನು ಸಂಪಾದನೆ ಮಾಡಿಕೊಂಡಾಗ ಅವನಲ್ಲಿ ಭಕ್ತಿಯು ಜನಿಸುವುದು ಸಾಧ್ಯವಾಗುವುದು.

**ಉಪಾಸನೆ**

ಪರಮಾತ್ಮನ ಜ್ಞಾನವನ್ನು ಅವರವರ ಯೋಗ್ಯತೆಗೆ ತಕ್ಕಂತೆ ಸಾಧಕರು ಸಂಪಾದಿಸಬೇಕಿದೆ. ಇಂತಹ ಜ್ಞಾನವು ವೇದಶಾಸ್ತ್ರಗಳ ನಿರಂತರ ಅಧ್ಯಯನ ಹಾಗೂ ಮನನಗಳಿಂದ ಜನಿಸುವುದಾಗಿದೆ. ಬಿಂಬಾಪರೋಕ್ಷವನ್ನು ಪಡೆದ ದೇವತೆಗಳೂ ಇಂದಿಗೂ ಪರಮಾತ್ಮನ ಜ್ಞಾನವನ್ನು ಸಂಪಾದಿಸುತ್ತಲೇ ಇರುವರು. ಈ ದೃಷ್ಟಿಯಿಂದ ಸಾಧಕರು ನಿರಂತರ ಪ್ರಯತ್ನಶೀಲರಾಗಬೇಕು-

**'ವೇದಃ ಕೃತ್ಸ್ನೋಽಧಿಗಂತವ್ಯಃ ಸ್ವಾಧ್ಯಾಯಾಧ್ಯಯನಂ ಭವೇತ್ ।**
**ಅದ್ಯಾಪಿ ತೇನ ದೇವಾದ್ಯಾಃ ಶೃಣ್ವತೇ ಮನ್ವತೇ ಸದಾ ॥**
**ಶ್ರವಣಂ ಮನನಂ ಚೈವ ಕರ್ತವ್ಯಂ ಸರ್ವಥೈವ ಹಿ ॥'**

(ಬ್ರ.ಸೂ. ಅನು. 3-3-1)

ಶ್ರವಣ-ಮನನಗಳನ್ನು ತೊರೆದು ಸಾಧಕರು ಕ್ಷಣಕಾಲವೂ ಬದುಕುವಂತಿಲ್ಲ. ನಿದ್ರೆಯು ಆವರಿಸಿದಾಗ ಸ್ವಲ್ಪಕಾಲ ಮಾತ್ರ ವಿಶ್ರಾಂತಿಯನ್ನು ಪಡೆದು ಮತ್ತೆ ತಮ್ಮ ಅಧ್ಯಯನವನ್ನು ಮುಂದುವರಿಸಬೇಕು. ಶ್ರೇಷ್ಠರಾದ ಜ್ಞಾನಿಗಳು ದೊರಕಿದಾಗ ಜ್ಞಾನವನ್ನು ಸಂಪಾದಿಸಬೇಕು. ವಿಷ್ಣುಭಕ್ತರಾದ ಮಹಾತ್ಮರ ಬಳಿಗೆ ಹೋಗಿ ಸಂಶಯಗಳನ್ನು ಪರಿಹರಿಸಿಕೊಳ್ಳಬೇಕು. ತಾವಿರುವ ಊರಿನಲ್ಲಿ ವಿದ್ವಾಂಸರು ಇಲ್ಲದೇ ಹೋದಲ್ಲಿ ವ್ಯರ್ಥ ಕಾಲಹರಣ ಮಾಡುವಂತಿಲ್ಲ. ತಾವೇ ತಿಳಿದಷ್ಟು ಅಭ್ಯಾಸ ಮಾಡಬೇಕು. ಉಳಿದ ಸುಜನರಿಗೆ ಅದನ್ನು ಉಪದೇಶಿಸಲೂ ಬೇಕು-

**'ಶ್ರವಣಾದಿ ವಿನಾ ನೈವ ಕ್ಷಣಂ ತಿಷ್ಠೇದಪಿ ಕ್ವಚಿತ್ ।**
**ಅತ್ಯಶಕ್ಯೇ ತು ನಿದ್ರಾದೌ ಪುನರೇವ ಸಮಾರಭೇತ್ ।**
**ಅಭಾವೇ ನಿರ್ಣಯಜ್ಞಸ್ಯ ಸಚ್ಛಾಸ್ತ್ರಾಣ್ಯೇವ ಸರ್ವದಾ ।**
**ಶೃಣುಯಾತ್ ಯದಿ ಸದ್ಜ್ಞಾನಪ್ರಾಚುರ್ಯಮುಪಲಭ್ಯತೇ ।**
**ಮಹದ್ಭ್ಯೋ ವಿಷ್ಣುಭಕ್ತೇಭ್ಯೋ ಯಥಾಶಕ್ತಿ ಚ ಸಂಶಯಾನ್ ।**
**ಛಿಂದ್ಯಾತ್ ಸ್ವತೋಽಧಿಕಾಭಾವೇ ಸ್ವಯಮೇವ ಸಮಭ್ಯಸೇತ್ ।**
**ಬ್ರೂಯಾದಪಿ ಚ ಶಿಷ್ಯೇಭ್ಯಃ ಸಚ್ಛಿದ್ಧಾಂತಮಹಾಪಯನ್ ।'**

(ಬ್ರ.ಸೂ. ಅನು. 3-3-1)

ಇತಿಹಾಸ-ಪುರಾಣ ಮೊದಲಾದ ಶಾಸ್ತ್ರಗ್ರಂಥಗಳ ವಿವರಣೆಯಲ್ಲಿ

ಸಣ್ಣಪುಟ್ಟ ದೋಷಗಳು ಸಂಭವಿಸಬಹುದಾದರೂ ಮೂಲಪ್ರಮೇಯಗಳ ವಿರೋಧ ಬಾರದಂತೆ ಎಚ್ಚರ ವಹಿಸಬೇಕು. ನಾವು ಎಂದೆಂದೂ ಮನನ ಮಾಡಬೇಕಾದ ಶಾಸ್ತ್ರಸಾರವಾದ ಪ್ರಮೇಯಗಳು ಹೀಗಿವೆ-

1. ಶ್ರೀಹರಿಯು ಅನಂತಕಲ್ಯಾಣಗುಣಪರಿಪೂರ್ಣನಾಗಿರುವನು.
2. ಅವನಲ್ಲಿ ಚಿಂತಾ-ಸಂತಾಪ ಮೊದಲಾದ ಯಾವುದೇ ದೋಷಗಳಿಗೆ ಆಸ್ಪದವಿರುವುದಿಲ್ಲ.
3. ಸಮಗ್ರ ವಿಶ್ವವು ಅವನ ಅಧೀನವಾಗಿದೆ.
4. ಅವನು ಎಲ್ಲ ಕಾಲದಲ್ಲೂ ಸರ್ವತಂತ್ರಸ್ವತಂತ್ರನು.
5. ಜೀವ-ಜಡಾತ್ಮಕ ವಿಶ್ವವು ಅವನಿಂದ ಯಾವಾಗಲೂ ಭಿನ್ನವಾಗಿದೆ.
6. ಮುಕ್ತರೂ ಕೂಡ ಶ್ರೀಹರಿಯ ಅಧೀನರು.
7. ಭಿನ್ನವಾದುದು ಮುಂದೊಂದು ದಿನ ಅಭಿನ್ನವಾಗದು.
8. ದೇವತೆಗಳಲ್ಲಿ ತಾರತಮ್ಯವಿದೆ. ಇದು ಮುಕ್ತಿಯಲ್ಲೂ ಅನುವೃತ್ತವಾಗುವುಸದು.

'ಅಶೇಷಗುಣಪೂರ್ಣತ್ವಂ ಸರ್ವದೋಷಸಮುಜ್ಝಿತಿಃ ।
ವಿಷ್ಣೋರನ್ಯಚ್ಚ ತತ್ತಂತ್ರಮಿತಿ ಸಮ್ಯಗ್ವಿನಿರ್ಣಯಃ ।
ಸ್ವತಂತ್ರತ್ವಂ ಸದಾ ತಸ್ಯ ತಸ್ಯ ಭೇದಶ್ಚ ಸರ್ವತಃ ।
ತತ್ತಂತ್ರತ್ವಂ ಚ ಮುಕ್ತಾನಾಮಪಿ ತದ್ಗುಣಪೂರ್ತಯೇ ।
......... ನಿರ್ದೋಷತ್ವಂ ರಮಾಯಾಶ್ಚ ತದನಂತರತಾ ತಥಾ ।

ಬ್ರಹ್ಮಾಸರಸ್ವತೀವೀಂದ್ರಶೇಷರುದ್ರಾಶ್ಚ ತತ್‌ಸ್ತ್ರಿಯಃ ।
ಶಕ್ರಕಾಮೌ ತದನ್ಯೇ ಚ ಕ್ರಮಾನ್ಮುಕ್ತಾವಪೀತಿ ಚ ।
ಸತ್ಸಿದ್ಧಾಂತ ಇತಿ ಜ್ಞೇಯೋ ನಿರ್ಣೀತೋ ಹರಿಣಾ ಸ್ವಯಂ ॥'

(ಬ್ರ.ಸೂ. ಅನು 3-3-1).

## ನಾಲ್ಕು ಗುಣಗಳ ಉಪಾಸನೆ

ಸಾಧಕರು, ಪರಮಾತ್ಮನು ನಿರ್ದೋಷನು, ಜ್ಞಾನರೂಪನು, ಆನಂದಮಯನು, ಎಂದೆಂದಿಗೂ ನಮ್ಮ ಒಡೆಯನು ಎಂಬುದಾಗಿ ನಾಲ್ಕು ಗುಣಗಳನ್ನು ಅವನಲ್ಲಿ ಸದಾ ಚಿಂತಿಸಬೇಕು.

**'ಸಚ್ಚಿದಾನಂದ ಆತ್ಮೇತಿ ಬ್ರಹ್ಮೋಪಾಸಾ ವಿನಿಶ್ಚಿತಾ ।**
**ಸರ್ವೇಷಾಂ ಚ ಮುಮುಕ್ಷೂಣಾಂ ಫಲಸಾಮ್ಯಾದಪೇಕ್ಷಿತಾ ॥'**

(ಬ್ರ.ಸೂ.ಭಾ. 3-3-12)

ಮನುಷ್ಯೋತ್ತಮರಿಂದ ಆರಂಭಿಸಿ ಜೀವೋತ್ತಮರಾದ ಮುಖ್ಯಪ್ರಾಣ ದೇವರವರೆಗೆ ಅವರವರ ಯೋಗ್ಯತೆಗೆ ತಕ್ಕಂತೆ ಉಪಾಸನೆಯಲ್ಲಿ ಭಿನ್ನತೆಗಳಿದ್ದಾವೆ. ದೇವತೆಗಳು ಯಾವ ಯಾವ ಪರಮಾತ್ಮನ ಅಂಗಗಳಿಂದ ಜನಿಸಿರುವರೋ ಯಾವ ರೀತಿಯ ಸೇವಾಕಾರ್ಯಗಳನ್ನು ಶ್ರೀಹರಿಯ ಪ್ರೀತಿಗಾಗಿ ನಡೆಸುವರೋ ಅದಕ್ಕನುಗುಣವಾಗಿ ತಮ್ಮಲ್ಲಿ ಅಂತಹ ಗುಣಗಳ ಅಭಿವ್ಯಕ್ತಿಗಾಗಿ ಬಿಂಬರೂಪಿಯಾದ ಹರಿಯಲ್ಲಿ ಆಯಾ ಗುಣಗಳನ್ನು ಉಪಾಸಿಸಬೇಕು.

### ಬಿಂಬದರ್ಶನವೇ ಮುಕ್ತಿಕಾರಣ

ಪ್ರತಿಯೊಬ್ಬ ಜೀವನ ಹೃದಯದಲ್ಲಿ ಅವನ ಅನಾದಿ ಅನಂತ ಕಾಲಗಳ ಚಟುವಟಿಕೆಯನ್ನು ನಿಯಂತ್ರಿಸುವ ಪರಮಾತ್ಮನ ರೂಪ ಒಂದಿದೆ. ಇದನ್ನೇ ಬಿಂಬರೂಪ ಎಂದು ಕರೆಯುತ್ತಾರೆ. ಉಳಿದ ಭಗವದ್ರೂಪಗಳ ಸಂಬಂಧವನ್ನು ಜೀವನು ನಿರ್ದಿಷ್ಟಕಾಲದಲ್ಲಿ ಪಡೆಯಬಹುದಾದರೂ ಎಂದೆಂದಿಗೂ ಅವನ ಒಡನಾಡಿಯಾಗಿರುವುದು ಈ ಬಿಂಬರೂಪ ಮಾತ್ರ. ಇದರ ಸಾಕ್ಷಾತ್ಕಾರವೇ ಮುಕ್ತಿಸಾಧನವಾಗಿದೆ.

**'ಹೃದಿಸ್ಥಾ ಯಾ ಹರೇರ್ಮೂರ್ತಿಃ ಜೀವೋ ಯತ್ಪ್ರತಿಬಿಂಬಕಃ ।**
**ಯದ್ವಶೇ ವರ್ತತೇ ಜೀವಃ ಸಾ ತು ಜೀವಕಲಾ ಸ್ಮೃತಾ ॥'**

(ಬ್ರ.ಸೂ.ಭಾ., ಭಾ.ದೀ., 3-3-54).

ಸ್ವರೂಪಚಕ್ಷುಸ್ಸಿನಿಂದ ಬಿಂಬರೂಪವನ್ನು ಕಾಣುವುದೇ ಬಿಂಬಾಪರೋಕ್ಷವೆನಿಸಿದೆ. ಯಾವ ಜೀವರಿಗೆ ಅವತಾರರೂಪವು ಬಿಂಬವಾಗುವುದೋ ಅಂತಹವರು ಅದನ್ನು ಕಂಡಾಗಲೂ ಮುಕ್ತಿಯನ್ನು ಪಡೆಯುತ್ತಾರೆ. ಒಟ್ಟಾರೆ ಬಿಂಬದರ್ಶನವಿಲ್ಲದೇ ಮುಕ್ತಿಯಾಗಲಾರದು.

**'ಮುಕ್ತ್ಯರ್ಥಮಾತ್ಮಯೋಗ್ಯಂ ತು ವಿಜ್ಞಾನಂ ತದುದಾಹೃತಂ ।'**
**'ಸಮೋऽಪಿ ಭಗವಾನ್ ಬಿಂಬದರ್ಶನೇನೈವೇನಂ ಮೋಚಯತಿ ।'**

(ಬ್ರ.ಸೂ.ಭಾ. ಭಾ.ದೀ. 3-3-53)

**'ದೃಷ್ಟೈವ ಹ್ಯವತಾರಾಣಾಂ ಮುಚ್ಯಂತೇ ಕೇಚಿದಂಜಸಾ ।'**

(ಬ್ರ.ಸೂ.ಭಾ. 3-3-32)

**ಜ್ಞಾನದ ಮಹತ್ವ**

ಅಪರೋಕ್ಷಜ್ಞಾನವನ್ನು ಪಡೆದ ಸಾಧಕನ ಮಹಿಮೆಯನ್ನು ಉಪನಿಷತ್ತು ಹಾಗೂ ಬ್ರಹ್ಮಸೂತ್ರಗಳು ವಿವರಿಸಿದ್ದಾವೆ- ಅಪರೋಕ್ಷಿಯು ಯಾವ ಯಾವ ಲೋಕಗಳನ್ನು ನೋಡಬಯಸುವನೋ ಅವನು ಅವನ ಯೋಗ್ಯತೆಗೆ ತಕ್ಕಂತೆ ಅಲ್ಲಿಗೆ ಪಯಣಿಸುವನು. ಇಷ್ಟಾರ್ಥಗಳನ್ನು ಪೂರೈಸಿಕೊಳ್ಳುವನು. ಇಂತಹ ಅಪರೋಕ್ಷಜ್ಞಾನಿಗಳ ಉಪಾಸನೆಯು ಸುಜನರಿಗೆ ಸುಖಸಂತೋಷಗಳನ್ನು ದೊರಕಿಸಿಕೊಡುವ ಮಾಧ್ಯಮವಾಗಿದೆ.

**'ಯಂ ಯಂ ಲೋಕಂ ಮನಸಾ ಸಂವಿಭಾತಿ**
**ವಿಶುದ್ಧಸತ್ತ್ವಃ ಕಾಮಯತೇ ಯಾಂಶ್ಚ ಕಾಮಾನ್ ।**
**ತಂ ತಂ ಲೋಕಂ ಜಯತೇ ತಾಂಶ್ಚ ಕಾಮಾನ್**
**ತಸ್ಮಾದಾತ್ಮಜ್ಞಂ ಹ್ಯರ್ಚಯೇತ್ ಭೂತಿಕಾಮಃ ॥'** (ಮುಂಡಕ. 3-1-10).

ಅಪರೋಕ್ಷಜ್ಞಾನಿಯಾದ ವ್ಯಕ್ತಿಯು ಕೂಡ ತನ್ನ ವರ್ಣಾಶ್ರಮಗಳಿಗೆ ಉಚಿತವಾದ ಕಾರ್ಯಗಳನ್ನು ಮಾಡುತ್ತಲೇ ಬದುಕಬೇಕು. ಕರ್ಮಾನುಷ್ಠಾನವು ಮೊದಲ ಹಂತದಲ್ಲಿ ಮನಸ್ಸಿನ ಹಾಗೂ ದೇಹೇಂದ್ರಿಯಗಳ ಕೊಳೆ ತೊಳೆದು ಜ್ಞಾನಕ್ಕೆ ಪಾತ್ರನನ್ನಾಗಿಸಿದರೆ ಅಪರೋಕ್ಷದ ನಂತರದಲ್ಲಿ ನಡೆಸುವ ಕರ್ಮಾನುಷ್ಠಾನವು ಮುಕ್ತಿಯಲ್ಲಿ ಅವರ ಯೋಗ್ಯತೆಗೆ ಅನುಗುಣವಾದ ಆನಂದದ ಅಭಿವ್ಯಕ್ತಿಗೆ ಕಾರಣವಾಗುತ್ತದೆ. ಈ ಹಿನ್ನೆಲೆಯಲ್ಲಿ ಅಪರೋಕ್ಷಜ್ಞಾನಿಯೂ ವಿಹಿತಕರ್ಮಗಳನ್ನು ತೊರೆಯುವಂತಿಲ್ಲ.

**'ಅತೀತಾನಾಗತಜ್ಞಾನೀ ತ್ರೈಲೋಕ್ಯೋದ್ಧರಣಕ್ಷಮಃ ।**
**ಏತಾದೃಶೋಽಪಿ ನಾಚಾರಂ ಶ್ರೌತಂ ಸ್ಮಾರ್ತಂ ಪರಿತ್ಯಜೇತ್ ॥'**

(ಬ್ರ.ಸೂ.ಭಾ. 3-4-30)

**'ಜ್ಞಾನಿನೋಽಪಿ ಯತೋ ಹ್ರಾಸಃ ಆನಂದಸ್ಯ ಭವೇದ್ಧ್ರುವಮ್ ॥'**

(ಈ.ಭಾ. 2).

ಹೀಗೆ ಸಾಧಕರು ವೈರಾಗ್ಯ-ಭಕ್ತಿ-ಉಪಾಸನಾ-ಜ್ಞಾನಗಳ ಮೂಲಕವಾಗಿ ಪರಮಾತ್ಮನನ್ನು ಪಡೆಯುತ್ತಾರೆ.

# VIII. ಮುಕ್ತಿ

ಶ್ರೀಮದ್ಭಾಗವತವು ಮುಕ್ತಿಯ ಲಕ್ಷಣವನ್ನು ವಿವರಿಸಿದೆ- **'ಮುಕ್ತಿರ್ಹಿತ್ವಾನ್ಯಥಾರೂಪಂ ಸ್ವರೂಪೇಣ ವ್ಯವಸ್ಥಿತಿಃ।'** (ಭಾಗ. 2-10-6)ಸ. ಇದರ ಆಶಯವು ಹೀಗಿದೆ- ಜೀವನು ಇಂದು ಇರುವುದಕ್ಕೆ ಬೇರೆಯಾಗಿ ಕಾಣಿಸಿಕೊಳ್ಳುತ್ತಿದ್ದಾನೆ. ಇಂತಹ ಅನ್ಯಥಾರೂಪದಿಂದ ಬಿಡುಗಡೆ ಹೊಂದಿ ಸಹಜಸ್ಥಿತಿಯಲ್ಲಿರುವುದೇ ಮುಕ್ತಿ.

ದ್ವೈತಸಿದ್ಧಾಂತದ ಪ್ರಕಾರ ಜೀವರು ಸಾತ್ವಿಕ-ರಾಜಸ-ತಾಮಸ ಎಂಬುದಾಗಿ ಮೂರು ಬಗೆಯಾಗಿದ್ದಾರೆ. ಸಾತ್ವಿಕಜೀವರು ಸ್ವಾಭಾವಿಕವಾಗಿ ಸೌಜನ್ಯ, ಹರಿಭಕ್ತಿ, ಗುರುಭಕ್ತಿ, ಸಮಾಜಸೇವೆ, ಪ್ರಾಮಾಣಿಕತೆ, ಮಾನವೀಯತೆ ಮೊದಲಾದ ಸದ್ಗುಣಗಳನ್ನು ರೂಢಿಸಿಕೊಂಡವರು. ನಿತ್ಯವೂ ಆನಂದಮಯವಾದ ಶಾಶ್ವತ ಬದುಕನ್ನು ಅನುಭವಿಸುವುದೇ ಇವರ ಮುಕ್ತಿಯಾಗಿದೆ. ಭಯೋತ್ಪಾದಕತೆ, ಕೊಲೆ, ಸುಲಿಗೆ, ಗಾಢಗೂಢದ್ವೇಷ, ಇನ್ನೊಬ್ಬರಿಗೆ ಸದಾ ಅಮಂಗಲ ಬಯಸುವಿಕೆ ಮೊದಲಾದ ಅನೇಕ ದುರ್ಗುಣಗಳ ತಾಣರಾದವರು ತಾಮಸರು. ಈ ಜೀವರು ಶಾಶ್ವತವಾಗಿ ದುಃಖಮಯವಾದ ನರಕಗಳಲ್ಲಿ ಕೊಳೆಯುತ್ತಾರೆ. ಇದು ಇವರ ಮುಕ್ತಿಯಾಗಿದೆ. ಮೇಲೆ ತಿಳಿಸಿದ ಇಬ್ಬಗೆಯ ಗುಣಗಳ ಮಿಶ್ರಣ ಹೊಂದಿದವರು ರಾಜಸರು. ಇವರು ಸುಖ-ದುಃಖಗಳ ಮಿಶ್ರಫಲವನ್ನು ಅನುಭವಿಸುತ್ತಾರೆ. ಇದೇ ಇವರ ಮುಕ್ತಿ. ಇಂದಿನ ಸಾಂಸಾರಿಕ ಬದುಕಿನಲ್ಲಿ ಈ ಮೂರು ಬಗೆಯ ಜೀವರು ಕೆಲವು ಪ್ರಸಂಗಗಳಲ್ಲಿ ಇರುವುದಕ್ಕಿಂತ ಬೇರೆಯಾಗಿ ಕಾಣಿಸಿಕೊಳ್ಳುತ್ತಾರೆ. ಅವರವರ ಸಾಧನೆ ಪಕ್ವಗೊಂಡಾಗ ತಮ್ಮ ನಿಜರೂಪವನ್ನು ಜಾಗೃತಗೊಳಿಸಿಕೊಳ್ಳುತ್ತಾರೆ. ಸಾತ್ವಿಕರು ತಾಮಸರ ಮುಕ್ತಿಯನ್ನಾಗಲೀ, ತಾಮಸರು ಸಾತ್ವಿಕರ ಮುಕ್ತಿಯನ್ನಾಗಲೀ ಪಡೆಯಲಾರರು. ನೀರು-ಗೊಬ್ಬರಗಳು ಬೇವು-ಮಾವುಗಳಲ್ಲಿರುವ ನೈಸರ್ಗಿಕ ಶಕ್ತಿಯನ್ನು ಅಭಿವ್ಯಕ್ತಿಗೊಳಿಸುವಂತೆ ಸೃಷ್ಟಿಯ ಮೂಲಕ ಸಾತ್ವಿಕ-ತಾಮಸರು ತಮ್ಮತನದ ಪೂರ್ಣ ಆವಿಷ್ಕಾರವನ್ನು ಪಡೆದುಕೊಳ್ಳುತ್ತಾರೆ. ಒಂದು ಇನ್ನೊಂದರಂತೆ ಕಾಣಬಹುದಾದರೂ ಇನ್ನೊಂದಾಗಲಾರದು. ವಸ್ತುಗಳಲ್ಲಿರುವ ಭಿನ್ನತೆ ಹಾಗೂ ವೈಚಿತ್ರ್ಯಗಳು ಅನ್ವೇಷಣಾತ್ಮಕ ದೃಷ್ಟಿ ಹಾಗೂ ಸತ್ಯಶೋಧನೆಯ ದಾರಿಯ ಪಯಣಿಗನಿಗೆ ಮಾತ್ರವೇ ಗೋಚರವಾಗುವ ಸಾರ್ವಕಾಲಿಕಸತ್ಯಗಳು.

**ಏಳು ಆವರಣಗಳು**

ಜೀವನು 1. ಅವಿದ್ಯೆ, 2. ಕಾಮ, 3. ಪ್ರಾರಬ್ಧಕರ್ಮ, 4. ಸ್ವಗುಣಾಚ್ಛಾದಿಕಾ, 5. ಪರಮಾಚ್ಛಾದಿಕಾ, 6. ಲಿಂಗಶರೀರ ಎಂಬುದಾಗಿ ಆರು ಆವರಣಗಳನ್ನು ಹೊಂದಿದ್ದಾನೆ. ಸಾಧನೆಯ ಮೂಲಕ ಬಿಂಬಸಾಕ್ಷಾತ್ಕರ ಪಡೆದು ಈ ಆವರಣಗಳನ್ನು ಕಳಚಿಕೊಂಡು ಪ್ರಳಯಕಾಲದಲ್ಲಿ ಪರಮಾತ್ಮನ ಉದರವನ್ನು ಪ್ರವೇಶಿಸುತ್ತಾನೆ. ಅನಂತರ ಹೊಸ ಬ್ರಹ್ಮಕಲ್ಪದಲ್ಲಿ ಲಕ್ಷ್ಮೀ ಸ್ವರೂಪವಾದ ಶ್ವೇತದ್ವೀಪ-ಅನಂತಾಸನ-ವೈಕುಂಠಗಳು ಆವಿರ್ಭಾವ ಗೊಂಡಾಗ ಶ್ವೇತದ್ವೀಪಪತಿಯಾದ ಪರವಾಸುದೇವನ ದರ್ಶನ ಹಾಗೂ ಕರುಣೆಯಿಂದ ತನ್ನದಾದ ಕೊನೆ ಇಲ್ಲದ ಆನಂದವನ್ನು ಅನುಭವಿಸುತ್ತಾನೆ. ಶಾಸ್ತ್ರಗಳ ಭಾಷೆಯಲ್ಲಿ ಇದನ್ನು ಶ್ರೀಹರಿಯ 'ಇಚ್ಛಾವರಣದ ಅಪಸರಣ'ವೆಂದು ಕರೆಯುತ್ತಾರೆ.

**ಮುಕ್ತಿಯ ನಾಲ್ಕು ಮಜಲುಗಳು**

ಕರ್ಮಕ್ಷಯ, ಉತ್ಕ್ರಾಂತಿ, ಮಾರ್ಗ, ಭೋಗ ಎಂಬುದಾಗಿ ಮುಕ್ತಿಯ ನಾಲ್ಕು ಹಂತಗಳನ್ನು ಶಾಸ್ತ್ರಗಳು ನಿರೂಪಿಸಿದ್ದಾವೆ. ಬಿಂಬಾಪರೋಕ್ಷವನ್ನು ಸಾಧಕನು ಪಡೆದಾಗ ಕರ್ಮಕ್ಷಯವು ಸಂಭವಿಸುವುದು- **'ತದಧಿಗಮೇ ಉತ್ತರಪೂರ್ವಾಘಯೋರಶ್ಲೇಷವಿನಾಶೌ ತದ್ವ್ಯಪದೇಶಾತ್'** (ಬ್ರ.ಸೂ. 4-1-13). ಮುಕ್ತಿಯೋಗ್ಯರಾದ ಜೀವರಾಶಿಗಳು ಮಾಡುವ ಕರ್ಮವನ್ನು ಪುಣ್ಯ-ಪಾಪ ಎಂಬುದಾಗಿ ಎರಡು ಬಗೆಯಾಗಿ ವಿಂಗಡಿಸಲಾಗಿದೆ. ಲೌಕಿಕಫಲಕಾಮನೆಗಾಗಿ ನಡೆಸುವ ಪುಣ್ಯಕರ್ಮವು ಕಾಮ್ಯವೆಂದು, ಹರಿಪ್ರೀತಿಗಾಗಿ ನಡೆಸುವ ಪುಣ್ಯಕಾರ್ಯವು ನಿಷ್ಕಾಮವೆಂದು ನಿರೂಪಿಸಲ್ಪಟ್ಟಿದ್ದಾವೆ. ಕಾಮ್ಯಕರ್ಮವು ಭೌತಿಕಜೀವನದಲ್ಲಿ ಸಂಪತ್ತಿ ಹಾಗೂ ಸ್ವರ್ಗಸುಖವನ್ನು ಕರುಣಿಸಬಲ್ಲದು. ನಿಷ್ಕಾಮಕರ್ಮವು ಅಪರೋಕ್ಷ ಜ್ಞಾನವನ್ನು ತಂದುಕೊಡುವ ಹಿರಿಮೆಯನ್ನು ಪಡೆದಿದೆ. ಅಪರೋಕ್ಷವನ್ನು ಪಡೆದ ನಂತರ ನಡೆಸುವ ನಿಷ್ಕಾಮಕರ್ಮಾನುಷ್ಠಾನವು ಮುಕ್ತಿಯಲ್ಲಿ ನಿರಂತರ ಹಾಗೂ ಸ್ಫುಟವಾದ ಆನಂದಾನುಭವಕ್ಕೆ ಕಾರಣವಾಗಿದೆ. ಅಪರೋಕ್ಷಜ್ಞಾನ ಜನಿಸಿದಾಗ ಸಂಚಿತವಾದ (ಒಂದೆಡೆ ಸೇರಿದ) ಪಾಪಕರ್ಮವು ವಿನಾಶಹೊಂದುವುದು- **'ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ ಕುರುತೇಽರ್ಜುನ ।'**. ಕರುಣಾಳುವಾದ ಶ್ರೀಹರಿಯು ತನ್ನ ಅಪರೋಕ್ಷವನ್ನು

ನೀಡಿದ ನಂತರ ಸಾಧಕರ ಪಾಪವನ್ನು ಅವರ ಪುಣ್ಯಕಾರ್ಯಗಳಿಗೆ ತಡೆಯೊಡ್ಡಿದ ಪಾಪಿಗಳಿಗೇ ವಿತರಿಸುವನು. ಇದನ್ನೇ, ಪಾಪವು ಭಸ್ಮವಾಗುವುದೆಂದು ಆಲಂಕಾರಿಕವಾಗಿ ವರ್ಣಿಸಲಾಗಿದೆ. ಸಾಧಕರು ಕೆರೆ-ಬಾವಿ ಕಟ್ಟಿಸುವುದು, ಸಮಾಜಸೇವೆ ಮಾಡುವುದು ಇವೇ ಮೊದಲಾದ ಮಾಧ್ಯಮಗಳಿಂದ ಗಳಿಸುವ ಪುಣ್ಯವನ್ನು 'ಅನಿಷ್ಟಪುಣ್ಯ'ವೆಂದು ಶಾಸ್ತ್ರಗಳು ಕರೆದಿವೆ. ಇಂತಹ ಪುಣ್ಯವನ್ನು ಜ್ಞಾನಿಗಳು ತಮ್ಮನ್ನು ಸೇವೆ ಮಾಡುವ ಸುಜನರಿಗೆ ಕರುಣಿಸಿ ಅನುಗ್ರಹಿಸುತ್ತಾರೆ. ಮಹಾತ್ಮರ ಸೇವೆ, ಪಾಠ-ಪ್ರವಚನ, ಗ್ರಂಥಲೇಖನಗಳಿಂದ ಬರುವ ಪುಣ್ಯವನ್ನು ಇಷ್ಟಪುಣ್ಯವೆಂದು ಕರೆಯುತ್ತಾರೆ. ಇಂತಹ ಪುಣ್ಯವನ್ನು ಜ್ಞಾನಿಗಳು ತಾವೇ ಉಳಿಸಿಕೊಳ್ಳುತ್ತಾರೆ. ಅನುಭವದ ಮೂಲಕವೇ ಪ್ರಾರಬ್ಧಕರ್ಮದ ಅಂಟು ತೊಳೆದುಕೊಳ್ಳುತ್ತಾರೆ-

**'ಪ್ರಾರಬ್ಧಕರ್ಮಣೋಽನ್ಯಸ್ಯ ಜ್ಞಾನಾದೇವ ಪರಿಕ್ಷಯಃ ।'** (ಸ.ಸಂ. 4-2)

ಪ್ರಾರಬ್ಧಕರ್ಮವು ಹರಿಶರಣರಿಗೆ ದುಃಖದ ತೀವ್ರತೆಯನ್ನು ನೀಡಲಾರದು- **'ಉಪಮರ್ದಂ ಚ'** (ಬ್ರ.ಸೂ. 3-4-16), **'ನ ವೈ ಜನೋ ಜಾತು ಕಥಂಚನಾವ್ರಜೇತ್ ಮುಕುಂದಸೇವ್ಯನ್ಯವದಂಗಸಂಸೃತಿಮ್'** (ಭಾಗ.).

**ಉತ್ಕ್ರಾಂತಿ**

ಉತ್ಕ್ರಾಂತಿ ಹಾಗೂ ಮಾರ್ಗವೆಂಬ ಎರಡು ಹಾಗೂ ಮೂರನೆಯ ಸೋಪಾನಗಳು ದೇವತೆಗಳ ಪರಿಧಿಯಿಂದ ಹೊರಗಿರುವ ಜೀವರಾಶಿಗಳಿಗೆ ಸಂಬಂಧಿಸಿವೆ- **'ಉತ್ಕ್ರಾಂತಿಮಾರ್ಗೌ ದೇವಾನಾಂ ನ ಪ್ರಾಯೇಣ ಭವಿಷ್ಯತಃ।'** (ಬ್ರ.ಸೂ. ಅನು. 4-2-1). ದೇವತೆಗಳಿಗಿಂತ ಭಿನ್ನರಾದ ಸಾಧಕರು ಬ್ರಹ್ಮನಾಡೀ ಅಥವಾ ಅದರ ಪ್ರಭೇದವಾದ ಇತರ ನಾಡಿಗಳಿಂದ ಚರಮಶರೀರದಿಂದ ಹೊರಬರುತ್ತಾರೆ. ದೇವತೆಗಳು ತಮಗಿಂತ ಉತ್ತಮರಾದ ದೇವತೆಗಳಲ್ಲಿ ಪ್ರವೇಶಮಾಡುವ ಮೂಲಕ ದೇಹವನ್ನು ತ್ಯಜಿಸಿ ಚತುರ್ಮುಖನ ಮೂಲಕ ಭಗವಂತನ ಉದರದೊಳು ಪ್ರವೇಶವನ್ನು ಪಡೆಯುತ್ತಾರೆ.

ಪ್ರಾರಬ್ಧಕರ್ಮವನ್ನು ಅನುಭಸಿದ ನಂತರ ಹೃದಯದಲ್ಲಿರುವ ಶ್ರೀಹರಿಯ ತೇಜಸ್ಸಿನಿಂದ ಹೃದಯದಲ್ಲಿ ತೇಜಸ್ಸು ಪ್ರವಹಿಸುತ್ತದೆ. ಮುಖ್ಯಪ್ರಾಣನೇ ಮೊದಲಾದ ತನ್ನ ಪರಿವಾರದೊಂದಿಗೆ ಶ್ರೀಹರಿಯು

ಜೀವನನ್ನು ಕರೆದುಕೊಂಡು ಪ್ರಕಾಶದ ಮೂಲಕ ಬ್ರಹ್ಮನಾಡಿಯನ್ನು ಪ್ರವೇಶಿಸುತ್ತಾನೆ. ಮೂಲಾಧಾರವನ್ನು ಆರಂಭಿಸಿ ಶಿರಸ್ಸಿನ ಮಧ್ಯಭಾಗದ ವರೆಗೆ ವ್ಯಾಪಿಸಿದ ಸುಷುಮ್ನಾನಾಡಿಯೇ ಬ್ರಹ್ಮನಾಡಿ ಎನಿಸಿದೆ. ದೇವತೆಗಳಿಗಿಂತ ಭಿನ್ನರಾದ ವ್ಯಾಪ್ತ್ಯೋಪಾಸಕರಿಗೆ ಸುಷುಮ್ನಾನಾಡಿಯ ಮೂಲಕವೇ ಉತ್ಕ್ರಮಣವು ಉಂಟಾಗುವುದು. ಮುಂದೆ ಮುಖ್ಯಪ್ರಾಣನು ಪಯಣಿಸುವನು. ಅವನ ಹಿಂದೆ ಜೀವನನ್ನು ಕರೆದುಕೊಂಡು ಶ್ರೀಹರಿಯು ಮುನ್ನಡೆಯುವನು.

ದೇವತೆಗಳಿಗೆ ತಮಗಿಂತ ಉತ್ತಮರಾದ ದೇವತೆಗಳಲ್ಲಿ ಲಯವುಂಟಾ ಗುವುದೆಂದು ಹಿಂದೆ ಹೇಳಲಾಯಿತು. ಆ ಕ್ರಮವನ್ನು ಹೀಗೆ ಅರಿಯ ಬಹುದಾಗಿದೆ- ಮನುಷ್ಯೋತ್ತಮರು, ನಿರ್ಋತಿ ಇವರಿಗೆ ಯಮನಲ್ಲಿ ಪ್ರವೇಶವಾಗುವುದು. ಯಮನು ಪಿತೃಗಣದೊಂದಿಗೆ ಸ್ವಾಯಂಭುವ ಮನುವಿನಲ್ಲಿ ಪ್ರವೇಶಿಸುವನು. ಸ್ವಾಯಂಭುವ ಮನು ಅಗ್ನಿ ಮೊದಲಾದವರು ಸೂರ್ಯನನ್ನು ಪ್ರವೇಶಿಸಿ ತಮ್ಮ ದೇಹವನ್ನು ತೊರೆಯುವರು. ಸೂರ್ಯ, ವಿನಾಯಕ ಮೊದಲಾದವರು ಬೃಹಸ್ಪತಿಯಲ್ಲಿಯೂ, ಬೃಹಸ್ಪತಿ, ಮನು, ದಕ್ಷ ಹಾಗೂ ಶಚೀದೇವಿಯು ಇಂದ್ರನಲ್ಲಿ ಪ್ರವೇಶವನ್ನು ಪಡೆಯುವರು. ಇಂದ್ರನು ಗರುಡನ ಮಡದಿಯಾದ ಸೌಪರ್ಣಿಯಲ್ಲಿಯೂ, ಅವಳು ಗರುಡನಲ್ಲಿಯೂ ಪ್ರವೇಶವನ್ನು ಹೊಂದುತ್ತಾಳೆ. ಇದನ್ನು 'ಗರುಡ ಮಾರ್ಗ'ವೆಂದು ಕರೆಯಲಾಗಿದೆ. ಇದರಂತೆ ಇನ್ನೊಂದು ಮಾರ್ಗವಿದೆ. ಗಂಧರ್ವರು ಕುಬೇರನಲ್ಲಿ, ಕುಬೇರ ಹಾಗೂ ವರುಣನು ಸೋಮ ನಲ್ಲಿಯೂ, ಸೋಮ ವಿಷ್ವಕ್ಸೇನ ಮೊದಲಾದವರು ಅನಿರುದ್ಧನಲ್ಲಿಯೂ, ರತಿ, ಅನಿರುದ್ಧ ಹಾಗೂ ಸನಕಾದಿಗಳು ಕಾಮದೇವನಲ್ಲಿಯೂ, ಕಾಮದೇವನು ಶೇಷನ ಮಡದಿಯಾದ ವಾರುಣಿಯಲ್ಲಿಯೂ, ವಾರುಣಿಯು ಶೇಷನಲ್ಲಿಯೂ ಪ್ರವೇಶವನ್ನು ಪಡೆಯುತ್ತಾಳೆ. ಇದನ್ನು 'ಶೇಷಮಾರ್ಗ' ವೆಂದು ವರ್ಣಿಸಲಾಗಿದೆ. ಹೀಗೆ ಗರುಡ-ಶೇಷರನ್ನು ಸೇರಿದ ದೇವತೆಗಳ ಗುಂಪು ಅಂತಿಮವಾಗಿ ಸರಸ್ವತಿಯ ಮೂಲಕ ಬ್ರಹ್ಮದೇವರನ್ನು ಅನಂತರ ಲಕ್ಷ್ಮೀದೇವಿಯನ್ನು ಸೇರಿಕೊಂಡು ನಾರಾಯಣನ ಉದರದಲ್ಲಿ ವಿಲೀನ ವಾಗುವುದು. **'ವಾಙ್ಮನಸಿ ದರ್ಶನಾತ್ ಶಬ್ದಾಚ್ಚ'** (ಬ್ರ.ಸೂ. 4-1), **'ಅತ**

ಏವ ಚ ಸರ್ವಾಣ್ಯನು' (ಬ್ರ.ಸೂ. 4-2-3), 'ಸೋಽಧ್ಯಕ್ಷೇ ತದುಪಗಮಾದಿಭ್ಯಃ' (ಬ್ರ.ಸೂ. 4-2-4), 'ಭೂತೇಷು ತಚ್ಛ್ರುತೇಃ' (ಬ್ರ.ಸೂ. 4-2-5)

**ಮಾರ್ಗ**

ಮನುಷ್ಯೋತ್ತಮರು ತಮ್ಮ ಅಂತಿಮ ಶರೀರವನ್ನು ತೊರೆದು ಅರ್ಚಿರ್ಲೋಕವನ್ನು ಪಡೆಯುತ್ತಾರೆ. ಅಲ್ಲಿ ಸತ್ಕೃತರಾಗಿ ಆತಿವಾಹಿಕ ಲೋಕಕ್ಕೆ ಆಗಮಿಸುವರು. ಅಲ್ಲಿ ಪುನಃ ಉಚಿತವಾದ ಸತ್ಕಾರವನ್ನು ಸ್ವೀಕರಿಸಿ ಹಗಲಿನ ಅಭಿಮಾನಿಯಾದ ದೇವತೆಯ ಲೋಕಕ್ಕೆ ಆಗಮಿಸುವರು. ಅನಂತರ ಕ್ರಮವಾಗಿ ಮೇಲಿರುವ ಶುಕ್ಲಪಕ್ಷದ ಅಭಿಮಾನಿಯ ಲೋಕ, ಉತ್ತರಾಯಣಾಭಿಮಾನಿ ಲೋಕ, ಸಂವತ್ಸರಾಭಿಮಾನಿ ಲೋಕ, ವಿದ್ಯುದಭಿಮಾನಿಲೋಕ, ವರುಣಲೋಕ, ಪ್ರಜಾಪತಿಲೋಕ, ಸೂರ್ಯಲೋಕ, ಚಂದ್ರಲೋಕ, ವೈಶ್ವಾನರಲೋಕ, ಇಂದ್ರಲೋಕ, ಧ್ರುವಲೋಕಗಳಿಗೆ ತೆರಳುವರು. ಅನಂತರ ಭಾರತೀದೇವಿಯ ಲೋಕಕ್ಕೆ ಆಗಮಿಸುವರು. ಅವಳ ಅನುಗ್ರಹದಿಂದ ಮುಖ್ಯಪ್ರಾಣದೇವರ ಬಳಿ ಬಂದು ಅಲ್ಲಿ ತಂಗುವರು. ಅನಂತರ ಬ್ರಹ್ಮದೇವರ ಆಯುರ್ಮಾನವು ಮುಗಿಯುತ್ತ ಬಂದಂತೆ ವಿರಜಾನದಿಯಲ್ಲಿ ಬ್ರಹ್ಮದೇವರೊಡನೆ ಮಿಂದು ತಮ್ಮ ಲಿಂಗಶರೀರವನ್ನು ಕಳೆದುಕೊಂಡು ಪರಮಾತ್ಮನ ಉದರವನ್ನು ಪ್ರವೇಶಿಸುವರು.

**ಉತ್ಕ್ರಾಂತಸ್ತು ಶರೀರಾತ್ ಸ್ವಾತ್ ಗಚ್ಛತ್ಯರ್ಚಿಷಮೇವ ತು ।**
**ತತೋ ಹಿ ವಾಯೋಃ ಪುತ್ರಂ ಚ ಯೋಽಸೌ ನಾಮ್ನಾಽತಿವಾಹಿಕಃ ।**
**ತತೋಽಹಃ ಪೂರ್ವಪಕ್ಷಂ ಚಾಪ್ಯುದಕ್ಸಂವತ್ಸರಂ ತಥಾ ।**
**ತಟಿತಂ ವರುಣಂ ಚೈವ ಪ್ರಜಾಪಂ ಸೂರ್ಯಮೇವ ಚ ।**
**ಸೋಮಂ ವೈಶ್ವಾನರಂ ಚೇಂದ್ರಂ ಧ್ರುವಂ ದೇವೀಂ ದಿವಂ ತಥಾ ।**
**ತತೋ ವಾಯುಂ ಪರಂ ಪ್ರಾಪ್ಯ ತೇನೈತಿ ಪುರುಷೋತ್ತಮಮ್ ॥**

(ಬ್ರ.ಸೂ.ಭಾ. 4-3-5)

**ಸಾಲೋಕ್ಯ**

ಸಾಲೋಕ್ಯ-ಸಾಮೀಪ್ಯ-ಸಾರೂಪ್ಯ-ಸಾಯುಜ್ಯ ಎಂಬುದಾಗಿ ಮುಕ್ತರು ಪಡೆಯುವ ಭೋಗವನ್ನು ನಾಲ್ಕು ಬಗೆಯಾಗಿ ವಿಶ್ಲೇಷಿಸಲಾಗಿದೆ. ಎಲ್ಲ ಮುಕ್ತರೂ ವೈಕುಂಠಾದಿ ಲೋಕಗಳಲ್ಲಿಯೇ ವಾಸಮಾಡುವರೆಂದು

ತಿಳಿಯಬಾರದು. ಅವರವರ ಯೋಗ್ಯತೆಗೆ ಅನುಗುಣವಾಗಿ ಆಯಾಯಾ ಲೋಕಗಳಲ್ಲಿ ಇದ್ದು ಮುಕ್ತಜೀವರು ತಮ್ಮದಾದ ಅಮಂದವಾದ ಆನಂದವನ್ನು ಅನುಭವಿಸುತ್ತಾರೆ.

**'ಕೇಚಿದತ್ರೈವ ಮುಚ್ಯಂತೇ ನೋತ್ಕ್ರಾಮಂತಿ ಕದಾಚನ ।'** (ಬ್ರ.ಸೂ.ಭಾ. 4-4-19). ಇದನ್ನು ಸಾಲೋಕ್ಯಮುಕ್ತಿ ಎಂದು ಕರೆಯುತ್ತಾರೆ.

**ಸಾಮೀಪ್ಯ**

ಪರಮಾತ್ಮನ ಸಮೀಪದಲ್ಲಿದ್ದುಕೊಂಡು ವಿಶಿಷ್ಟ ಭೋಗಗಳನ್ನು ಅನುಭವಿಸುವ ಋಷಿಗಳು ಸಾಮೀಪ್ಯಮುಕ್ತಿಯನ್ನು ಪಡೆಯುವವರೆನಿಸಿದ್ದಾರೆ.

**'ತತ್ರಾಪಿ ಕ್ರಮಯೋಗೇನ ಜ್ಞಾನಾಧಿಕ್ಯಾತ್ ಸಮೀಪಗಾಃ ।'**

(ಬ್ರ.ಸೂ.ಭಾ. 4-4-1)

**'ಉಪಾಸನಾಬಲಾನ್ಮುಕ್ತೌ ಭೋಗಾನ್ ಕರ್ಮಫಲಾನ್ ಸದಾ ।**
**ಭುಂಕ್ತೇ ವಿಷ್ಣೋಃ ಸಮೀಪಸ್ಥೋ ಸರ್ವದೋಷವಿವರ್ಜಿತಃ ॥'.**

**ಸಾರೂಪ್ಯ**

'ಸರ್ವೇ ಚತುರ್ಬಾಹವ ಉನ್ಮಿಷನ್‌ಮಣಿಪ್ರವೇಕನಿಷ್ಕಾಭರಣಾಃ ಸುಪೇಶಸಃ' ಎಂಬುದಾಗಿ ದ್ವಿತೀಯಸ್ಕಂದ ಭಾಗವತವು ವರ್ಣಿಸುವಂತೆ ವಿಷ್ಣುವಿನಂತೆ ಚತುರ್ಬಾಹುಗಳು, ಶಂಖ-ಚಕ್ರ-ಗದೆಯೇ ಮೊದಲಾದ ಆಯುಧಗಳಿಂದ ಅಲಂಕೃತರಾದ ಜಯ-ವಿಜಯರೇ ಮೊದಲಾದವರು ಸಾರೂಪ್ಯಮುಕ್ತಿಯನ್ನು ಪಡೆಯುವರು.

**ಸಾಯುಜ್ಯ**

ಶ್ರೀಹರಿಯ ಅಂಗಾಂಗಗಳಿಂದ ಜನಿಸಿದ ವಿಶಿಷ್ಟ ದೇವತೆಗಳು ಅವನ ಅಂಗಾಂಗಗಳಲ್ಲಿಯೇ ಆಸೀನರಾಗಿ ತಮ್ಮದಾದ ಆನಂದವನ್ನು ಅನುಭವಿಸುವುದು ಸಾಯುಜ್ಯ ಮುಕ್ತಿ ಎನಿಸಿದೆ. ಹರಿಯ ಶರೀರದಲ್ಲಿಯೇ ಪ್ರವೇಶವನ್ನು ಪಡೆದು ಅವನ ಅಂಗಾಂಗಗಳಿಂದಲೇ ದರ್ಶನ, ಗಮನಾಗಮನಗಳನ್ನು ನಡೆಸುವ ಇವರ ಭಾಗ್ಯ ಬಹು ದೊಡ್ಡದು. ಆದರೆ ಹರಿಶರೀರದಲ್ಲಿಯೇ ಇರಬೇಕೆಂಬ ನಿರ್ಬಂಧವಿಲ್ಲ.

**'ಆದತ್ತೇ ಹರಿಹಸ್ತೇನ ಹರಿದೃಷ್ಟ್ಯೈವ ಪಶ್ಯತಿ ।**
**ಗಚ್ಛೇಚ್ಚ ಹರಿಪಾದಾಭ್ಯಾಂ ಮುಕ್ತಸ್ಯೈಷಾ ಸ್ಥಿತಿರ್ಭವೇತ್ ॥'**
(ಬ್ರ.ಸೂ.ಭಾ. 4-4-5)

**'ಉತ್ತರೇಷೂತ್ತರೇಷ್ವೇವಂ ಯಾವದ್ವಾಯುಂ ವಿಮುಕ್ತಿಗಾಃ ।**
**ಪ್ರವಿಶ್ಯ ಭುಂಜತೇ ಭೋಗಾನ್ ತದಂತರ್ಬಹಿರೇವ ವಾ ।**
**ವಾಯುರ್ವಿಷ್ಣುಂ ಪ್ರವಿಶ್ಯೈವ ........... ॥'** (ಸ.ಶಾ.ಸಂ. 4-4-23).

## IX. ಉಪಸಂಹಾರ

ವೇದಶಾಸ್ತ್ರಗಳಲ್ಲಿ ಹಾಸುಹೊಕ್ಕಾದ ಹರಿಪಾರಮ್ಯದ ಸಿದ್ಧಾಂತವನ್ನು ವಿಶ್ವದಾದ್ಯಂತ ಪ್ರಚುರಪಡಿಸಿದ ಮಧ್ವಾಚಾರ್ಯರು ಹಾಗೂ ಅವರ ಪರಂಪರೆಯ ಅನುಭಾವಿಗಳು ವಿಷ್ಣುಭಕ್ತಿಯ ಗಂಗಾನದಿಯನ್ನು ಎಲ್ಲೆಡೆ ಹರಿಸಿದರು. ಹರಿಭಕ್ತಿಯು ಎಲ್ಲರಿಗೆ ದೊರಕಬಹುದಾದ ಸಂಪತ್ತಿ ಎಂದು ಸಾರಿದ ಶ್ರೀಮಧ್ವರು ಅಂತರಂಗದ ಶುದ್ಧಿಗೆ ಹೆಚ್ಚಿನ ಮಹತ್ವ ನೀಡಿದರು. ವಿದ್ಯೆಯನ್ನು ಬಯಸಿ ಬಂದ ಜಿಜ್ಞಾಸುವಿಗೆ ಅನ್ನ-ವಸತಿಗಳನ್ನಿತ್ತು ವಿದ್ಯಾದಾನ ಮಾಡಲು ಆದೇಶ ನೀಡಿದರು- **'ವಿದ್ಯಾರ್ಥೇ ವಸತೀಚ್ಛಯಾ ಆಗತಂ ನೇತಿ ನ ಬ್ರೂಯಾತ್ । ತದೇತತ್ ವಿದುಷೋ ವ್ರತಮ್ ।'** (ತೈ.ಭಾ.). ಎಲ್ಲ ವರ್ಗದಲ್ಲಿ ಶೋಷಿತರಾದ ವ್ಯಕ್ತಿಗಳಲ್ಲಿ ಪರಮಾತ್ಮನನ್ನು ಗುರುತಿಸಿ ಸಾಧ್ಯವಿದ್ದ ಉಪಕಾರವನ್ನು ಮಾಡುವುದು ಭಗವಂತನಿಗೆ ನೀಡುವ 'ಕರ' (Tax) ಎಂದರು- **'ನಾನಾಜನಸ್ಯ ಶುಶ್ರೂಷಾ ಕರ್ತವ್ಯಾ ಕರವನ್ಮಿತೇಃ'** (ಗೀತಾ.ತಾ.). ನಾವು ಎಲ್ಲಿ ಹುಟ್ಟಿದ್ದೇವೆ ಎಂಬುದು ಪ್ರಮುಖ ಸಂಗತಿಯಲ್ಲ. ಹೇಗೆ ಬದುಕಬೇಕೆಂಬುದೇ ಪ್ರಧಾನವಾಗಿ ಅರಿಯಬೇಕಾದ ಸಂಗತಿ. ಹರಿಯನ್ನು ಅರಿಯಲು ಹಲವು ಅವಕಾಶಗಳನ್ನು ಅವನು ಕರುಣಿಸಿದಾಗ ಅಪವ್ಯಯ ಮಾಡಿಕೊಂಡ ನಮಗೆ ದುಃಖದಾಯಕಜನ್ಮಗಳು ಸಂಭವಿಸುತ್ತವೆ. ಮಾನವನಾಗಿ ಹುಟ್ಟಿದ ಪ್ರತಿಯೊಬ್ಬ ವ್ಯಕ್ತಿಯು ಏಕಾದಶೀವ್ರತಾಚರಣೆ, ನಾಮಸ್ಮರಣೆ, ನೈತಿಕ ಬದುಕಿನ ಮೂಲಕ ಸಮುನ್ನತಿಯನ್ನು ಪಡೆಯಬಹುದೆಂದು ಸಂದೇಶಿಸಿದರು. ಶ್ರೀಮಧ್ವರೆಂಬ ಹಿಮಾಲಯದಿಂದ ಹರಿದ ತತ್ತ್ವಜ್ಞಾನಗಂಗೆ ವ್ಯಾಸಸಾಹಿತ್ಯ-ದಾಸಸಾಹಿತ್ಯ ಎಂಬುದಾಗಿ ಎರಡು ಭಾಷಾಮಾಧ್ಯಮಗಳಲ್ಲಿ ಹರಿದು ಜಗತ್ಪಾವನಿಯಾಗಿದೆ. ಭಾಷೆ ವಿಭಿನ್ನ

ವಾದರೂ ಒಳಗಿರುವ ಭಾವ ಏಕರೂಪವಾಗಿದೆ. ಸುಜನರಿಗೆಲ್ಲ ಆಸ್ವಾದ್ಯವಾದ ಈ ದರ್ಶನದ ಚಿಂತನೆಗಳು ಚಿರಂತನವಾಗಿವೆ.

0-0-0

# ಮೂರು ದರ್ಶನಗಳಲ್ಲಿರುವ ಸಮಾನತೆಗಳು

**ಅದ್ವೈತ-ವಿಶಿಷ್ಟಾದ್ವೈತ ಹಾಗೂ ದ್ವೈತ ಸಿದ್ಧಾಂತಗಳಲ್ಲಿ ಸ್ಥೂಲವಾಗಿ ಕೆಲವು ಸಮಾನತೆಗಳನ್ನು ನಾವು ಕಾಣಬಹುದಾಗಿದೆ.**

ವಿಷ್ಣು ಪರದೇವತೆ ಎಂಬ ಸಂಗತಿ ಆಚಾರ್ಯತ್ರಯರಿಗೆ ಸಮ್ಮತವಾಗಿದೆ.

1. 'ನಾರಾಯಣಃ ಪರೋಽವ್ಯಕ್ತಾತ್ ಅಂಡಮವ್ಯಕ್ತಸಂಭವಮ್ ।
ಅಂಡಸ್ಯಾಂತಸ್ತ್ವಿಮೇ ಲೋಕಾಃ ಸಪ್ತದ್ವೀಪಾಚ ಮೇದಿನೀ ॥'
(ಭಗವದ್ಗೀತಾ ಶಾಂಕರಭಾಷ್ಯಮ್, ಪುಟ 1)

2. '...ಜಗತಃ ಸ್ಥಿತಿಂ ಪರಿಪಿಪಾಲಯಿಷುಃ ಆದಿಕರ್ತಾ ನಾರಾಯಣಾಖ್ಯೋ ವಿಷ್ಣುರ್ಭೌಮಸ್ಯ ಬ್ರಹ್ಮಣೋ ಬ್ರಾಹ್ಮಣತ್ವಸ್ಯ ರಕ್ಷಣಾರ್ಥಂ ದೇವಕ್ಯಾಂ ವಸುದೇವಾಂಶೇನ ಕೃಷ್ಣಃ ಕಿಲ ಸಂಬಭೂವ ।.... ಸ ಏವ ಭಗವಾನ್ ಜ್ಞಾನೈಶ್ವರ್ಯ ಶಕ್ತಿಬಲ-ವೀರ್ಯತೇಜೋಭಿಃ ಸದಾ ಸಂಪನ್ನಃ ...'
(ಭಗವದ್ಗೀತಾ ಶಾಂಕರಭಾಷ್ಯಮ್, ಪುಟ 2)

3. 'ಕಲ್ಯಾಣಗುಣಗಣೌಘಮಹಾರ್ಣವಃ ಪುರುಷೋತ್ತಮೋ ನಾರಾಯಣ ಏವ ನಿಖಿಲಜಗದೇಕಕಾರಣಂ ಜಿಜ್ಞಾಸ್ಯಂ ಬ್ರಹ್ಮ।'
(ಶ್ರೀಭಾಷ್ಯ 1- 1- 12)

4. 'ಹರಿರೇವ ಪರೋ ಹರಿರೇವಗುರುಃ
ಹರಿರೇವ ಜಗತ್ಪಿತೃಮಾತೃಗತಿಃ ।
ನ ತತೋಽಸ್ತ್ಯಪರಂ ಜಗತೀಡ್ಯತಮಂ...... ॥' (ದ್ವಾದಶಸ್ತೋತ್ರ)

5. 'ವಿಷ್ಣೋಸ್ಸರ್ವೋತ್ತಮತ್ವೇ ಏವ
ಸರ್ವಾಗಮಾನಾಂ ತಾತ್ಪರ್ಯಮ್ ।'
(ವಿಷ್ಣುತತ್ತ್ವ ನಿರ್ಣಯ)

ಬ್ರಹ್ಮ ಸ್ವರೂಪದ ಬಗ್ಗೆ ಕೆಲವು ಸೂಕ್ಷ್ಮ ಭಿನ್ನ ವಿಚಾರಗಳಿದ್ದರೂ ಸ್ಥೂಲವಾಗಿ ಈ ಸಾಮ್ಯವನ್ನು ಗಮನಿಸಬಹುದಾಗಿದೆ.

**ವೇದವು ಅಪೌರುಷೇಯವು ಮತ್ತು ಪರಮಪ್ರಮಾಣವೆಂಬುದು ಮೂವರು ಆಚಾರ್ಯರಿಗೆ ಸಮ್ಮತವಾಗಿದೆ**

1. 'ಶ್ರುತಿಶ್ಚ ನಃ ಪ್ರಮಾಣಮತೀಂದ್ರಿಯಾರ್ಥವಿಜ್ಞಾನೋತ್ಪತ್ತೌ ।'
(ಶಾಂಕರ ಸೂತ್ರಭಾಷ್ಯ 2-3-1)

2. 'ಶಾಸ್ತ್ರೈಕಪ್ರಮಾಣಕಃ ಪರಬ್ರಹ್ಮಭೂತಸ್ಸರ್ವೇಶ್ವರಃ ಪುರುಷೋತ್ತಮಃ।'
(ಶ್ರೀಭಾಷ್ಯ 1-1-3)

3. 'ನೇಂದ್ರಿಯಾಣಿ ನಾಮಮಾನಂ ವೇದಾ ಹ್ಯೇವೈನಂ ವೇದಯಂತಿ ತಸ್ಮಾದ್ ಆಹುರ್ವೇದಾಃ ।' (ವಿಷ್ಣುತತ್ತ್ವನಿರ್ಣಯ)

4. 'ವೇದಾಃ ನಿತ್ಯತ್ವಾನ್ಮಾನ ಮುತ್ತಮಮ್ ।' (ಸರ್ವಶಾಸ್ತ್ರಾರ್ಥಸಂಗ್ರಹ)

**ಭಕ್ತಿಯೇ ಮುಕ್ತಿಗೆ ಉಪಾಯವೆಂಬುದು ಮೂವರು ಆಚಾರ್ಯರಿಗೆ ಸಮ್ಮತವಿದೆ.**

1. 'ಏವಂ ಭಗವತಃ ಸತ್ಯಪ್ರತಿಜ್ಞತ್ವಂ ಬುದ್ಧ್ವಾ ಭಗವದ್ ಭಕ್ತೇರವಶ್ಯಂಭಾವಿ ಮೋಕ್ಷಫಲಮವಧಾರ್ಯ ಭಗವಚ್ಛರಣೈಕ ಪರಾಯಣೋ ಭವೇದಿತಿ ವಾಕ್ಯಾರ್ಥಃ । (ಶಾಂಕರಗೀತಾಭಾಷ್ಯ 18-65)

2. '.... ವಿಶದತಮಪ್ರತ್ಯಕ್ಷತಾಪನ್ನ ಅನುಧ್ಯಾನರೂಪಭಕ್ತ್ಯೈಕಲಭ್ಯಃ।'
(ವೇದಾರ್ಥಸಂಗ್ರಹಃ ಪುಟ 96)

3. 'ಭಕ್ತಿಸ್ತ್ವೇಕಾ ವಿಮುಕ್ತಯೇ ।' (ಮ.ತಾ.ನಿ. 1.98)

**ಕರ್ಮವು ಜ್ಞಾನಕ್ಕೆ ಅಂಗ ಮತ್ತು ಮನಃಶುದ್ಧಿಗೆ ಕಾರಣ ಎಂಬ ಪ್ರಮೇಯವು ಮೂವರು ಆಚಾರ್ಯರಿಗೆ ಸಮ್ಮತವಾಗಿದೆ.**

1. '........ ಅಗ್ನಿಹೋತ್ರಾದಿಲಕ್ಷಣಂ ಕರ್ಮ ಬ್ರಹ್ಮಚರ್ಯಾದಿಲಕ್ಷಣಂ ಚ ಅನುಗ್ರಾಹಕಂ ಭವತಿ ವಿದ್ಯೋತ್ಪತ್ತಿಂ ಪ್ರತಿ ।'
(ತೈತ್ತಿರೀಯ ಶಾಂಕರಭಾಷ್ಯ 1.11.)

2. 'ಆಶ್ರಮವಿಹಿತಕರ್ಮಾನುಷ್ಠಾನೇನೈವ ವಿದ್ಯಾನಿಷ್ಪತ್ತಿಃ'

3. 'ಶಾಸ್ತ್ರಜನ್ಯಜ್ಞಾನಪೂರ್ವಕ ಕರ್ಮಯೋಗಃ ಸ್ಥಿತಪ್ರಜ್ಞತಾಖ್ಯ ಜ್ಞಾನ-ನಿಷ್ಠಾಮಾಪಾದಯತಿ ।' (ರಾಮಾನುಜ ಗೀ.ಭಾ.2.53)

4. 'ಅಜ್ಞಾನಾಂ ಜ್ಞಾನದಂ ಕರ್ಮ ಜ್ಞಾನಿನಾಂ ಲೋಕಸಂಗ್ರಹಾತ್ ।
ಅದ್ಧೈವ ತುಷ್ಟಿದಂ ಮಹ್ಯಂ ಸಾ ಮುಕ್ತಾವಾನಂದಪೂರ್ತಿದಾ ॥'
(ಗೀತಾತಾತ್ಪರ್ಯ 3.20)

**ಡಾ|| ಎ.ವಿ.ನಾಗಸಂಪಿಗೆಯವರಿಂದ**
**ವಿಮರ್ಶಾತ್ಮಕವಾಗಿ ಸಂಪಾದಿಸಿ**
**ಮುದ್ರಿತವಾದ ಸಂಸ್ಕೃತ ಹಸ್ತಪ್ರತಿಗಳು**

1. ಗಂಭೀರ ವಂಶಜನ **ನ್ಯಾಯ ಸೂತ್ರವಿವರಣಂ**
   ಪುಟ ಸಂ– 375 ಪ್ರಕಾಶನ ವರ್ಷ– 1993
   ಪ್ರಕಾಶಕರು–ಪ್ರಾಚ್ಯ ವಿದ್ಯಾಸಂಶೋಧನಾಲಯ ಮೈಸೂರು ವಿಶ್ವವಿದ್ಯಾನಿಲಯ
2. **ಶಕ್ತಿನಿಧಿ** (ಸಹ ಸಂಪಾದಕರು)
   ಪುಟ ಸಂ– 500 ಪ್ರಕಾಶನ ವರ್ಷ– 1997
   ಪ್ರಕಾಶಕರು– ಪ್ರಾಚ್ಯ ವಿದ್ಯಾಸಂಶೋಧನಾಲಯ ಮೈಸೂರು ವಿಶ್ವವಿದ್ಯಾನಿಲಯ
3. ಶ್ರೀವಿದ್ಯಾಧೀಶತೀರ್ಥರ **ಓಂಕಾರವಾದ**
4. ಶ್ರೀಶ್ರೀನಾಥಾಚಾರ್ಯರ **ತಾರಸ್ವರೂಪ ಪ್ರಕಾಶ**
   ಪುಟ ಸಂ–200 ಪ್ರಕಾಶನ ವರ್ಷ–2000
   ಪ್ರಕಾಶಕರು,ಪ್ರಾಚ್ಯ ವಿದ್ಯಾಸಂಶೋಧನಾಲಯ ಮೈಸೂರು,ವಿಶ್ವವಿದ್ಯಾನಿಲಯ
5. ಆನಂದತೀರ್ಥ ಭಗವತ್ಪಾದರ **ಸದಾಚಾರ ಸ್ಮೃತಿ**
6. ಶ್ರೀನಿವಾಸತೀರ್ಥರ **ಆಹ್ನಿಕ ಕೌಸ್ತುಭ**
7. ನರಸಿಂಹಾಚಾರ್ಯರ **ಪ್ರಕಾಶಿಕಾ**
8. ಮುದ್ಗಲ ನರಸಿಂಹಾಚಾರ್ಯರ **ತಂತ್ರದೀಪಿಕಾ**
   ಪುಟ ಸಂ.350 ಪ್ರಕಾಶನ ವರ್ಷ– 2000
   ಪ್ರಕಾಶಕರು – ಪ್ರಾಚ್ಯವಿದ್ಯಾಸಂಶೋಧನಾಲಯ, ಮೈಸೂರು ವಿಶ್ವವಿದ್ಯಾನಿಲಯ
9. **ಸುಭಾಷಿತಗಳು** (ಕನ್ನಡ ಮತ್ತು ಇಂಗ್ಲಿಷ್ ಭಾಷಾಂತರಸಹಿತ)
   ಪುಟ ಸಂ–90 ಪ್ರಕಾಶನ ವರ್ಷ 2002
   ಪ್ರಕಾಶಕರು– ಪೂರ್ಣಪ್ರಜ್ಞಸಂಶೋಧನ ಮಂದಿರ,ಬೆಂಗಳೂರು–28
10. ವನಮಾಲಿಮಿಶ್ರರ **ಶ್ರುತಿಸಿದ್ಧಾಂತ ಸಂಗ್ರಹ**
    ಪುಟ ಸಂ– 350 ಪ್ರಕಾಶನ ವರ್ಷ– 2002
    ಪ್ರಕಾಶಕರು– ಪೂರ್ಣಪ್ರಜ್ಞಸಂಶೋಧನ ಮಂದಿರಂ,ಬೆಂಗಳೂರು–28

11. ಆನಂದತೀರ್ಥ ಭಗವತ್ಪಾದರ **ತಂತ್ರಸಾರ ಸಂಗ್ರಹ**
12. ಶ್ರೀನಿವಾಸಾಚಾರ್ಯರ **ಪ್ರಕಾಶಿಕಾ**
13. **ಸನತ್‌ಕುಮಾರ ಗೃಹ ವಾಸ್ತು ಶಾಸ್ತ್ರಮ್**
(ಕನ್ನಡ ಮತ್ತು ಇಂಗ್ಲಿಷ್‌ನಲ್ಲಿ ವಿಸ್ತೃತ ವಿವರಣೆ ಸಹಿತ)
ಪುಟ ಸಂ.350 ಪ್ರಕಾಶನ ವರ್ಷ–2003
ಪ್ರಕಾಶಕರು– ಪ್ರಾಚ್ಯ ವಿದ್ಯಾಸಂಶೋಧನಾಲಯ ಮೈಸೂರು, ವಿಶ್ವವಿದ್ಯಾನಿಲಯ

14. ನರಹರಿ ಆಚಾರ್ಯರ **ಪ್ರಮಾಣಸಂಗ್ರಹ**
ಪುಟ ಸಂ–130 ಪ್ರಕಾಶನ ವರ್ಷ–2003
ಪ್ರಕಾಶಕರು– ಪೂರ್ಣಪ್ರಜ್ಞಸಂಶೋಧನ ಮಂದಿರಂ, ಬೆಂಗಳೂರು–28

15. ಶ್ರೀ ಕೃಷ್ಣಾವಧೂತರ **ಯಾಜ್ಞೀಯೋಪನಿಷದ್‌ಪ್ರಭಾ**
ಪುಟ ಸಂ.64 ಪ್ರಕಾಶನ ವರ್ಷ–2004
ಪ್ರಕಾಶಕರು– ಪೂರ್ಣಪ್ರಜ್ಞಸಂಶೋಧನ ಮಂದಿರಂ, ಬೆಂಗಳೂರು–28

16. ಶ್ರೀಕೃಷ್ಣಾವಧೂತರ **ಮಧ್ವಸಿದ್ಧಾಂತಸಾರ**
ಪುಟ ಸಂ.50 ಪ್ರಕಾಶನ ವರ್ಷ–2005
ಪ್ರಕಾಶಕರು– ಶ್ರೀರಾಘವೇಂದ್ರಮಠ ಮಂತ್ರಾಲಯ

17. ಶ್ರೀಕೃಷ್ಣಾವಧೂತರ **ಅಧ್ಯಾತ್ಮ ನವನೀತಮ್**
ಪುಟ ಸಂ.60 ಪ್ರಕಾಶನ ವರ್ಷ–2005
ಪ್ರಕಾಶಕರು– ಶ್ರೀರಾಘವೇಂದ್ರ ಮಠ, ಮಂತ್ರಾಲಯ

18. **ಸ್ಮೃತಿಮಾಣಿಕ್ಯ ಸಂಗ್ರಹ**
ಪುಟ ಸಂ–275 ಪ್ರಕಾಶನ ವರ್ಷ– 2005
ಪ್ರಕಾಶಕರು– ಪೂರ್ಣಪ್ರಜ್ಞಸಂಶೋಧನ ಮಂದಿರಂ, ಬೆಂಗಳೂರು–28

19. **ಬೃಹದಾರಣ್ಯಕೋಪನಿಷದ್ ಖಂಡಾರ್ಥಃ**
ಪುಟ ಸಂ.289 ಪ್ರಕಾಶನ ವರ್ಷ– 2005
ಪ್ರಕಾಶಕರು– ಪೂರ್ಣಪ್ರಜ್ಞಸಂಶೋಧನ ಮಂದಿರಂ,ಬೆಂಗಳೂರು–28

20. **ಬೃಹದಾರಣ್ಯಕೋಪನಿಷದ್ಭಾಷ್ಯಮ್ (ಶ್ರೀಭಾವಬೋಧ ಸಹಿತಮ್)**
ಪುಟ ಸಂ – 890 ಪ್ರಕಾಶನ ವರ್ಷ – 2006
ಪ್ರಕಾಶಕರು– ಪೂರ್ಣಪ್ರಜ್ಞಸಂಶೋಧನ ಮಂದಿರಂ,ಬೆಂಗಳೂರು–28

21. **ತಾರತಮ್ಯ ಪ್ರಬಂಧಾಃ**
(32 ತಾರತಮ್ಯ ಸಿದ್ಧಾಂತಕ್ಕೆ ಸಂಬಂಧಿಸಿದ ಅಪೂರ್ವ ಕೃತಿಗಳ ಪ್ರಕಾಶನ)
ಪುಟ ಸಂ – 608 ಪ್ರಕಾಶನ ವರ್ಷ– 2006
ಪ್ರಕಾಶಕರು– ಪೂರ್ಣಪ್ರಜ್ಞಸಂಶೋಧನ ಮಂದಿರಂ, ಬೆಂಗಳೂರು– 28

22. ಕುಮಾರವರದಗುರು ವಿರಚಿತ **ತತ್ತ್ವತ್ರಯಚುಲುಕಸಂಗ್ರಹ,**
ಶ್ರೀಮಲ್ಲೋಕಾಚಾರ್ಯಮುನಿ ವಿರಚಿತ **ತತ್ತ್ವತ್ರಯಮ್,**
ಶ್ರೀಕೃಷ್ಣಾವಧೂತ ವಿರಚಿತ **ವಿಶಿಷ್ಟಾದ್ವೈತನವನೀತಮ್**
ಪುಟ ಸಂ–153 ಪ್ರಕಾಶನ ವರ್ಷ 2006
ಪ್ರಕಾಶಕರು– ಪೂರ್ಣಪ್ರಜ್ಞಸಂಶೋಧನ ಮಂದಿರಂ, ಬೆಂಗಳೂರು– 28

## ಕನ್ನಡದಲ್ಲಿ ತರ್ಜುಮೆ ಮಾಡಿದ ಗ್ರಂಥಗಳು

1. ಶ್ರೀಮಧ್ವಾಚಾರ್ಯರ **ಯತಿಪ್ರಣವಕಲ್ಪ**
ಪುಟ ಸಂ. 60 ಪ್ರಕಾಶನ ವರ್ಷ – 1981
ಪ್ರಕಾಶಕರು ಶ್ರೀರಾಘವೇಂದ್ರಾಶ್ರಮ, ಮಲ್ಲೇಶ್ವರಂ, ಬೆಂಗಳೂರು

2. ಶ್ರೀಮಧ್ವಾಚಾರ್ಯರ **ತತ್ವದ್ಯೋತ**
ಪುಟ ಸಂ.150 ಪ್ರಕಾಶನ ವರ್ಷ 1984
ಪ್ರಕಾಶಕರು– ಶ್ರೀರಾಘವೇಂದ್ರ ಆಶ್ರಮ, ಮಲ್ಲೇಶ್ವರಂ, ಬೆಂಗಳೂರು

3. ಶ್ರೀಮಧ್ವಾಚಾರ್ಯರ **ಅಥರ್ವಣೋಪನಿಷದ್ಭಾಷ್ಯಮ್**
ಪುಟ ಸಂ– 200. ಪ್ರಕಾಶನ ವರ್ಷ 1984
ಪ್ರಕಾಶಕರು–ಶ್ರೀರಾಘವೇಂದ್ರ ಆಶ್ರಮ,ಮಲ್ಲೇಶ್ವರಂ, ಬೆಂಗಳೂರು

4. ಶ್ರೀ ಮಧ್ವಾಚಾರ್ಯರ **ಕಥಾಲಕ್ಷಣಮ್**
ಪುಟ ಸಂ. 80 ಪ್ರಕಾಶನ ವರ್ಷ 1994
ಪ್ರಕಾಶಕರು– ಅಖಿಲಭಾರತ ಮಾಧ್ವಮಹಾಮಂಡಲ, ಬೆಂಗಳೂರು.

5. **ಸೂತ್ರಪ್ರಸ್ಥಾನ – ಶ್ರೀಗುರುರಾಜರು**
ಪುಟ ಸಂ. 40 ಪ್ರಕಾಶನ ವರ್ಷ– 1995
ಪ್ರಕಾಶಕರು– ಶ್ರೀರಾಘವೇಂದ್ರಸಪ್ತಾಹಕಾರ್ಯಾಲಯ. ಮಂತ್ರಾಲಯ

6. ಶ್ರೀಮಧ್ವಾಚಾರ್ಯರ **ಸದಾಚಾರಸ್ಮೃತಿ**
ಪುಟ ಸಂ. 100 ಪ್ರಕಾಶನ ವರ್ಷ– 1998
ಪ್ರಕಾಶಕರು– ಅಖಿಲಭಾರತ ಮಾಧ್ವಮಹಾಮಂಡಲ, ಬೆಂಗಳೂರು

7. **ಶ್ರೀಹರಿ ವಾಯುಸ್ತುತಿ**
ಪುಟ ಸಂ.80 ಪ್ರಕಾಶನ ವರ್ಷ–1999
ಪ್ರಕಾಶಕರು– ಕೋಲಾರ ಜಗನ್ನಾಥ ರಾವ್ ಮೈಸೂರು

8. ಶ್ರೀರಾಘವೇಂದ್ರತೀರ್ಥರ **ಮುಂಡಕ ಖಂಡಾರ್ಥ**
ಪುಟ ಸಂ.200 ಪ್ರಕಾಶನ ವರ್ಷ– 2002
ಪ್ರಕಾಶಕರು– ಶ್ರೀರಾಘವೇಂದ್ರ ಸಂಶೋಧನಕೇಂದ್ರ, ಬೆಂಗಳೂರು

9. **ಚತುರ್ದಶಸ್ತೋತ್ರಾಣಿ**
ಪುಟ ಸಂ. 150 ಪ್ರಕಾಶನ ವರ್ಷ– 2002
ಪ್ರಕಾಶಕರು– ಡಾ|| ಎ.ವಿ.ನಾಗಸಂಪಿಗೆ,
ನಿರ್ದೇಶಕರು ಪೂರ್ಣಪ್ರಜ್ಞಸಂಶೋಧನ ಮಂದಿರಂ

10. ಅನ್ನಂಭಟ್ಟನ **ತರ್ಕಸಂಗ್ರಹ** – ಕನ್ನಡ ಭಾಷಾಂತರ ವಿವರಣೆ ಸಹಿತ
(ಮೈಸೂರಿನ, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯದ ಎಂ.ಎ.(ಸಂಸ್ಕೃತ) ಪ್ರಥಮವರ್ಷ ಪಠ್ಯ ಪುಸ್ತಕವಾಗಿ ಸ್ವೀಕೃತವಾಗಿದೆ)
ಪುಟ.ಸಂ– 252 – ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮೈಸೂರು– 5

11. **ಸೂತ್ರಪ್ರಸ್ಥಾನಕ್ಕೆ ಶ್ರೀರಾಘವೇಂದ್ರರ ಕೊಡುಗೆ**
ಪುಟ ಸಂ. 130 ಪ್ರಕಾಶನ ವರ್ಷ –2004
ಪ್ರಕಾಶಕರು– ಶ್ರೀರಾಘವೇಂದ್ರಮಠ, ಪ್ರಕಾಶನಗರ, ಬೆಂಗಳೂರು

12. **ಸರ್ವಸಮರ್ಪಣ ಗದ್ಯಮ್**
ಪು.ಸಂ. 60 ಪ್ರಕಾಶನ ವರ್ಷ –2005
ಪ್ರಕಾಶಕರು– ಶ್ರೀರಾಘವೇಂದ್ರ ಮಠ, ಎನ್. ಆರ್.ಕಾಲೋನಿ, ಬೆಂಗಳೂರು.

13. **ಕಾಠಕೋಪನಿಷದ್ ಖಂಡಾರ್ಥ**
ಪುಟ ಸಂ. 100 ಪ್ರಕಾಶನ ವರ್ಷ –2006
ಪ್ರಕಾಶಕರು– ಶ್ರೀರಾಘವೇಂದ್ರ ಮಠ, ಎನ್.ಆರ್.ಕಾಲೋನಿ, ಬೆಂಗಳೂರು

14. **ಶ್ರೀಮಹಾಭಾರತತಾತ್ಪರ್ಯನಿರ್ಣಯ** (4–7 ಅಧ್ಯಾಯಗಳು)
ಪುಟ ಸಂ. 200 ಪ್ರಕಾಶನ ವರ್ಷ –2007
ಪ್ರಕಾಶಕರು– ಶ್ರೀರಾಘವೇಂದ್ರ ಮಠ, ಎನ್.ಆರ್.ಕಾಲೋನಿ, ಬೆಂಗಳೂರು

15. **ಮತತ್ರಯಸಮೀಕ್ಷಾ**
ಪುಟ ಸಂ. 254 ಪ್ರಕಾಶನ ವರ್ಷ –2008
ಪ್ರಕಾಶಕರು– ಶ್ರೀರಾಘವೇಂದ್ರ ದರ್ಶನ ಕೇಂದ್ರ ಕೆಂಗೇರಿ ಉಪನಗರ, ಬೆಂಗಳೂರು



ಪಾಠ ಪ್ರವಚನ -ಸಂಶೋಧನೆ- ಶಾಸ್ತ್ರಗ್ರಂಥಗಳ ಅನುವಾದಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡ 30ಕ್ಕೂ ಹೆಚ್ಚು ಕೃತಿಗಳನ್ನು ಹೊರತಂದ ಡಾ। ಆನಂದತೀರ್ಥ ನಾಗಸಂಪಿಗೆಯವರನ್ನು ನಾವು ತುಂಬುಹೃದಯದಿಂದ ಆಶೀರ್ವದಿಸುತ್ತೇವೆ. ಈ ಕೃತಿಯಲ್ಲಿ ಅವರ ವ್ಯಾಪಕ ಅಧ್ಯಯನ ಪ್ರತಿಫಲನ ಗೊಂಡಿದೆ. ಪ್ರಮಾಣ-ಪ್ರಮೇಯಗಳನ್ನು ತಿಳಿಯಾಗಿ ವಿವರಿಸಲು ಉತ್ತಮ ಪ್ರಯತ್ನ ಮಾಡಿದ್ದಾರೆ ಸುಜನರು ಇದರಿಂದ ಉತ್ತಮ ಜ್ಞಾನ ಪಡೆಯುವಂತಾಗಲಿ ಎಂದು ಆಶಿಸುತ್ತೇವೆ.

-ಶ್ರೀವಿಶ್ವೇಶತೀರ್ಥ ಶ್ರೀಪಾದರು

ಡಾ। ಆನಂದತೀರ್ಥ ನಾಗಸಂಪಿಗೆಯವರ ಪ್ರಕೃತ ಕೃತಿಯು ಇಂತಹ ಮನೋಧರ್ಮ ಮತ್ತು ಆಚರಣೆಗಳಿಗೆ ಪ್ರೇರಣೆ ನೀಡುತ್ತದೆ. ಅವರು ಮಾಡಿರುವ ಮತತ್ರಯಾಚಾರ್ಯರ ಗ್ರಂಥಗಳ ಅಧ್ಯಯನ-ವಿಶ್ಲೇಷಣೆಗಳು ಅದ್ಭುತವಾಗಿವೆ. ಅವರ ಜೀವಿತಕಾರ್ಯಗಳು ಶ್ರೀಹರ್ಷನು ಹೇಳಿರುವ 'ಅಧೀತಿ- ಬೋಧ- ಆಚರಣ- ಪ್ರಚಾರಣ'ಗಳಿಂದ ಸುರಭಿತವಾಗಿ ಸಫಲ ವಾಗಲಿ.

-ಶ್ರೀಶ್ರೀ ರಂಗಪ್ರಿಯಶ್ರೀಪಾದಶ್ರೀಃ

ಶ್ರೀ ಶಂಕರಾಚಾರ್ಯರ ಸೂತ್ರಭಾಷ್ಯ, ಗೌಡಪಾದಕಾರಿಕೆ ಹಾಗೂ ಶಂಕರಾಚಾರ್ಯರ ಭಾಷ್ಯ, ಪಂಚಪಾದಿಕಾ, ಭಾಮತೀವ್ಯಾಖ್ಯಾನ, ಸಂಕ್ಷೇಪ ಶಾರೀರಕ ಮೊದಲಾದ ಗ್ರಂಥಗಳಿಂದ ಉಲ್ಲೇಖಗಳನ್ನು ಸಂಗ್ರಹಿಸಿ ಅದ್ವೈತ ದರ್ಶನವನ್ನು ಸಮರ್ಥವಾಗಿ ಪ್ರತಿಪಾದಿಸಿದ್ದಾರೆ. ಸ್ವತಃ ದ್ವೈತ ಸಂಪ್ರದಾಯಕ್ಕೆ ಸೇರಿದವರಾದ ಡಾ। ಎ.ವಿ.ನಾಗಸಂಪಿಗೆಯವರು ಹೃದಯದ ಔದಾರ್ಯ ದಿಂದ ಅದ್ವೈತದರ್ಶನವನ್ನು ಪ್ರಮಾಣಬದ್ಧವಾಗಿ ಪ್ರತಿಪಾದಿಸಿರುವುದು ತುಂಬ ಸಂತೋಷದಾಯಕವಾದ ಸಂಗತಿಯಾಗಿದೆ. ಇದಕ್ಕಾಗಿ ನಾನು ಡಾ। ನಾಗಸಂಪಿಗೆಯವರನ್ನು ತುಂಬು ಹೃದಯದಿಂದ ಪ್ರಶಂಸಿಸುತ್ತೇನೆ.

-ವಿದ್ವಾನ್ ಶೇಷಾಚಲ ಶರ್ಮಾ

ರಾಷ್ಟ್ರಪತಿಪ್ರಶಸ್ತಿ ವಿಜೇತರು

